ಶ್ರೀಲಕ್ಷ್ಮೀನಾರಾಯಣ ಪ್ರಸನ್ನ

# ಸತ್-ಕಥಾ

-:ಬರೆದವರು:-

ವೈ. ಭೀಮರಾವ ಸ್ವಾಮಿರಾವ ಕಮಲಾಪೂರ

ತಿದ್ದಿ ಬೆಳೆಸಿದ ೨ನೆಯ ಆವೃತ್ತಿ

೨೦೦೦ ಪ್ರತಿಗಳು



೧೯೩೧

ಕ್ರಯ ೧-೮-೦

ಪ್ರಕಾಶಕರು:— ಹಣಮಂತರಾವ ಭೀಮರಾವ ಕಮಲಾಪೂರ, ಧಾರವಾಡ

ಮುದ್ರಕರು:— ಅಣ್ಣಾಚಾರ್ಯ ಬಾಳಾಚಾರ್ಯ ಹೊಸಕೇರಿ

ಮುದ್ರಾಲಯ:— ವಿಜಯ ಮುದ್ರಾಲಯ, ಧಾರವಾಡ

# ಪ್ರಸ್ತಾವನೆ



ಧರ್ಮವು ಸಮಾಜದ ಆತ್ಮವು. ಅದು ಆತ್ಮನಂತೆ ಅದೃಶ್ಯವಾ ಇದ್ದು, ಸಮಾಜದ ಸರ್ವವ್ಯಾಪಾರಗಳನ್ನು ನಡಿಸುತ್ತಿರುತ್ತದೆ. ಯಾವದೊಂದು ಸಮಾಜದೊಳಗಿನ ಧಾರ್ಮಿಕ ಕಲ್ಪನೆಗಳ ಮೇಲಿಂದ ಅದರ ಸುಧಾರಣೆಯ ಮಟ್ಟನ್ನು ನಾವು ಕಂಡುಹಿಡಿಯಬಹುದು; ಅದರ ಸಂಸ್ಕೃತಿ ಪ್ರವಾಹದ ದಿಶೆಯನ್ನು ನಿಶ್ಚಯಿಸಬಹುದು. ಧಾರ್ಮಿಕ ಸತ್ಪುರುಷರೆಂದರೆ, ಆ ಧರ್ಮತತ್ವಗಳನ್ನು ಜ್ಞಾನದಿಂದ ಕಂಡು ಹಿಡಿದು, ಅವುಗಳನ್ನು ಸಂಪೂರ್ಣವಾಗಿ ಪಚನಮಾಡಿಕೊಂಡು, ಭಕ್ತಿಯಿಂದ ತಮ್ಮ ಜೀವನದ ಪ್ರತಿಯೊಂದು ಕೃತ್ಯದಲ್ಲಿ ಆ ತತ್ವಗಳನ್ನು ಆಚರಿಸಿ ತೋರಿಸುವವರು. ದೇಶದಲ್ಲಿ ಧರ್ಮಗ್ಲಾನಿಯಾದಾಗ, ಇಂತಹ ಸತ್ಪುರುಷರು ಉದಯಹೊಂದಿ ಜನತೆಯಲ್ಲಿ ಚೈತನ್ಯವನ್ನುಂಟುಮಾಡುತ್ತಾರೆ. ಯಾವ ಸಮಾಜದಲ್ಲಿ ಅಥವಾ ಮತದಲ್ಲಿ ಇಂತಹ ಸತ್ಪುರುಷರು ಹೆಚ್ಚೋ ಆ ಸಮಾಜವು ಅಥವಾ ಮತವು ಹೆಚ್ಚು ಸುಸಂಸ್ಕೃತವಾದುದೆಂದು ತಿಳಿಯಲು ಅಡ್ಡಿ ಇಲ್ಲ. ನಮ್ಮ ವೈಷ್ಣವ ಮತವು ಈಗಿನ ರೂಪದಲ್ಲಿ ಪುನರುಜ್ಜೀವನವಾಗಿ ೭-೮ ನೂರು ವರ್ಷಗಳಾದವು. ಶ್ರೀಮನ್ಮಧ್ವಾಚಾರ್ಯರು ಇದನ್ನು ಸ್ಥಾಪಿಸಿದರೇನೋ ಸರಿ. ಆದರೆ ಅವರ ತರುವಾಯ, ನೂರಾರು ಸತ್ಪುರುಷರು ಹುಟ್ಟಿ, ಕಾಲಕಾಲಕ್ಕೆ ಮಲಿನವಾಗುತ್ತ ಬಂದಿರುವ ವೈಷ್ಣವ ಸಮಾಜದಲ್ಲಿ ಆಯಾ ಕಾಲಕ್ಕೆ ತಕ್ಕಂತೆ ಹೊಸ ಚೈತನ್ಯವನ್ನು ತುಂಬದಿದ್ದರೆ ಈ ಮತವು ಇಷ್ಟು ದಿವಸ ಬಾಳುತ್ತಿರಲಿಲ್ಲ. ಇಂತಹ ಸತ್ಪುರುಷರ ಚರಿತೆಯು ನಮ್ಮನ್ನು ಪುನೀತರನ್ನಾಗಿ ಮಾಡುವುದು ಮಾತ್ರವೇ ಅಲ್ಲ. ಅದು ನಮಗೆ ಮಾರ್ಗದರ್ಶಕವೂ ಆಗಿರುವುದು. ಈ ಪುಸ್ತಕದಲ್ಲಿ ಇಂತಹ ಸತ್ಪುರುಷರ ಕಥೆಗಳು ಅಡಕವಾಗಿರುವದರಿಂದ ಇದಕ್ಕೆ ಸತ್ಕಥೆ

ಅರ್ಥಾತ್, ಈ ಪುಸ್ತಕದಲ್ಲಿ ಯಾವತ್ತು ಸದ್ವೈಷ್ಣವ ಮಹಾಪು ರುಷರ ಕಥೆ ಅಥವಾ ಚರಿತೆಗಳು ಬರುವುದು ಶಕ್ಯವಿಲ್ಲ. ಏಕೆಂದರೆ, ಇನ್ನೂ ಅನೇಕ ಚರಿತೆಗಳನ್ನು ಸಂಗ್ರಹಿಸಬೇಕಾಗಿದೆ; ಪರಂಪರಾ ಗತ ಕಥೆಗಳನ್ನು ಕಲೆಹಾಕಬೇಕಾಗಿದೆ. ಆ ಕಾರ್ಯವು ಒಬ್ಬಿಬ್ಬ ರಿಂದಾಗತಕ್ಕದ್ದಲ್ಲ. ಅಲ್ಲದೆ, ಈ ಪುಸ್ತಕದಲ್ಲಿ ಬಂದ ಚರಿತ್ರೆಗಳು ಪೂರ್ಣವಾಗಿಯೂ ಇಲ್ಲ. ಶ್ರೀ. ಕಮಲಾಪುರ ಭೀಮರಾಯರು ಬಹಳ ಪರಿಶ್ರಮಪಟ್ಟು ೩೦–೩೫ ವರ್ಷಗಳ ಹಿಂದೆ ಕೆಲವು ಚರಿತೆಗ ಳನ್ನೂ ಕಥೆಗಳನ್ನೂ ಸಂಗ್ರಹಿಸಿ ಮುದ್ರಿಸಿದರು. ಅವರ ಚಿರಂಜೀವ ರಾದ ಶ್ರೀ. ಹಣಮಂತರಾಯರು ಅವಕ್ಕೆ ಮತ್ತೂ ಕೆಲವು ಕಥೆಗಳನ್ನು ಕೂಡಿಸಿ ಈ ಪುಸ್ತಕವನ್ನು ಮುದ್ರಿಸಿರುವರು. ಇದರಲ್ಲಿಯ ಕೆಲವು ಸಂಗತಿಗಳು ಅಪೂರ್ಣವಾಗಿರಬಹುದು; ಕೆಲವುಗಳಲ್ಲಿ ತಪ್ಪುಗಳಿರ ಬಹುದು; ಮತ್ತೆ ಕೆಲವುಗಳ ಬಗ್ಗೆ ಮತಭೇದವೂ ಇರಬಹುದು. ಆದರೆ ಶ್ರೀ. ಭೀಮರಾಯರಾಗಲಿ ಶ್ರೀ. ಹಣಮಂತರಾಯರಾಗಲಿ ತಪ್ಪು ಗಳನ್ನು ತಿದ್ದಿಕೊಳ್ಳಬಾರದೆಂಬ ದೃಷ್ಟಿಯಿಂದಾಗಲಿ, ವಾದವನ್ನು ಹೂಡಬೇಕೆಂಬ ದೃಷ್ಟಿಯಿಂದಾಗಲಿ ಬರೆದಿಲ್ಲವೆಂಬುದು ಮಾತ್ರ ನಿರ್ವಿ ವಾದವಿದೆ. ಸಾರಾಂಶ, ಇದು ಸತ್ಪುರುಷರ ಚರಿತ್ರೆಗಳಿಗೆ ತಳಹದಿ ಮಾತ್ರವು. ಆದುದರಿಂದ ಈ ಪುಸ್ತಕಕ್ಕೆ 'ಸತ್ಕಥೆ' ಎಂದು ಹೆಸರಿಟ್ಟದ್ದು ಒಂದು ದೃಷ್ಟಿಯಿಂದ ವಿಹಿತವೇ ಎನ್ನಬಹುದು.

ಧರ್ಮದ ಇತಿಹಾಸವೆಂದರೆ ಸಾಮಾನ್ಯತಃ ಅದರಲ್ಲಿ ಹುಟ್ಟಿದ ಸತ್ಪುರುಷರ ಇತಿಹಾಸವೆಂದೇ ಹೇಳಬಹುದು. ಏಕೆಂದರೆ, ಧರ್ಮವು ಅದೃಷ್ಟವಾದುದರಿಂದ, ಭೌತಿಕಶಾಸ್ತ್ರದ ಪ್ರಯೋಗಗಳಂತೆ ಅದರ ತತ್ವಗಳನ್ನು ಸಪ್ರಯೋಗವಾಗಿ ಸಿದ್ಧಪಡಿಸಿ ತೋರಿಸಲು ಸಾಧ್ಯವಿಲ್ಲ. ಆ ತತ್ವಗಳನ್ನು ಆಚರಣೆಯಲ್ಲಿ ತಂದಿರುವ ಮಹಾಪುರುಷರ ಜೀವನ ಗಳೇ ಆ ತತ್ವಗಳ ಪ್ರಯೋಗಗಳು, ಅಥವಾ ಉದಾಹರಣೆಗಳು. ಅಪ ರೋಕ್ಷ ಜ್ಞಾನಿಗಳ ಅನುಭವ ಮತ್ತು ಆಚಾರ ಇವುಗಳ ಮೇಲೆಯೇ ಸಾಮಾನ್ಯ ಜನತೆಗೆ ಅವಲಂಬಿಸಬೇಕಾಗುತ್ತದೆ. ಆದುದರಿಂದ ಮಿಕ್ಕ ವಿಷಯಗಳಲ್ಲಿಗಿಂತಲೂ, ಧಾರ್ಮಿಕ ವಿಷಯದಲ್ಲಿ ಸತ್ಪುರುಷರ ಚರಿ

ತ್ರಿಗೆ ಹೆಚ್ಚು ಬೆಲೆ ಇರುತ್ತದೆ. ಮಹಾಭಾರತ ಮತ್ತು ಬುದ್ಧಜಾತಕ ಮುಂತಾದವುಗಳಲ್ಲಿ ಅಡಕವಾಗಿರುವ ಕಥೆಗಳು ಈ ಸ್ವರೂಪದವು. ಅವುಗಳಲ್ಲಿ ಸತ್ಪುರುಷರ ಜೀವನದ ಐತಿಹಾಸಿಕ ಸಂಗತಿಗಳಿಗಿಂತಲೂ ಅವರ ಜೀವನದ ರಹಸ್ಯವನ್ನು ತಿಳಿಸುವದರ ಕಡೆಗೆ ಪ್ರವೃತ್ತಿ ಹೆಚ್ಚು. ಈ ರೀತಿಯಾಗಿ ಸತ್ಪುರುಷರ ಜೀವನ ರಹಸ್ಯವನ್ನು ತಿಳಿಸುವಂತೆ ಕಥೆಗಳನ್ನು ಬರೆಯುವ ಸಂಪ್ರದಾಯ ಈಗ ನಿಂತುಹೋಗಿದೆ. ಇದು ಅವನತಿಯ ಒಂದು ಲಕ್ಷಣವು. ಯಾವನೊಬ್ಬ ಸತ್ಪುರುಷನ ಜೀವನ ಚರಿತ್ರೆಯೆಂದರೆ ಆತನ ಗೃಹಸಂಸಾರದ ಒಣಸಂಗತಿಗಳಲ್ಲ, ಆತನ ವಿಚಾರ ಸಂಸಾರದ ಹಸಿಸಂಗತಿಗಳು. ಆತನ ಆಯುಷ್ಯದ ಧ್ಯೇಯವಾವುದು, ಅದನ್ನು ಸಾಧಿಸುವುದಕ್ಕೆ ಆತನು ಎಷ್ಟರಮಟ್ಟಿಗೆ ಪ್ರಯತ್ನಪಟ್ಟನು, ಎಷ್ಟು ಸ್ವಾರ್ಥತ್ಯಾಗ ಮಾಡಿದನು. ಇವೇ ಮೊದಲಾದವುಗಳ ಮೇಲಿಂದ ಆತನ ವಿಚಾರಪ್ರವಾಹವನ್ನು ಮೂಲದಿಂದ ಕೊನೆಯವರೆಗೆ ಕಂಡುಹಿಡಿಯುವುದು.

ಹಿಂದಕ್ಕೆ ಕಥೆ ಅಥವಾ ಚರಿತ್ರೆಗಳನ್ನು ಬರೆಯುವುದರಲ್ಲಿ ಮೇಲ್ಕಾಣಿಸಿದ ಉದ್ದೇಶವು ಮುಖ್ಯವಾಗಿತ್ತು. ಆದರೆ ಈಗಿನ ಕಾಲದಲ್ಲಿ, ಮನುಷ್ಯನ ಆಯುಷ್ಯದಲ್ಲಿಯ ಮಿಕ್ಕ ಐತಿಹಾಸಿಕ ಸಂಗತಿಗಳನ್ನು ದುರ್ಲಕ್ಷಿಸಿಯೂ ಪ್ರಯೋಜನವಿಲ್ಲ. ಈ ತರಹದ ಐತಿಹಾಸಿಕ ಸಂಗತಿಗಳು ಆತನ ಜೀವನರಹಸ್ಯಕ್ಕೆ ಕವಚಗಳಿದ್ದಂತೆ ಇರುತ್ತವೆ. ಅವುಗಳಿಂದ ಎಷ್ಟೋ ವಾದವಿವಾದಾತ್ಮಕ ಪ್ರಶ್ನಗಳ ಮೇಲೆ ಬೆಳಕು ಬೀಳುತ್ತದೆ. ಈ ರೀತಿಯಾಗಿ ವಿಶ್ವಸನೀಯವಾಗಿ ಐತಿಹಾಸಿಕ ಟಿಪ್ಪಣೆಗಳನ್ನು ಬರೆದಿಡುವ ಸಾಂಪ್ರದಾಯವು ನಮ್ಮಲ್ಲಿ ಸಾಕಷ್ಟು ಇಲ್ಲದಿರುವದರಿಂದ, ಸಮಾಜದಲ್ಲಿ ನಿಷ್ಕಾರಣವಾಗಿ ಅನೇಕ ಬಿರುಗಾಳಿಗಳೇಳುವುದಕ್ಕೆ ಆಸ್ಪದವಾಗಿದೆ. ಮೇಲಾಗಿ, ಚಿತ್ರಕ್ಕೆ ಹೇಗೆ ಹಿಂದಿನ ಭೂಮಿಕೆಯೋ ಹಾಗೆ ಚರಿತ್ರೆಗೆ ಈ ಐತಿಹಾಸಿಕ ಸಂಗತಿಗಳು ಭೂಮಿಕೆಗಳು. ಜೀವನಿಗೆ ಹೇಗೆ ಜಡದೇಹದ ಆವಶ್ಯಕತೆಯೋ ಹಾಗೆ ಚರಿತೆಗಳಿಗೆ ಈ ಐತಿಹಾಸಿಕ ಸಂಗತಿಗಳ ಆವಶ್ಯಕತೆ. ಜೀವ ಮತ್ತು ಜಡ ಇವೆರಡೂ ಅನಾದಿಯೆಂದು ಪ್ರತಿಪಾದಿಸುವ ವೈಷ್ಣವರಂತೂ ಈ ಮಾತನ್ನು ದುರ್ಲಕ್ಷಿಸಕೂಡದು.

ನಮ್ಮ ಧರ್ಮದಲ್ಲಿ ಆಚಾರಕ್ಕೆ ಇಷ್ಟು ಮಹತ್ವವನ್ನು ಕೊಡುವ ಉದ್ದೇಶವಾದರೂ ಇದೇ. ಸತ್ಪುರುಷರ ಆಚಾರವು ಸಾಮಾನ್ಯಜನತೆಗೆ ದೀಪಕಂಬವು. ಆದುದರಿಂದ, ಲೋಕಸಂಗ್ರಹ ಮಾಡಲಿಚ್ಛಿಸುವವರು "ನಾವೇನು? ಸಿದ್ಧರು, ಮುಕ್ತರು, ನಮಗೆ ಆಚಾರದಿಂದೇನು ಪ್ರಯೋಜನ?" ಎಂದು ತುಚ್ಛೀಕರಿಸಿದರೆ ಪ್ರಯೋಜನವಿಲ್ಲ. **ನಾನವಾಪ್ತಮವಾಪ್ತವ್ಯಂ ವರ್ತ ಏವ ಚ ಕರ್ಮಣಿ** (ಗೀ. ೩. ೨೨) ಎಂಬ ತತ್ವವನ್ನು ಅನೇಕ ಮಹಾಪುರುಷರು ದುರ್ಲಕ್ಷಿಸಿರುವರು. ನಮ್ಮ ಮತದ ಸತ್ಪುರುಷರು ಹಾಗೆ ದುರ್ಲಕ್ಷಿಸಿದುವುದಿಲ್ಲವೆಂಬುದು ಮಾಧ್ವಮತದ ಒಂದು ವಿಶೇಷವು.

ಆದರೆ, ಕೇವಲ ಆಚಾರಕ್ಕೆ ಅಂಟಿಕೊಂಡೂ ಪ್ರಯೋಜನವಿಲ್ಲ. ಹಿಂದೆ ಹೇಳಿದಂತೆ, ಆಚಾರವು ಧರ್ಮಕ್ಕೆ ಕವಚವಿದ್ದಂತೆ. ತಿರುಳನ್ನು ಸಂರಕ್ಷಿಸುವ ಪರಟೆಯದು. ತಿರುಳಿಲ್ಲದ ಪರಟೆಯಿಂದೇನು ಪ್ರಯೋಜನ? ಆದುದರಿಂದ, ತಿರುಳನ್ನು ಸಂರಕ್ಷಿಸುವ ನಮ್ಮ ಮೂಲ ಉದ್ದೇಶವನ್ನು ನಾವು ಮರೆಯಕೂಡದು. ಆದಕಾರಣ ಅಧಿಕಾರಿಗಳಾದವರು ಆಚಾರವನ್ನು ಒಳವಿಚಾರಕ್ಕೆ ಅನ್ವಯಿಸಿಕೊಳ್ಳುತ್ತಾರೆ. ನಮ್ಮ ವೈಷ್ಣವರಲ್ಲಿ ಅನೇಕ ಸತ್ಪುರುಷರು ಅನೇಕ ಸಂದರ್ಭಗಳಲ್ಲಿ ರೂಢಿಯಲ್ಲಿರುವ ಆಚಾರವನ್ನು ಮುರಿದು ಒಳವಿಚಾರವನ್ನು ಸಂರಕ್ಷಿಸಿಕೊಂಡ ಉದಾಹರಣೆಗನ್ನು ನಾವು ಈ ಪುಸ್ತಕದಲ್ಲಿ ಕಾಣಬಹುದು. ಶ್ರೀ ಅಕ್ಷೋಭ್ಯತೀರ್ಥರು ತಮ್ಮ ಶಂಖೋದಕದಿಂದ ಬ್ರಹ್ಮಹತ್ಯದೋಷಯುಕ್ತನಾದವನನ್ನು ಶುದ್ಧಗೊಳಿಸುವ ಸಾಹಸ ಮಾಡಿದರು. ಗಯೆಯಲ್ಲಿ ಗಯಾವಾಡರ ಪುಂಡಾಟಿಕೆಯು ಹೆಚ್ಚಿದಾಗ, ರೂಢಿಯನ್ನು ಮುರಿದು ಶ್ರೀ ವಿದ್ಯಾಧೀಶರು (ನಂ. ೧೬) ಶ್ರೀ ಸತ್ಯಬೋಧರು (ನಂ ೨೫) ಮತ್ತು ಶ್ರೀ ಸತ್ಯಸಂಧರು (ನಂ. ೨೬) ಮಠದಲ್ಲಿ ಶ್ರೀ ರಾಮದೇವರ ಪಾದದಲ್ಲಿಯೇ ಪಿಂಡಪ್ರದಾನವನ್ನು ಮಾಡುವ ಧೈರ್ಯವನ್ನು ತೋರಿಸಿದರು. ಶ್ರೀ ರಘುನಾಥತೀರ್ಥರು (ನಂ. ೧೩) ಭಾಗವತ ಸಪ್ತಾಹದಿಂದ ಅನೇಕ ಪಾಪಗಳು ಭಸ್ಮೀಭೂತವಾಗುತ್ತವೆಂದು ಹೇಳಿದರು.

ಮಠ, ದೇವಾಲಯ ಮುಂತಾದ ಸಾರ್ವಜನಿಕ ಧಾರ್ಮಿಕ ಸಂಸ್ಥೆಗಳೆಂದರೆ ಧರ್ಮದ ಕವಚಗಳು; ಧರ್ಮದ ತಿರುಳನ್ನು ರಕ್ಷಿಸುವುದು

ಅವುಗಳ ಕರ್ತವ್ಯ. ಆದುದರಿಂದ, ಈ ವಿಷಯದಲ್ಲಿ ವ್ಯಕ್ತಿಗಳಿಗಿಂತಲೂ ಈ ಸಂಸ್ಥೆಗಳನ್ನು ನಡಿಸುವವರ ಮೇಲೆ ಸಾವಿರಪಟ್ಟು ಹೆಚ್ಚು ಹೊಣೆ ಯಿರುತ್ತದೆ. ಅವರ ತಪೋಬಲವು ಅಷ್ಟು ಹೆಚ್ಚಿಗೆ ಇರಬೇಕಾಗುತ್ತದೆ. ಅವರ ವೈರಾಗ್ಯವೃತ್ತಿಯು ಅಷ್ಟು ಅಧಿಕವಾಗಿರಬೇಕಾಗುತ್ತದೆ. ಅವರ ಜ್ಞಾನವು ಅಷ್ಟು ಆಳವಾಗಿರಬೇಕಾಗುತ್ತದೆ. ಸಾರಾಂಶ, ಅವರು ಸಾಮಾನ್ಯ ಜನತೆಯ ಕಣ್ಣಿಗೆ ಪರ್ವತಗಳಂತೆ ಅತ್ಯುನ್ನತರಾಗಿ ತೋರಬೇಕು. ಎಂದರೆ ಮಾತ್ರವೇ ಅವರ ವಿಷಯದಲ್ಲಿ ಪೂಜ್ಯಬು ದ್ಧಿಯು ಹುಟ್ಟುವುದು. ಹಾಗಿಲ್ಲದೆ ಅವರಲ್ಲಿಯೂ ಮಿಕ್ಕ ಸಾಮಾನ್ಯ ಜನತೆಯಲ್ಲಿರುವಂತೆ, ಅಜ್ಞಾನವೂ ಅಸಹಿಷ್ಣುತೆಯೂ ಅಹಂಕಾರವೂ ಆಡಂಬರವೂ ಕಂಡುಬಂದರೆ ಅವರ ವಿಷಯದಲ್ಲಿ ಪೂಜ್ಯಬುದ್ಧಿ ಹುಟ್ಟ ಲಾರದು. ಈ ಸತ್ಯಕಥೆಯನ್ನೋದಿದರೆ, ನಮ್ಮ ಮತಗಳಲ್ಲಿಯ ಮಹಾ ಪುರುಷರೇ ನಮ್ಮ ಮತಕ್ಕೆ ಯಾವಾಗಲೂ ಮಾರ್ಗದರ್ಶಿಗಳಾಗಿದ್ದ ರೆಂದು ಕಂಡುಬರುವುದು.

ಜ್ಞಾನದಿಂದಲೇ ಮೋಕ್ಷವೆಂಬದು ನಮ್ಮ ಧರ್ಮದ ತತ್ವವು, ಎಂದ ಬಳಿಕ ಅಜ್ಞಾನಕ್ಕೆ ಆಸ್ಪದವೆಲ್ಲಿ? 'ಭಿನ್ನಜೀವ ಭಿನ್ನಪ್ರಕೃತಿ' ಎಂಬು ದಾಗಿ ನಮ್ಮ ಮತವು ಸಾರುತ್ತಿರುವಾಗ ಅದರಲ್ಲಿ ಅಸಹಿಷ್ಣುತೆಗೆ ಅವ ಕಾಶವೆಲ್ಲಿ? ಏಕೆಂದರೆ, ಮತ್ತೊಬ್ಬನ ಜೀವನ ಸ್ವರೂಪವು ಇಂಥದೇ ಎಂದು ಹೇಳವ ಅಧಿಕಾರವು ಅಪರೋಕ್ಷಜ್ಞಾನಿಗಳಿಗಲ್ಲದೆ ಅನ್ಯರಿಗೆ ಯಾರಿಗೆ ತಾನೇ ಉಂಟು? 'ಸರ್ವವನ್ನೂ ಮಾಡಿ ಮಾಡಿಸುವವನು ಪರಮಾತ್ಮನು' ಎಂದುಸುರುವ ಧರ್ಮದಲ್ಲಿ ಅಹಂಕಾರವೇಕೆ ಸೇರ ಬೇಕು? ನಾವೆಲ್ಲರೂ ಹರಿದಾಸರೆಂದು ಹೇಳುವ ಮತದಲ್ಲಿ ಆಡಂಬರ ವೆಲ್ಲಿಂದ ಬರಬೇಕು? ಆದುದರಿಂದ ನಮ್ಮ ಧರ್ಮದಲ್ಲಿ ಹೇಳಿದ ಉತ್ಕಟತೆಯೆಂದರೆ ಅಸಹಿಷ್ಣುತೆಯಲ್ಲ, ತಾರತಮ್ಯವೆಂದರೆ ತಿರಸ್ಕಾ ರವಲ್ಲ, ಅಧಿಕಾರವೆಂದರೆ ಅಹಂಕಾರವಲ್ಲ, ಭೇದವೆಂದರೆ ವಿರೋಧ ವಲ್ಲ, ಉಚ್ಚನೀಚಭಾವವೆಂದರೆ ಉಚ್ಚನೀಚಭಾವನೆಯಲ್ಲ, ವಿಷಮ ತೆಯೆಂದರೆ ಸಮತ್ವದ ಅಭಾವವಲ್ಲ- ಎಂಬುದನ್ನು ನಮ್ಮ ವೈಷ್ಣ ವರೂ ಮರೆಯಬಾರದು, ಅನ್ಯರೂ ತಿಳಿದಿರಬೇಕು. " ಆರು ಮುನಿದ

ರೇನು, ನಮಗಿನ್ನಾರು ಒಲಿದರೇನು। ಊರನಾಳುವ ಧೊರೆಗಳು ನಮ್ಮನು ಹೊರಗೆ ಹಾಕಿದರೇನು'' ಎಂದೆನ್ನುವಷ್ಟು ಧೈರ್ಯವೂ ಉತ್ಕಟತೆಯೂ ನಮ್ಮಲ್ಲಿರಬೇಕು. "ಎಡ ಬಲದ ಮನೆಯವರು ಕಡು ಭಾಗವತರು'' ಎಂದೆನ್ನುವಷ್ಟು ಸಹಿಷ್ಣುತೆ ನಮಗೆ ಬೇಕು. "**ನಾಹಂ ಕರ್ತಾ ಹರಿಃಕರ್ತಾ**'' ಎಂಬುವಷ್ಟು ಅಹಂಕಾರವಿಹೀನತೆ ಇರ ಬೇಕು. "ಹರಿದಾಸರ ಸಂಗ ದೊರಕಿತು ಎನಗಿನ್ನೇನಿನ್ನೇನು'' ಎಂದು ಹಾಡುವಷ್ಟು ನಮ್ರತೆ ಇರಬೇಕು. ಈ ತರಹದ ವೈಷ್ಣವ ಸತ್ಪುರುಷರೇ ಜೀವನದ ಮಾದರಿಗಳು.

ಯಾವುದೊಂದು ಮತವು ಜೀವಂತ ಉಳಿದು ವೃದ್ಧಿಯನ್ನು ಹೊಂದಬೇಕಾದರೆ, ಅದರಲ್ಲಿಯ ಸತ್ಪುರುಷರು ಆ ಮತದ ಮುಖ್ಯೋ ದ್ದೇಶವನ್ನು ಸದಾ ಕಣ್ಣಮುಂದೆ ಇಟ್ಟುಕೊಂಡು ಅದನ್ನು ಒಳಗಿನ ಮತ್ತು ಹೊರಗಿನ ಆಘಾತಗಳಿಂದ ಸಂರಕ್ಷಿಸುತ್ತಿರಬೇಕು. ಬೇರೆ ಬೇರೆ ಕಾಲಕ್ಕೆ ಜಗತ್ತಿನಲ್ಲಿ ಬೇರೆ ಬೇರೆ ತೆರಹದ ವಿಚಾರಗಳಿಗೆ ಪ್ರಾಬ ಲ್ಯವಿರುತ್ತದೆ. ಹೊಸಯುಗದ ಜನರ ಮನಸ್ಸಿನಲ್ಲಿ ಹೊಸ ಆಕ್ಷೇಪ ಗಳು ಹುಟ್ಟುವುದು ಸಹಜವಿದೆ, ಅಂಥ ಸಂದರ್ಭಗಳಲ್ಲಿ ಆಯಾ ಮತ ದವರು ಹೊಸ ಆಚಾರಗಳನ್ನೂ ವಿಚಾರಗಳನ್ನೂ ತಮ್ಮ ಮತದ ಮೂಲ ಆಚಾರ ವಿಚಾರಗಳಿಗೆ ಹೋಲಿಸಿ, ಇಷ್ಟವಾದವುಗಳನ್ನು ಮಂಡಿಸುತ್ತಲೂ ಅನಿಷ್ಟವಾದವುಗಳನ್ನು ಖಂಡಿಸುತ್ತಲೂ ಇರಬೇಕು. ಈ ಮಂಡನ ಖಂಡನಗಳು ಬಹುಶಃ (೧) ವಾದವಿವಾದ (೨) ಗ್ರಂಥ ಬರಹ ಇವುಗಳ ರೂಪದಲ್ಲಿ ಪ್ರಕಟವಾಗುತ್ತಿರುತ್ತವೆ. ಈ ಪುಸ್ತಕ ದಲ್ಲಿ ಹೇಳಿದ ಚರಿತ್ರೆಗಳಿಗೆ ವಿಷಯರಾದ ಸತ್ಪುರುಷರನೇಕರಲ್ಲಿ ಇವೆ ರಡೂ ತೆರಹದ ಗುಣಗಳು ಕಂಡುಬರುತ್ತವೆ. ವೈಷ್ಣವ ಮಹಾಪು ರುಷರಲ್ಲಿ, ಶ್ರೀ ಪದ್ಮನಾಭತೀರ್ಥರು (ನಂ. ೨) ಶ್ರೀ ರಾಮಚಂದ್ರತೀ ರ್ಥರು (ನಂ. ೧೦) ಶ್ರೀ ಸತ್ಯಧರ್ಮತೀರ್ಥರು (ನಂ. ೨೮) ಶ್ರೀ ಸತ್ಯಪ ರಾಕ್ರಮತೀರ್ಥರು (ನಂ. ೩೪) ಶ್ರೀ ವ್ಯಾಸರಾಯರು, ಶ್ರೀ ವಾದಿರಾ ಜರು ಇವರೇ ಮುಂತಾದವರು ವಾದದಲ್ಲಿ ಗಟ್ಟಿಗರಾಗಿದ್ದರು. ಹೊಸ ಕಾಲಕ್ಕೆ ತಕ್ಕಂತೆ ಹೊಸ ಹೊಸ ಗ್ರಂಥಗಳನ್ನೂ ಅನೇಕರು ಬರೆದಿರು

ವರು. ಶ್ರೀ ಪದ್ಮನಾಭತೀರ್ಥರು (ನಂ. ೨) ಶ್ರೀ ನರಹರಿತೀರ್ಥರು (ನಂ. ೩) ಶ್ರೀ ಅಕ್ಷೋಭ್ಯತೀರ್ಥರು (ನಂ. ೫) ಶ್ರೀ ಜಯತೀರ್ಥರು (ನಂ. ೬) ಶ್ರೀ ರಘೂತ್ತಮತೀರ್ಥರು (ನಂ. ೧೪) ಶ್ರೀ ವಿದ್ಯಾಧೀಶರು (ನ. ೧೬) ಶ್ರೀ ಸತ್ಯನಾಥರು (ನಂ. ೨೦) ಶ್ರೀ ಸತ್ಯಧರ್ಮರು (ನ. ೨೮) ಉತ್ತರಾದಿ ಮಠದ ಪರಂಪರೆಯಲ್ಲಿ ಗ್ರಂಥಕರ್ತರೆಂದು ಪ್ರಸಿದ್ಧರಾದವರು. ಶ್ರೀ ವ್ಯಾಸರಾಯರು, ಶ್ರೀ ವಾದಿರಾಜ ಸ್ವಾಮಿಗಳು, ಶ್ರೀ ವಿಜಯಿಂದ್ರರು, ಶ್ರೀ ರಾಘವೇಂದ್ರಸ್ವಾಮಿಗಳು, ಶ್ರೀವಿಜಯಧ್ವಜರು ತ್ರಿವಿಕ್ರಮಪಂಡಿತರು ಇವರೇ ಮುಂತಾದ ಸತ್ಪುರುಷರೂ ಅನೇಕ ಮಹತ್ವದ ಗ್ರಂಥಗಳನ್ನು ಬರೆದು ಮಧ್ವಮತದ ಸೇವೆಯನ್ನು ಮಾಡಿರುವರು. ಆದರೆ ಶ್ರೀ ಸತ್ಯಧರ್ಮ (ನಂ. ೨೮) ರಿಂದೀಚೆಗೆ ಈ ಗ್ರಂಥ ಬರೆಯುವ ಸಾಂಪ್ರದಾಯವು ಕಡಿಮೆಯಾಮದು ವಿಷಾದಜನಕವಾದ ಸಂಗತಿಯು. "ಹಿಂದಿನವರೆಲ್ಲವನ್ನೂ ಮಾಡಿಯೇ ಬಿಟ್ಟಿರುವರು, ನಾವು ಹೆಚ್ಚಿನದೇನು ಮಾಡಬೇಕಾಗಿದೆ? ಎಂದೆನ್ನುವುದು ಸರಿಯಲ್ಲ. ಹೊಸವಿಚಾರ ಪ್ರವಾಹದ ದಿಶೆಯನ್ನು ಕಂಡುಹಿಡಿದು ಹೊಸರೂಪದಲ್ಲಿ ಉತ್ತರಕೊಡುವ ಕಾರ್ಯವು ಎಂದೆಂದಿಗೂ ನಡೆಯತಕ್ಕದ್ದೇ; ಅಲ್ಲದೆ ಜನರು ಹೆಚ್ಚು ಅಜ್ಞಾನಿಗಳಾದಂತೆ ಹೆಚ್ಚು ಹೆಚ್ಚು ಗ್ರಂಥಗಳ ಆವಶ್ಯಕತೆಯಿರುತ್ತದೆ. ಆದಕಾರಣವೇ ವೇದಗಳಲ್ಲಿ ಎಲ್ಲ ವೇದಾಂತಜ್ಞಾನವು ಅಡಕವಾಗಿದ್ದರೂ, ಲೋಕೋಪಕಾರಕರ್ಕೋಸ್ಕರ ವೇದವ್ಯಾಸರೇ ಮುಂತಾದವರು ಅನೇಕ ಗ್ರಂಥಗಳನ್ನು ಬರೆದರು.

ಧಾರ್ಮಿಕ ಸತ್ಪುರಷರಲ್ಲಿರಬೇಕಾದ ಮತ್ತೊಂದು ಹೆಚ್ಚಿನ ಗುಣವೆಂದರೆ ತಪೋಬಲ. ಕೇವಲ ಬೌದ್ಧಿಕಜ್ಞಾನ ಅಥವಾ ಸಾತ್ವಿಕ ವೈರಾಗ್ಯ ಇವೆರಡುಗಳಿಂದ ಇಷ್ಟಕಾರ್ಯವಾಗುವುದಿಲ್ಲ. ಆ ಜ್ಞಾನವೈರಾಗ್ಯಗಳಿಗೆ ತಪಸ್ಸಿನ ಜೋಡುಬೇಕು. ಹಾಗಿಲ್ಲದಿದ್ದರೆ, ಅವರ ಉಪದೇಶಕ್ಕೆ ವಿಶೇಷ ಬೆಲೆ ಬರುವದಿಲ್ಲ. ಶ್ರೀ ಜಯತೀರ್ಥರು (ನಂ. ೬) ಶ್ರೀ ಕವೀಂದ್ರರು (ನಂ. ೮) ಶ್ರೀ ರಘುನಾಥತೀರ್ಥರು (ನಂ. ೧೨) ಶ್ರೀ ವೇದವ್ಯಾಸತೀರ್ಥರು (ನಂ. ೧೫) ಶ್ರೀ ವೇದನಿಧಿತೀರ್ಥರು (ನಂ. ೧೭) ಶ್ರೀ

ಸತ್ಯಪ್ರಿಯತೀರ್ಥರು (ನಂ. ೨೪) ಶ್ರೀ ಸತ್ಯಬೋಧರು (ನಂ. ೨೫) ಶ್ರೀ ಸತ್ಯಸಂಧರು (ನಂ. ೨೬) ಶ್ರೀ ಸತ್ಯವರತೀರ್ಥರು (ನಂ. ೨೭) ಶ್ರೀ ವ್ಯಾಸರಾಯರು, ಶ್ರೀ ರಾಘವೇಂದ್ರ ಸ್ವಾಮಿಗಳು, ಶ್ರೀ ವಾದಿರಾಜಸ್ವಾಮಿಗಳು ಇವರೇ ಮುಂತಾದವರಲ್ಲಿ ತಪೋಬಲದ ಮಹಿಮೆಯನ್ನು ನಾವು ಕಾಣಬಹುದು. ಶ್ರೀ ಸತ್ಯವರತೀರ್ಥರು ಶ್ರೀ ರಾಮದೇವರ ಮೂರ್ತಿಯು ಕಳೆದು ಹೋದಾಗ ೨೧ ದಿವಸಗಳ ಉಪವಾಸವನ್ನಾಚರಿಸಿದರೆಂದಬಳಿಕ ಅವರಲ್ಲಿ ಧ್ಯೇಯನಿಷ್ಠೆ ಎಷ್ಟಿರಬೇಕು?

"ಈಸಬೇಕು, ಇದ್ದು ಜಯಿಸಬೇಕು" ಎಂದು ನಮ್ಮ ಮತವು ಸಾರುತ್ತದೆ. ಆದುದರಿಂದ, ನಮ್ಮ ಸತ್ಪುರುಷರು ಈ ಜಗತ್ತಿನಿಂದ ತೀರ ಅಲಿಪ್ತರಾಗಿ ಉಳಿಯದೆ, ಜಗತ್ತಿನಲ್ಲಿದ್ದುಕೊಂಡು, ಜಗತ್ತಿನ ಎಡರುಗಳೊಡನೆ ಹೋರಾಡಿ ವೈಭವ ಮುಂತಾದವುಗಳನ್ನು ಗಳಿಸಿರುವರು. ಮತ್ತು ವೈಭವದಲ್ಲಿಯೂ ವೈರಾಗ್ಯವೃತ್ತಿಯನ್ನು ಅಚ್ಚಳಿಯದೆ ಇಟ್ಟುಕೊಳ್ಳುವದು ಹೇಗೆ ಶಕ್ಯವಿರುವದೆಂಬುದನ್ನು ತೋರಿಸಿರುವರು. ಶ್ರೀ ನರಹರಿತೀರ್ಥರು ಶ್ರೀ ವ್ಯಾಸರಾಯರು ರಾಜಕಾರಣದಲ್ಲಿ ಕೂಡ ಪ್ರತ್ಯಕ್ಷವಾಗಿಯೂ ಅಪ್ರತ್ಯಕ್ಷವಾಗಿಯೂ ಭಾಗ ತೆಗೆದುಕೊಂಡಿರುವರು. ಜಗತ್ತು ಸತ್ಯವೆಂದು ಸಾರುವ ಧರ್ಮಕ್ಕೆ ಜಗತ್ತಿನ ಯಾವ ಕಾರ್ಯದಿಂದಲೂ ನಿವೃತ್ತವಾಗುವುದು ಶಕ್ಯವಿಲ್ಲ. ಆಯಾ ಸ್ಥಳಕ್ಕೆ ಮತ್ತು ಕಾಲಕ್ಕೆ ತಕ್ಕಂತೆ ಕಾರ್ಯಸ್ವರೂಪವು ಮಾತ್ರವೇ ಬದಲಾಗಬಹುದು. ನಮ್ಮ ಸತ್ಪುರುಷರು ಹೀಗೆ ಆಚರಿಸಿರುವುದರಿಂದಲೆ ಅವರು ಇಷ್ಟು ವೈಭವವನ್ನು ಗಳಿಸಿರುವರು. ಶ್ರೀ ಪದ್ಮನಾಭತೀರ್ಥರು(ನಂ. ೨) ಶ್ರೀ ರಾಮಚಂದ್ರತೀರ್ಥರು (ನಂ. ೧೦) ಶ್ರೀ ವಿದ್ಯಾನಿಧಿ ತೀರ್ಥರು (ನಂ. ೧೧) ಶ್ರೀ ವೇದವ್ಯಾಸತೀರ್ಥರು (ನಂ. ೧೫) ಶ್ರೀ ಸತ್ಯಾಭಿನವತೀರ್ಥರು(ನಂ. ೨೧) ಶ್ರೀ ಸತ್ಯಪ್ರಿಯತೀರ್ಥರು (ನಂ. ೨೪) ಶ್ರೀ ಸತ್ಯಬೋಧರು (ನಂ. ೨೫) ಶ್ರೀ ಸತ್ಯಧರ್ಮರು (ನಂ. ೨೮) ಇವರೇ ಮುಂತಾದವರು ಹೀಗೆ ವೈಭವವನ್ನು ಸಂಪಾದಿಸಿದವರಲ್ಲಿ ಪ್ರಮುಖರು. ಮೇಲ್ಕಾಣಿಸಿದ ಯಾವತ್ತು ಸದ್ಗುಣಗಳು ಶ್ರೀ ಮನ್ಮಧ್ವಾಚಾರ್ಯರಲ್ಲಿ ಪೂರ್ಣವಾಗಿ ನೆಲೆಗೊಂಡಿರುವುದರಿಂದ ಅವರ ಹೆಸರನ್ನು ಪ್ರತ್ಯೇಕವಾಗಿ ಹೇಳುವ ಕಾರಣವೇ ಇಲ್ಲ.

ಹೀಗೆ ಅನೇಕ ಸತ್ಪುರುಷರು ಈ ಮಠಕ್ಕೆ ಉಪಕಾರವನ್ನು ಮಾಡಿರುವರು. ಶ್ರೀ ವಿದ್ಯಾನಿಧಿತೀರ್ಥರು (ನಂ. ೧೬) ೬೮ ವರ್ಷ ಶ್ರೀ ವಿದ್ಯಾಧಿರಾಜರು (ನಂ. ೭) ೬೪ ವರ್ಷ ಶ್ರೀ ರಘುನಾಥರು (ನಂ. ೧೨) ೫೮ ವರ್ಷ ಶ್ರೀ ರಘುವರ್ಯರು (ನಂ. ೧೩) ೫೫ ವರ್ಷ ಹೀಗೆ ಅರ್ಧ ಶತಮಾನಕ್ಕಿಂತ ಹೆಚ್ಚುಕಾಲ ಆಳಿದವರೂ ಇರುವರು. ಇವರೆಲ್ಲರ ಜೀವನ ಸಂಗತಿಗಳು ನಮಗೆ ಇನ್ನೂ ಸಾಕಷ್ಟು ಸಿಕ್ಕಿರುವುದಿಲ್ಲ. ಆದ ಕಾರಣ, ನಮ್ಮ ಜನರು ಇದಷ್ಟು ಹೆಚ್ಚು ಸಂಗತಿಗಳನ್ನು ಕಲೆಹಾಕಿ ಈ ಗ್ರಂಥವನ್ನು ಪೂರ್ತಿಗೊಳಿಸುವುದು ಅವಶ್ಯವಿದೆ

ಈ ಸಂದರ್ಭದಲ್ಲಿ ನಾವು ಮತ್ತೂ ಒಂದು ಮಹತ್ವದ ಸೂಚನೆಯನ್ನು ಮಾಡಲಿಚ್ಛಿಸುತ್ತೇವೆ. ಅದೇನೆಂದರೆ ಇವೆಲ್ಲ ಚರಿತ್ರೆಗಳನ್ನು ಐತಿಹಾಸಿಕ ದೃಷ್ಟಿಯಿಂದ ಸಂಶೋಧಿಸುವುದು ಮತ್ತು ಪರಿಶೀಲಿಸುವುದು. ಈಗ ಅನೇಕ ಶಿಲಾ ಮತ್ತು ತಾಮ್ರ ಶಾಸನಗಳು ಹೊರಬಿದ್ದಿವೆ, ಬೀಳುತ್ತಲಿವೆ. ಅನೇಕ ಪರಕೀಯರ ಗ್ರಂಥಗಳ ಮೇಲಿಂದ ನಮ್ಮ ಸತ್ಪುರುಷರ ವಿಷಯವಾಗಿ ಹೊಸ ಸಂಗತಿಗಳು ಗೊತ್ತಾಗಬಹುದು. ಐತಿಹಾಸಿಕ ಸಂಗತಿಗಳ ಮೇಲಿಂದ ಅನೇಕ ವಾದವಿವಾದಾತ್ಮಕ ಪ್ರಶ್ನೆಗಳನ್ನು ನಿರ್ಣಯಿಸುವುದಕ್ಕೆ ಅವಕಾಶವಿರುತ್ತದೆ. ಶ್ರೀ ಮನ್ಮಧ್ವಾಚಾರ್ಯರ ಕಾಲವೇ ಇಂಥದೆಂದು ಇನ್ನೂವರೆಗೆ ನಿಶ್ಚಿತವಾಗಿ ನಿರ್ಣೀತವಾಗಿರುವುದಿಲ್ಲ. ಅದೇ ಮೇರೆಗೆ ಮಿಕ್ಕ ಸ್ವಾಮಿಗಳ ಕಾಲವನ್ನು ನಿರ್ಧರಿಸುವುದೂ ಅವಶ್ಯವಿದೆ. ಗಂಜಂ ಜಿಲ್ಹೆಯಲ್ಲಿ ಚಿಕಾಕೋಲ ತಾಲೂಕಿನಲ್ಲಿರುವ ಶ್ರೀ ಕೂರ್ಮವೆಂಬ ಸ್ಥಳದಲ್ಲಿ ಶ್ರೀ ನರಹರಿತೀರ್ಥರ ಕಾಲದ ಆರು ಶಾಸನಗಳು ಸಿಕ್ಕಿರುತ್ತವೆ. ಅವು ೧೧೮೬, ೧೨೦೩, ೧೨೧೧, ೧೨೦೩, ೧೨೧೫ (೨) ಶಕಗಳಲ್ಲಿ ಬರೆದವುಗಳಿರುತ್ತವೆ. ಇದರಿಂದ ಶ್ರೀ ಮನ್ಮಧ್ವಾಚಾರ್ಯರ ಮತ್ತು ಶ್ರೀ ನರಹರಿತೀರ್ಥರ ಕಾಲವು ನಿಶ್ಚಿತವಾಗಬಹುದು. ಮಂಗಳೂರ ಜಿಲ್ಹೆಯಲ್ಲಿ ವಿಜಯನಗರದ ದೇವರಾಯನು ಶ್ರೀ ವಿದ್ಯಾಧಿರಾಜತೀರ್ಥರಿಗೆ ೧೩೩೧ ಶಕದಲ್ಲಿ ದಾನಕೊಟ್ಟ ಶಾಸನವೊಂದಿದೆ. ಶ. ೧೪೪೭ ರಲ್ಲಿ ವಿಜಯನಗರದ ಕೃಷ್ಣದೇವರಾಯನು ಶ್ರೀ ವ್ಯಾಸತೀರ್ಥರಿಗೆ ಬೆಟ್ಟಕೊಂಡವೆಂಬ ಗ್ರಾಮವನ್ನು ಉಂಬಳಿಯಾಗಿ ಕೊಟ್ಟು ಅದಕ್ಕೆ ವ್ಯಾಸಸಮುದ್ರವೆಂದು ಹೆಸರಿಟ್ಟಂತೆ ಮತ್ತೊಂದು ಶಾಸನವು ಹೇಳುತ್ತದೆ.

ಬಾರಕೂರಿನ ಯತಿರಾಯ ಒಡೆಯರೆಂಬವರು ಲಿಂಗರಸ ಒಡೆಯರ ಅಪ್ಪಣೆಯಿಂದ ಆನಿಗೊಂದಿಯ ಶ್ರೀ ರಘುಪತಿತೀರ್ಥ ಶ್ರೀಪಾದರಿಗೂ ಶ್ರೀ ವ್ಯಾಸತೀರ್ಥ ಶ್ರೀಪಾದರಿಗೂ ಶ್ರೀ ರಾಮಚಂದ್ರದೇವರ ಪೂಜೆ ಗೋಸ್ಕರ ೧೪೪೭ ರಲ್ಲಿ ಭೂದಾನಹಿರಣ್ಯದಾನ ಮಾಡಿದನೆಂದು ಕುಂದಾಪುರ ತಾಲೂಕಿನ ಒಂದು ಶಾಸನವು ಹೇಳುತ್ತದೆ. ಗುಂಟೂರ ಜಿಲ್ಹೆಯಲ್ಲಿ ೧೬೨೦ ನೆಯ ಶಕದಲ್ಲಿ ಆರಾಧ್ಯತೀರ್ಥಾಚಾರ್ಯರೆಂಬ ಮಾಧ್ವರಿಗೆ ದಾನದೊರೆತ ಶಾಸನವೊಂದಿದೆ. ಹೀಗೆ ದೊರೆತ ಮತ್ತು ದೊರೆಯಬಹುದಾದ ಅನೇಕ ಶಾಸನಗಳಿಂದ ನಾವು ಅನೇಕ ಮಹನೀಯರ ಕಾಲಗಳನ್ನು ಸರಿಪಡಿಸಿ ಹೊಸ ಹೊಸ ಸಂಗತಿಗಳನ್ನು ಸಂಶೋಧಿಸಬಹುದು. 'ಸಾಪ್ರಂದಾಯದೀಪಿಕೆ' ಎಂಬ ಗ್ರಂಥದಲ್ಲಿ ಶ್ರೀ ವ್ಯಾಸರಾಯರ ಮತ್ತು ಶ್ರೀ ವಲ್ಲಭಾಚಾರ್ಯರ ಉಲ್ಲೇಖವಿದೆ. ವೇದಾಂತ ದೇಶಿಕರ ಚರಿತ್ರೆಯ ಮೇಲಿಂದ ವಿದ್ಯಾರಣ್ಯರೊಡನೆ ವಾದವಾಗಿರುವ ಕಾಲವನ್ನು ನಿರ್ಣಯಿಸಬಹುದು. ಬಂಗಾಲದ ಶ್ರೀ ಚೈತನ್ಯನ ಚರಿತ್ರೆಯಿಂದ ನಾವು ಹೊಸ ಸಂಗತಿಗಳನ್ನು ಗೊತ್ತುಪಡಿಸಬಹುದು. ಅಲ್ಲದೆ, ಚೈತನ್ಯಪಂಥವು ನಮ್ಮ ಮತಾವಲಂಬಿಯಾಗಿರುವುದರಿಂದ ಆ ಪಂಥದೊಡನೆ ಸಂಬಂಧವನ್ನು ಬೆಳಿಸಿ ಅವರ ಗ್ರಂಥಗಳನ್ನವಲೋಕಿಸಿದರೆ ನಮಗೆ ಕೆಲವು ಸಂಗತಿಗಳು ದೊರೆಯಬಹುದು. ಈ **"ಸತ್ಕಥೆ"** ಯಲ್ಲಿಯೇ ಅನೇಕ ಐತಿಹಾಸಿಕ ಸಂಗತಿಗಳ ಉಲ್ಲೇಖಗಳಿವೆ. ಆ ಐತಿಹಾಸಿಕ ಸಂಗತಿಗಳನ್ನು ಒರೆಗಲ್ಲಿಗೆ ಹಚ್ಚಿನೋಡುವುದು ಅವಶ್ಯವಿದೆ. ಇತ್ತಕಡೆಗೆ ಇತಿಹಾಸ ಸಂಶೋಧಕರು ದೃಷ್ಟಿಯನ್ನು ಕೊಡಬೇಕೆಂದು ನಮ್ಮ ಸೂಚನೆ.

ಈ ಬಗೆಯಾಗಿ, ಈ ಪುಸ್ತಕದಲ್ಲಿ, ವಿಸ್ತೃತವಾದ ಚರಿತ್ರೆಗಳಿಗೆ ಬೇಕಾಗುವ ಅನೇಕ ಸಾಧನಗಳು ದೊರೆಯುತ್ತಿರುವುದರಿಂದಲೂ ಈ ಪುಸ್ತಕವು ಎಲ್ಲರಿಗೂ ವಿಶೇಷವಾಗಿ ವೈಷ್ಣವರಿಗೆ ಭಕ್ತಿಪುರಸ್ಸರವಾಗಿ ಓದುವುದಕ್ಕೆ ಅರ್ಹವಾಗಿರುವುದರಿಂದಲೂ ಎಲ್ಲರೂ ಇದನ್ನು ಓದಿ ತೃಪ್ತಿಪಡಬೇಕು.

ಧಾರವಾಡ<br>೨೬-೬-೧೯೩೧ } **ಆಲೂರ ವೆಂಕಟರಾಯ**

# ಪ್ರಕಾಶಕರ ನಾಲ್ಕು ಮಾತುಗಳು

ಇತ್ತ ಕಡೆಯ ವೈಷ್ಣವ ಸಮಾಜದಲ್ಲಿ ವೈ. ವಾ. ತಿ. ಭೀಮರಾಯರ ಹೆಸರನ್ನು ಕೇಳದವರು ವಿರಳ. ಅವರು ಬಹಳ ಸಾತ್ವಿಕರು, ಸರಳಸ್ವಭಾವದವರು ಹಾಗು ವೈಷ್ಣವ ಧರ್ಮಾಭಿಮಾನಿಗಳಾಗಿದ್ದರು. ಸರಕಾರಿ ನವಕರಿಯಲ್ಲಿದ್ದರೂ ತಮ್ಮ ವೇಳೆಯನ್ನೆಲ್ಲ ಶ್ರೀಮನ್ಮಧ್ವ ಸಿದ್ಧಾಂತದ ಅಭ್ಯಾಸದಲ್ಲಿಯೇ ವಿನಿಯೋಗಿಸಿದರು; ಮತ್ತು ಶ್ರೀ ಸತ್ಯ ಧೀರರು ಧಾರವಾಡಕ್ಕೆ ಬಂದಾಗ ಮಧ್ವಸಿದ್ಧಾಂತದ ಪ್ರಸಾರಕ್ಕಾಗಿಯೇ ಇಲ್ಲಿಯ ಪ್ರಮುಖ ಗೃಹಸ್ಥರ ಹಾಗು ವೈದಿಕರ ಸಹಾಯದಿಂದ ಶ್ರೀಮನ್ಮಧ್ವಸಿದ್ಧಾಂತ್ತೋಜಕ ಸಭೆಯನ್ನು ಶಕೆ ೧೮೧೭ ಪುಷ್ಯ ಶುದ್ಧ ಸಪ್ತಮಿಯ ದಿನ ಸ್ಥಾಪಿಸಿದರು. ಶ್ರೀ ಸತ್ಯಧೀರರ ಹೆಸರಿನಿಂದ ಪಾಠಶಾಲೆಯೊಂದನ್ನು ಅದಕ್ಕೆ ಜೋಡಿಸಿದರು ಇದಲ್ಲದೆ ಪ್ರತಿ ವರ್ಷವೂ ಶ್ರೀಮನ್ಮಧ್ವಸಿದ್ಧಾಂತಕ್ಕೆ ಸಂಬಂಧಿಸಿದ ಬೇರೆ ಬೇರೆ ವಿಷಯಗಳಲ್ಲಿ ಪರೀಕ್ಷೆಯನ್ನು ತೆಗೆದುಕೊಂಡು ಸಂಭಾವನೆಯನ್ನೀಯುವ ಏರ್ಪಾಡನ್ನು ಮಾಡಿದರು.

ಶ್ರೀಮನ್ಮಧ್ವಾಚಾರ್ಯರಿಂದ ಸ್ಥಾಪಿತವಾದ ಶ್ರೀಮದುತ್ತರಾದಿ ಮಠದ ಹಾಗು ದ್ವೈತಮತದ ಬೆಳವಣಿಗೆಗಾಗಿ ಪರಿಶ್ರಮ ಬಟ್ಟ ಅನೇಕ ಪರಮಹಂಸರ ಶ್ರೀಗಳ ಹಾಗು ಬೇರೆ ಬೇರೆ ಆಚಾರ್ಯರ ಚರಿತ್ರೆಗಳನ್ನು ಇದುವರೆಗೂ ಎಲ್ಲಿಯೂ ಪ್ರಕಟಿಸದಿದ್ದುದನ್ನು ನೋಡಿ ಅವರು ಈ ಕಾರ್ಯವನ್ನು ಕೈಕೊಂಡರು. ಆಗಿನ ಕಾಲದಲ್ಲಿ ಬಹು ಪ್ರಯಾಸದಿಂದ ಉಪಲಬ್ಧವಾದ ಚರಿತ್ರೆಗಳನ್ನು "ಸತ್ಕಥಾ" ಎಂಬ ಹೆಸರಿನಿಂದ ಶಕೆ ೧೮೧೯ ರಲ್ಲಿ ಮುದ್ರಿಸಿದರು.

ಎಷ್ಟೇ ಅಸಂಪೂರ್ಣವಾಗಿದ್ದರೂ ಆ ಸತ್ಕಥೆಯ ಎಲ್ಲ ಪ್ರತಿಗಳು ತೀರಿ ಹೋದದ್ದರಿಂದ ಪುನಃ ಅದನ್ನು ಮುದ್ರಿಸಲು ನಿಶ್ಚಯಿಸಿದೆವು. ಮತ್ತು ಅವಶ್ಯವಾದ ಎಲ್ಲ ಚರಿತ್ರೆಗಳನ್ನು ಕಲೆಹಾಕಲು ಆರಂಭಮಾಡಿದೆವು. ನಮ್ಮ ಸುದೈವದಿಂದ ಮೈಸೂರಿನ ಶ್ರೀ. ವೆ. ಬ್ರಹ್ಮಾಂಡ ಕೃಷ್ಣಮೂರ್ತ್ಯಾಚಾರ್ಯರು ಧಾರವಾಡಕ್ಕೆ ಬಂದಾಗ್ಗೆ

ತಮ್ಮಲ್ಲಿರುವ ಶ್ರೀಗಳವರ ಚರಿತ್ರೆಗಳನ್ನೆಲ್ಲ ಈ ಪುಸ್ತಕದಲ್ಲಿ ಉಪ ಯೋಗಿಸಲು ಸಮ್ಮತಿಸಿದರು. ಮತ್ತು ಅವರ ಸಹಾಯದಿಂದಲೇ ಶ್ರೀ ಸತ್ಯಧ್ಯಾನತೀರ್ಥರ ವರೆಗಿನ ಎಲ್ಲ ಶ್ರೀಗಳ ಚರಿತ್ರೆಗಳನ್ನು ಈಗ ಪ್ರಕಟಿಸಲು ಸಾಧ್ಯವಾಗಿದೆ. ಈ ಬಗ್ಗೆ ನಾವು ಶ್ರೀಕೃಷ್ಣಮೂರ್ತ್ಯಾ ಚಾರ್ಯರಿಗೆ ಬಹಳೇ ಋಣಿಯಾಗಿದ್ದೇವೆ.

ವೈ. ವಾ. ಭೀಮರಾಯರು 'ಸತ್ಕಥೆ' ಯ ಹೊರ್ತಾಗಿ 'ಗೀತಾ ಉಪನ್ಯಾಸ' 'ಬ್ರಹ್ಮಸೂತ್ರರಚನಾಪ್ರಕಾಶ' 'ಷಟ್ ಶಾಸ್ತ್ರಸಾರ' ಈ ಮೂರು ಪುಸ್ತಕಗಳನ್ನು ಪ್ರಕಟಿಸಿರುವರು. ಇದಲ್ಲದೆ 'ದ್ವೈತ ಸಿದ್ಧಾಂತ ವಿಚಾರ' ವೆಂಬದನ್ನು ಬರೆದಿಟ್ಟಿರುವರು. ಅದನ್ನು ತೀವ್ರ ವಾಗಿ ಮುದ್ರಿಸಲಾಗುವದು.

ಸತ್ಕಥೆಯ ಈಗಿನ ಆವೃತ್ತಿಯನ್ನು ಸಂಪೂರ್ಣವಾಗಿ ಬರೆಯಲು ತಮ್ಮ ವೇಳೆಯನ್ನು ವೆಚ್ಚ ಮಾಡಿ ಸಹಾಯ ಮಾಡಿದ್ದಕ್ಕಾಗಿ ಮುಂಡ ರಗಿಯ ಶ್ರೀಮಾನ್ ನಾಡಗೌಡ ನರಸಿಂಗರಾಯರಿಗೂ ಮತ್ತು ಪುಸ್ತ ಕವನ್ನು ಮುದ್ರಿಸಲು ಸರಿಯಾಗುವಂತೆ ಭಾಷೆಯನ್ನು ಬರೆದು, 'ಪ್ರೂಫ'ನ್ನು ತಿದ್ದಿ ಸಹಾಯವನ್ನಿತ್ತುದಕ್ಕಾಗಿ ಶ್ರೀ ಕವಜಲಗಿ ಬಂಡೇರಾಯರಿಗೂ ನಮ್ಮ ಆಭಾರವನ್ನು ವ್ಯಕ್ತಪಡಿಸುವೆವು.

ನಮ್ಮ ಬೇಡಿಕೆಗೆ ಮಾನವನ್ನು ಕೊಟ್ಟು ಸತ್ಕಥೆಯನ್ನು ಸಂಪೂ ರ್ಣವಾಗಿ ಓದಿ, ಪಠನ ಮಾಡಿ, ಅದರಲ್ಲಿ ಕಂಡುಬಂದ ನ್ಯೂನತೆ, ಇನ್ನೂ ಮಾಡಬೇಕಾದ ಸುಧಾರಣೆ, ಇತಿಹಾಸ ಸಂಶೋಧನದ ಅವ ಶ್ಯಕತೆ ಮುಂತಾದವುಗಳನ್ನು ತೋರಿಸಿ ಒಳ್ಳೇ ವಿದ್ವತ್ತೆಯಿಂದ ಪೂರಿ ತವಾದ ಮುನ್ನುಡಿಯನ್ನು ಬರೆದುದಕ್ಕಾಗಿ ನಮ್ಮ ಮಿತ್ರರಾದ ಶ್ರೀ ಆಲೂರ ವೆಂಕಟರಾಯರಿಗೆ ನಮ್ಮ ಧನ್ಯವಾದಗಳನ್ನರ್ಪಿಸುವೆವು.

ಶ್ರೀಮನ್ಮಧ್ವಾಚಾರ್ಯರ ಭಾವಚಿತ್ರವನ್ನು ಮುದ್ರಿಸಲು ಸಮ್ಮ ತಿಸಿದುದಕ್ಕಾಗಿ ಶ್ರೀ ಸರಾಫಖಾನೆ ನರಹರಿರಾಯರಿಂದಲೂ ಅಂದವಾ ಗಿಯೂ ಅಲ್ಪಾವಧಿಯಲ್ಲಿಯೂ ಮುದ್ರಿಸಿದುದಕ್ಕಾಗಿ ಶ್ರೀ ಹೊಸಕೇರಿ ಅಣ್ಣಾಚಾರ್ಯರಿಂದಲೂ ನಾವು ಬಹಳೇ ಉಪಕೃತರಾಗಿದ್ದೇವೆ.

೩೧-೭-೧೯೩೧ **ಪ್ರಕಾಶಕ**

# ತಿದ್ದುಪಡೆ

| ಪುಟ | ಸಾಲು | ಇದ್ದುದು | ಇರಬೇಕಾದುದು |
|---|---|---|---|
| ೧೪ | ೪ | ದೇವರಿಂದ | ದೇವಿಯವರಿಂದ |
| ೧೫ | ೨೫ | ಮಧ್ವಾಚಾರ್ಯರಿಗೆ | ಶ್ರೀ ಮಧ್ವಾಚಾರ್ಯರಿಗೆ |
| ೨೧ | ೫ | ಸ್ವಿಕರಿಸ | ಸ್ವೀಕರಿಸ |
| ೨೨ | ೧೨ | ದೇವರು ಬಂದು | ದೇವರು ಬಂದು, |
| ೨೫ | ೬ | ಅಸಮಾಧಾನವಾಗಿ | ಅಸಮಾಧಾನರಾಗಿ |
| ೩೧ | ೨ | ಆವರ | ಅದರ |
| ೩೪ | ೫ | ವಿಭುದ | ವಿಬುಧ [ಇದರಂತೆ ಮುಂದೆ] |
| ೩೮ | ೨೦ | ಅಶುದ್ದ | ಅಶುದ್ಧ |
| ೪೬ | ೨೬ | ತಕ್ಕೊಂಡಿದ್ದೇವೆಂದು | ತಕ್ಕೊಂಡಿದ್ದೆವೆಂದು |
| ೭೮ | ೨೪ | ದಾನ...... ನಾಗಿ | ದಾನ......ವಾಗಿ |
| ೮೧ | ೧೨ | ಒಬ್ಬನ | ಒಬ್ಬ |
| ೧೦೧ | ೬೨ | ಶ್ರೇಯಾಭಿ | ಶ್ರೇಯೋಭಿ |
| ೧೦೪ | ೨೪ | ಉಳಿದವರು | ಉಳಿದವರು |
| ೧೨೪ | ೯ | ಸರಸಾಲಜಂಗ | ಸರಸಾಲರ ಜಂಗ |
| ೧೨೬ | ೧೫ | ಆಶ್ರಮನ್ನಿತ್ತು | ಆಶ್ರಮವನ್ನಿತ್ತು |
| ೧೩೧ | ೧೩ | ಮುಖ್ಯಾಧಿಕಾರವು | ಮುಖ್ಯಾಧಿಕಾರವನ್ನು |
| ೧೩೨ | ೧ | ಅಕ್ಷೇಪಣೆ | ಆಕ್ಷೇಪಣೆ |
| ೧೪೦ | ೧೮ | ಅತಗೂರ | ಆತಗೂರ |
| ೧೫೩ | ೪ | ಆಗ ಪ್ರಾರ್ಥನೆ | ಆಗ ಯಾರ ಪ್ರಾರ್ಥನೆ |
| ೧೬೨ | ೧೪ | ಆದಾದುದರಿಂದ | ಅದಾದುದರಿಂದ |
| ೧೭೮ | ೫ | ಆಕ್ಷರಸ್ಥ | ಅಕ್ಷರಸ್ಥ |
| ೧೮೨ | ೧೮ | ಸಂಸ್ಕಾರದಲ್ಲಿ | ಸಂಸ್ಕಾರವಾದಲ್ಲಿ |
| ೧೮೫ | ೨೦ | ಇನ್ನು | ಇನ್ನೂ |
| ೧೯೮ | ೨೫ | ಪೂಜೆ | ಪೂಜೆ |

# ಅನುಕ್ರಮಣಿಕೆ



## ಉತ್ತರಾದಿಮಠ

## ಬೇರೆ ಮಠಗಳು

# ಟೀಕಾಟಿಪ್ಪಣಿಕಾರರು

ಶ್ರೀ

# ಸತ್-ಕಥಾ



## ಶ್ರೀಮೂಲಸೀತಾಸಮೇತ ಶ್ರೀರಾಮದೇವರು

ಒಂದಾನೊಂದು ಸಮಯದಲ್ಲಿ **ಶ್ರೀಹಂಸನಾಮಕ** ಪರಮಾತ್ಮನು **ಚತುರ್ಮುಖ**ನಿಗೆ ಪ್ರತ್ಯಕ್ಷನಾಗಿ **ಶ್ರೀಮೂಲಸೀತಾರಾಮರ** ಪ್ರತಿಮೆಗಳನ್ನು ಅವನಿಗೆ ಕೊಟ್ಟು:- "ಜಗವನ್ನುದ್ಧರಿಸಲು, ಬ್ರಹ್ಮನೇ! ಈ ಮೂರ್ತಿಗಳ ರೂಪದಿಂದ ನನಗೆ ಅವತರಿಸಬೇಕಾಗಿದೆ; ಆದ್ದರಿಂದ ಕೆಲ ಕಾಲದ ವರೆಗೆ ನೀನು ಇವುಗಳನ್ನು ಪೂಜಿಸುತ್ತಿದ್ದು ಮುಂದೆ **ದಕ್ಷಪ್ರಜೇಶ್ವರ**, **ಇಕ್ಷ್ವಾಕು** ಮುಂತಾದ ನನ್ನ ಭಕ್ತರ ಬಳಿಗೆ ಇವು ಕ್ರಮದಿಂದ ಸಾಗಿಹೋಗುವ ವ್ಯವಸ್ಥೆಯನ್ನು ಮಾಡು" ಎಂದು ಆಜ್ಞೆಯನ್ನಿತ್ತು ಕಣ್ಮರೆಯಾದನು.

ಭಗವಂತನ ಅಪ್ಪಣೆಯಂತೆ ಬ್ರಹ್ಮನು ಸತ್ಯಲೋಕದಲ್ಲಿ ಎಷ್ಟೋ ಕಾಲದವರೆಗೆ ಆ ಪ್ರತಿಮೆಗಳನ್ನು ಪೂಜಿಸಿದನು. ತರುವಾಯ ಎಲ್ಲ ಲೋಕಗಳ ಒಡೆತನವನ್ನು ತನ್ನ ಮಗನಾದ ದಕ್ಷಪ್ರಜೇಶ್ವರನಿಗೆ ಒಪ್ಪಿಸಿ, ವಿರಿಂಚಿಯು ಪೂಜೆಯ ವಿಧಾನವನ್ನೂ ಹೇಳಿ, ಆ ಮೂರ್ತಿಗಳನ್ನು ಆತನ ವಶಕ್ಕೆ ಕೊಟ್ಟನು.

ತಾತನ ವಚನದಂತೆ ನಡೆದು, ತಾನು ವಾನಪ್ರಸ್ಥವನ್ನು ಸ್ವೀಕರಿಸುವವರೆಗೆ ದಕ್ಷೇಶ್ವರನು ಆ ಮೂರ್ತಿಗಳ ಮಹಿಮೆಯಿಂದ ತಡೆಯಿಲ್ಲದ ಸಾಮ್ರಾಜ್ಯಾಧಿಪತ್ಯವನ್ನನುಭವಿಸಿ, ಆ ಮೇಲೆ ಅವನು ಅವುಗಳನ್ನು ಮೇರುಪರ್ವತದಲ್ಲಿರುವ ಶತಕೋಟಿಪುರದಲ್ಲಿಯ ಕಮಲಾಸನನಿಗೆ **ಸಂಯಮನೀ** ಮುನಿಯ ಸಂಗಡ ಕಳುಹಿಕೊಟ್ಟನು.

ಆಗ ಅಲ್ಲಿ ಇಕ್ಷ್ವಾಕುವೆಂಬರಸನು ಬ್ರಹ್ಮನನ್ನು ಕುರಿತು ಘೋರವಾದ ತಪವನ್ನಾಚರಿಸುತ್ತಿದ್ದನು. ಅವನ ತಪಸ್ಸಿಗೆ ಮೆಚ್ಚಿ ಬ್ರಹ್ಮನು ಈ ದಕ್ಷೇಶ್ವರನಿಂದ ಬಂದ ಪ್ರತಿಮೆಗಳನ್ನು ಅನುಗ್ರಹ ಪೂರ್ವಕವಾಗಿ ಪೂಜೆಯ ವಿಧಾನವನ್ನು ಹೇಳಿ ಆತನಿಗೆ ಕೊಟ್ಟು ಬಿಟ್ಟನು. ಇಕ್ಷ್ವಾಕುವು ಅವುಗಳನ್ನು ತನ್ನ ಕುಲದೇವರೆಂದು ಭಾವಿಸಿ ತನ್ನ ವಂಶಜರ ಉದ್ಧಾರಕ್ಕಾಗಿ ಅವನ್ನು ತನ್ನ ಮನೆಯ ಲ್ಲಿಯೆ ಪ್ರತಿಷ್ಠಾಪಿಸಿದನು. ಮುಂದೆ ಇಕ್ಷ್ವಾಕುವಂಶಜರಾದ ಮಾಂಧಾತ, ಅನರಣ್ಯ, ತ್ರಿಶಂಕು, ಹರಿಶ್ಚಂದ್ರ, ಸಗರ, ಭಗೀರಥ, ಅಂಬರೀಷ, ದಿಲೀಪ ಮುಂತಾದ ರಾಜರುಗಳಿಂದ ಪೂಜೆ ಹೊಂದಿ ಆ ಪ್ರತಿಮೆಗಳು ದಶರಥನ ವಶಕ್ಕೆ ಬಂದವು. ದಶರಥನು ತನ್ನ ಹಿರಿಯ ಮಗನಿಗೆ ಕುಲದೇವರ ಹೆಸರನ್ನೇ ಇಟ್ಟು ಅವನು ಪ್ರೌಢನಾಗಲು ಆ ಪ್ರತಿಮೆಗಳನ್ನು ಅವನ ವಶಕ್ಕೆ ಕೊಟ್ಟನು.

ಭೂಭಾರವನ್ನಿಳಿಸಲೆಂದು ಅವತರಿಸಿದ **ರಾಮನು** (ಪರಮಾತ್ಮನು) ಈ ಪ್ರತಿಮೆಗಳನ್ನು ತನ್ನ ಬೊಕ್ಕಸದಲ್ಲಿರಿಸಿದ್ದನು. ಅಲ್ಲಿಂದ ತೆಗೆ ಯಿಸಿಕೊಂಡು **ಸೀತಾದೇವಿ**ಯವರು ಅವನ್ನು ಅಂತಃಪುರಕ್ಕೆ ಒಯ್ದು ಅಲ್ಲಿ ಹನುಮಂತ, ಜಾಂಬುವಂತ ಮೊದಲಾದ ಮಹಾ ಭಕ್ತರಿಂದ ಬಹು ಕಾಲದವರೆಗೆ ಅವುಗಳ ಪೂಜೆಯನ್ನು ಮಾಡಿಸುತ್ತಿದ್ದರು.

ಆಗ ಅಯೋಧ್ಯೆಯಲ್ಲಿ **ವೇದಗರ್ಭ**ನೆಂಬೊಬ್ಬ ಬ್ರಾಹ್ಮಣನು ಇರುತ್ತಿದ್ದನು. ಅವನು ಶ್ರೀರಾಮಚಂದ್ರನ ದರ್ಶನವಿಲ್ಲದೆ ಆಹಾರ ವನ್ನು ತೆಗೆದುಕೊಳ್ಳುತ್ತಿರಲಿಲ್ಲ. ಒಂದು ದಿನ ಒಳಗೆ ಯಾರನ್ನೂ ಬಿಡಕೂಡದೆಂದು ಲಕ್ಷ್ಮಣನಿಗೆ ಕಟ್ಟಪ್ಪಣೆಯನ್ನಿತ್ತು ಶ್ರೀರಾಮನು ರುದ್ರನೊಡನೆ ಏಕಾಂತದಲ್ಲಿರಲು ವೇದಗರ್ಭನ ನಿಯಮಕ್ಕೆ ತಡೆಯು ಬಂದಿತು. ಎಂಟು ದಿನಗಳ ವರೆಗೂ ಊಟವಿಲ್ಲದೆ ಅವನು ಬಾಗಿಲಲ್ಲಿ ಕಾಯ್ದಿದ್ದನು. ಈ ಸಂಗತಿಯು ಕಡೆಗೆ ಶ್ರೀರಾಮನಿಗೆ ತಿಳಿಯಲು ಲಗುಬಗೆಯಿಂದ ಅವನು ಹೊರಗೆ ಬಂದು ಆ ಬ್ರಾಹ್ಮಣ ನಿಗೆ ದರ್ಶನವನ್ನು ಕೊಟ್ಟನು. ಆದರೆ ಈ ಮುಂದೆ ತನ್ನ ಪ್ರತ್ಯಕ್ಷ ದರ್ಶನವಾಗುವಂತಿಲ್ಲವಾದುದರಿಂದ ತನ್ನ ಸಾನಿಧ್ಯವುಳ್ಳ ತನ್ನ ಕುಲ

ದೇವತಾ ಪ್ರತಿಮೆಗಳನ್ನು ತೆಗೆದುಕೊಂಡು ಹೋಗೆಂದು ಹೇಳಿ ವೇದ ಗರ್ಭನಿಗೆ ಶ್ರೀಮೂಲಸೀತಾರಾಮರ ಪ್ರತಿಮೆಗಳನ್ನು ಶ್ರೀರಾಮನು ಕೊಟ್ಟನು; ಆ ಪ್ರತಿಮೆಗಳಿಂದ ಜಗದುದ್ಧಾರವಾಗುವದಿದೆಯಾದ್ದ ರಿಂದ ಅವುಗಳನ್ನು ಭದ್ರವಾಗಿಟ್ಟುಕೊಳ್ಳೆಂದು ಅವನಿಗೆ ಹೇಳಿದನು.

ಶ್ರೀರಾಮನು ಪರಂಧಾಮಕ್ಕೆ ತೆರಳಿದ ಮೇಲೆ ವಿಧಿಪೂರ್ವಕವಾಗಿ ಈ ಪ್ರತಿಮೆಗಳನ್ನು ಪೂಜಿಸುತ್ತ ವೇದಗರ್ಭನು ತೀರ್ಥಯಾತ್ರೆಗೆ ಹೊರಟನು. ಹೋಗಹೋಗುತ್ತ ಅವನು **ಮೇಲುಪಲ್ಲಿ**ಯೆಂಬಲ್ಲಿಗೆ ಬಂದು ಮುಟ್ಟಿದನು. ಅಲ್ಲಿ ಆ ಬ್ರಾಹ್ಮಣನಿಗೆ ಮರಣವು ಸಮೀಪಿ ಸಲು ಆ ಮೂಲ ಪ್ರತಿಮೆಗಳನ್ನು ಒಂದು ಭದ್ರವಾದ ಸ್ಥಳದಲ್ಲಿ ಬಚ್ಚಿಟ್ಟು ಅವನು ಕಣ್ಣುಮುಚ್ಚಿದನು.

ಮುಂದೆ ಶ್ರೀಜಗನ್ನಾಥ ದೇವರ ಅಶರೀರ ವಾಣಿಯಿಂದ ಭೂಮಿ ಯಲ್ಲಿಟ್ಟಿದ್ದ ಆ ಮೂಲ ಪ್ರತಿಮೆಗಳು ಆ ಪ್ರಾಂತದ ಅರಸನಾದ **ಮುಕುಂದವರ್ಮನ** ಬಳಿಗೆ ಬಂದವು. ಅವನ್ನು ವಿಧಿಪೂರ್ವಕ ಪೂಜಿಸುತ್ತಿದ್ದು ತನ್ನ ಅವಸಾನ ಕಾಲಕ್ಕೆ **ಸುಶರ್ಮ**ನೆಂಬ ರಾಜನಿಗೆ ಪೂಜೆಯ ಬಗೆಯನ್ನು ಹೇಳಿಕೊಟ್ಟು ರಾಜನು ಅವುಗಳನ್ನು ಆತನಿಗೆ ಒಪ್ಪಿಸಿದನು. ಅವನು ಬಹುಕಾಲ ಆ ಪ್ರತಿಮೆಗಳನ್ನು ಪೂಜಿಸು ತ್ತಿದ್ದು ಕೊನೆಗೆ ಭಂಡಾರದಲ್ಲಿಯೇ ಎರಡಾಳುಗಳ ಕೆಳಗೆ ಅವನ್ನು ಭೂಮಿಯಲ್ಲಿ ಭದ್ರವಾಗಿ ಬಚ್ಚಿಡಿಸಿದನು.

ಮುಂದೆ ವಾಯುದೇವರು **ಶ್ರೀಮದಾನಂದತೀರ್ಥಾಚಾರ್ಯ**ರೆಂಬ ಹೆಸರಿನಿಂದ ಅವತರಿಸಿ ಆ ಪ್ರತಿಮೆಗಳನ್ನು ತಮ್ಮ ಶಿಷ್ಯರಾದ **ನರಹರೀತೀರ್ಥರ** ಮುಖಾಂತರವಾಗಿ ಪುರಿಯ ಭಾಂಡಾರದಿಂದ ಕುಶ ಲೋಪಾಯದಿಂದ ತರಿಸಿಕೊಂಡು ತಮ್ಮ ಸಂಸ್ಥಾನದಲ್ಲಿ ವಿಧಿಪೂರ್ವ ಕವಾಗಿ ಪೂಜಿಸಲಾರಂಭಿಸಿದರು.

ಆ ಮೂಲಸೀತಾರಾಮರ ವಿಗ್ರಹಗಳೇ ಈಗ **ಶ್ರೀಮದುತ್ತ ರಾದಿಮಠ**ದಲ್ಲಿ ಪರಂಪರೆಯಿಂದ ಪೂಜೆಗೊಳ್ಳುತ್ತ ಬಂದಿವೆ.

## ಪ್ರತಿಮೆಗಳ ಲಕ್ಷಣ

ಎರಡೂ ಪ್ರತಿಮೆಗಳು ತಾಮ್ರದ ಛಾಯೆಯುಳ್ಳವು. ಶ್ರೀ ಸೀತಾಪ್ರತಿಮೆಗೆ ಹಿಂದೆ ತುರುಬಿರುವದು. ಶ್ರೀರಾಮ ಪ್ರತಿಮೆಯ ಒಂದೊಂದು ಕೈಯಲ್ಲಿ ಮೂರುಮೂರು ಕಂಕಣಭೂಷಣಗಳಿವೆ. ಪಾದ ತಳದಲ್ಲಿ ಕಮಲದ ಗದ್ದುಗೆಯಿದೆ. ಸೀತಾದೇವಿಯು ಶ್ರೀರಾಮ ಪ್ರತಿ ಮೆಯ ಟೊಂಕಕ್ಕೆ ಬರುತ್ತಾಳೆ.

ಈ ಲಕ್ಷಣಗಳುಳ್ಳ ಪ್ರತಿಮೆಗಳು **ಮಾರ್ಕಾಂಡೇಯಪುರಾಣದ** ಉತ್ತರಕಾಂಡದ ೯ನೆಯ ಅಧ್ಯಾಯದಲ್ಲಿ ಮಾರ್ಕಾಂಡೇಯ ಅಗಸ್ತ್ಯ ಸಂವಾದದಲ್ಲಿ ಉಕ್ತವಾಗಿವೆ. ಅಲ್ಲದೆ ಪುಷ್ಕರಪ್ರಭಾ, ವಾಸಿಷ್ಠರಾಮಾ ಯಣ ಮುಂತಾದ ಗ್ರಂಥಗಳಲ್ಲಿಯೂ ಈ ಪ್ರತಿಮೆಗಳು ಪರಿಪರಿ ಯಿಂದ ಬಣ್ಣಿಸಲ್ಪಟ್ಟಿವೆ.

---

*

# ೧ ಶ್ರೀಮದಾನಂದ ತೀರ್ಥಾಚಾರ್ಯರು



ಸೀತೇಶಕಂಸಾಂತಕವಾಸವೀಸುತಾನ್ ಕಪೀಶಭೂಮೀಶಮುನೀತರೂಪಿಣಾ ।
ಅಹೀಶವೀಶೇಶನುತೇನ ವಾಯುನಾ ನುತಾನ್ನಮಸ್ಯೆ ಪ್ರಣತೇಷ್ಟದಾನ್ ಸದಾ॥
ಪ್ರಥಮೋ ಹನುಮನ್ನಾಮ ದ್ವಿತೀಯೋ ಭೀಮ ಏವ ಚ ।
ಪೂರ್ಣಪ್ರಜ್ಞಸ್ತೃತೀ ಯಸ್ತು ಭಗವತ್ಕಾರ್ಯಸಾಧಕಃ ॥
ವಾಯೋ ರಾಮವಚೋನಯಂ ಪ್ರಥಮಕಂ ಪ್ರಕ್ಷೋ ದ್ವಿತೀಯಂ ವಪುಃ ।
ಮಧ್ವೋ ಯಸ್ತು ತೃತೀಯಮೇತದಮುನಾ ಗ್ರಂಥಃ ಕೃತಃಕೇಶವೇ ॥

ಶ್ರೀ ಭಗವಾನ್ ಲಕ್ಷ್ಮೀನಾರಾಯಣನು (ಪರಮಾತ್ಮನು) ಚೇತನಾಚೇತನಾತ್ಮಕವಾದ ಜಗತ್ತಿನ ಕರ್ತನು; ನಿಯಾಮಕನು. ಅವನ ಗುಣಗಳಿಗೆ ಎಣೆಯಿಲ್ಲ. ಮಹಿಮೆಗೆ ಮೆರೆಯಿಲ್ಲ. ಎಂಬೀ ವಿಷಯವನ್ನು ಪ್ರತಿಪಾದಿಸುವವರೇ ಅನೇಕರು. ಇದನ್ನು ವಿರೋಧಿಸುವವರೂ ಹಲವರಿದ್ದಾರೆ.

ಮುಖ್ಯಫಲವು ಮೋಕ್ಷವು; ಅದು ದೊರೆಯಲು ಭಗವಂತನ ಗುಣೋತ್ಕರ್ಷಜ್ಞಾನವು ಆವಶ್ಯವು; ಈ ಜ್ಞಾನವು ಆಗಮಪುರಾಣೇತಿಹಾಸಗಳಿಂದಾಗುತ್ತದೆ; ಇವುಗಳಲ್ಲಿ ವೇದವೇ ಮುಖ್ಯ ಪ್ರಮಾಣವೆಂದು ಭಗವದ್ಭಕ್ತರು ಹೇಳುತ್ತಾರೆ.

ಆದರೆ ಮಾಯಾವಿಯಾದ ಪರಮಾತ್ಮನು ತಮೋಯೋಗ್ಯರನ್ನು ಮೋಹಗೊಳಿಸುವದಕ್ಕಾಗಿ ಬೌದ್ಧಾವತಾರವನ್ನು ಧಾರಣಮಾಡಿದನು. ವೇದಗಳು ಅಪ್ರಮಾಣವೆಂದು ನುಡಿದನು. ಅಜ್ಞರು ಇದನ್ನೇ ನಿಜವೆಂದರಿದು ಅದರಂತೇ ಅನುಸರಿಸಹತ್ತಿದರು. ಅವರೊಳಗಿನವನೊಬ್ಬನು ಬೌದ್ಧಮತವನ್ನು ಸ್ಥಾಪಿಸಿದನು. ಇಂದ್ರಿಯಗಳಿಗೆ ಗೋಚರವಾಗದ ವಸ್ತುಗಳಿಗೆ ಅಸ್ತಿತ್ವವಿಲ್ಲ; ಧರ್ಮಾಧರ್ಮ, ಪಾಪಪುಣ್ಯ,

ಸ್ವರ್ಗಮೋಕ್ಷ, ಪುನರ್ಜನ್ಮ ಈ ಮುಂತಾದವುಗಳು ಇಲ್ಲವೇ ಇಲ್ಲ; ಹೆಚ್ಚೇನು ದೇವರೇ ಇಲ್ಲ; ಎಂತಾಗಿ ಈ ಮತದ ಸಾರವು.

ಇಂತಹ ನಾಸ್ತಿಕ ಮತವು ಭೂಮಿಯಲ್ಲಿ ಸಾಮಾನ್ಯ ಜನರಲ್ಲೆಲ್ಲ ಹಬ್ಬುತ್ತಿರಲು ವೇದೋಕ್ತವಾದ ಕರ್ಮಗಳು ನಡೆಯದಾದವು. ದೇವ ಪೂಜಾದಿಗಳು ನಿಂತವು. ಈ ಸ್ಥಿತಿಯನ್ನು ನೋಡಿ ಸಹಿಸಲಾಗದೆ ಸಜ್ಜನರು ಗೋಳಿಡಹತ್ತಿದರು; ಮಾರ್ಗದರ್ಶಕರಾರೂ ಇಲ್ಲವೆಂದು ಅವರು ಮಿಡುಕಹತ್ತಿದರು. ಕೆಲಕಾಲದ ಮೇಲೆ **ಉದಯನಾಚಾರ್ಯ** ಮೊದಲಾದ ನ್ಯಾಯಶಾಸ್ತ್ರಪಾರಂಗತರು ಈ ನಾಸ್ತಿಕ ಮತವನ್ನು ಮುರಿದೊತ್ತಲು ಅನೇಕ ಸಾರೆ ಯತ್ನಿಸಿದರು. ಆದರೆ ಅವರಿಂದ ಅದು ಚೆನ್ನಾಗಿ ಸಾಧ್ಯವಾಗಲಿಲ್ಲ. ನಾಸ್ತಿಕರು ಮತ್ತೆ ಮತ್ತೆ ತಲೆ ಯನ್ನು ಎತ್ತುತ್ತಲೇ ಇದ್ದರು.

ಆದರೆ **ಶಂಕರಾಚಾರ್ಯರು** ದೇಶದ ಆಗಿನ ಸ್ಥಿತಿಯ ಆಳವನ್ನು ಕಂಡುಹಿಡಿದರು. ವಾದದಿಂದ ನಾಸ್ತಿಕ ಮತದ ನಿರಾಕರಣೆಯು ಅಸಾಧ್ಯವೆಂದು ಅವರಿಗೆ ತೋರಿತು. ಉಪಾಯಾಂತರದಿಂದ ಅವರನ್ನು ಬಗ್ಗುಬಡಿಯಬೇಕೆಂದು ಅವರು ರಾಜಾಶ್ರಯವನ್ನು ಕೋರಿದರು. ಆಮೇಲೆ ಆಗಿದ್ದ **ಭಟ್ಟಪಾದ**ರೆಂಬ ಘನವಿದ್ವಾಂಸರಿಗೆ ಶಂಕರಾಚಾ ರ್ಯರು ತಮ್ಮ ಅಭಿಪ್ರಾಯವನ್ನು ತಿಳಿಸಿದರು. ಆಗೊಮ್ಮೆ ಈ ಭಟ್ಟಪಾದರು ಒಂದು ಜಿದ್ದಿನಲ್ಲಿ ನಾಸ್ತಿಕರನ್ನು ಗೆದ್ದು ತಮ್ಮ ದೊಂದು ಹೊಸ ಮತವನ್ನು ಸ್ಥಾಪಿಸಿದರು. **ಸುಧನ್ವ**ನೆಂಬರಸನು ಈ ಮತವನ್ನು ಕೈಕೊಂಡು ಅಧಿಕಾರ ಬಲದಿಂದ ಬೌದ್ಧಮತವನ್ನು ಬಲು ಕ್ಷೀಣದೆಶೆಗೆ ತಂದನು. ದೇಶದಲ್ಲಿ ಮುನ್ನಿನಂತೆ ವೇದೋಕ್ತ ಕರ್ಮಾದಿಗಳು ಸುಸೂತ್ರವಾಗಿ ಸಾಗಹತ್ತಿದವು. ಆದರೆ ಜನರ ಮನಸ್ಸು ಸಾಕಷ್ಟು ಪಕ್ವವಾಗಿದ್ದಿಲ್ಲವಾದ್ದರಿಂದ ಭಟ್ಟಪಾದರ ಮತವು ಅಷ್ಟೊಂದು ಜನರ ಮನದಲ್ಲಿ ಬಿಂಬಿಸಲಿಲ್ಲ. ಆದ್ದರಿಂದಲೇ ಶಂಕರಾ ಚಾರ್ಯರಿಗೆ ಹೊಸದೊಂದು ಮತವನ್ನು ಹೊರಡಿಸುವ ಯೋಚನೆ ಯುಂಟಾಯಿತು. ಆಗ ನಾಸ್ತಿಕ ಮತವು ನಾಮಶೇಷವಾಗಿದ್ದುದರಿಂದ ಆಚಾರ್ಯರಿಗೆ ಹೆಚ್ಚು ಅನುಕೂಲವಾಯಿತು. ಆ ಕಾಲಕ್ಕೆ **ಮಂಡನ**

**ಮಿಶ್ರ**ನೆಂಬೊಬ್ಬ ಮಹಾಪಂಡಿತನಿದ್ದನು. ಅವನು ಕರ್ಮವೇ ಮೋಕ್ಷಕ್ಕೆ ಸಾಧನವೆಂದು ಪ್ರತಿಪಾದಿಸುತ್ತಿದ್ದನು. ಬ್ರಹ್ಮವಿಚಾರವೇ ಬೇಕಿಲ್ಲೆಂದು ಈತನ ಮತವು. ಒಮ್ಮೆ ಈ ಮಿಶ್ರನಿಗೂ ಶಂಕರಾಚಾರ್ಯರಿಗೂ ಘೋರವಾದ ವಾದವಿವಾದವಾಗಿ ಅದರಲ್ಲಿ ಶಂಕರಾಚಾರ್ಯರು ಗೆದ್ದರು. ಆಗ ಆಚಾರ್ಯರು ಕೇವಲವಾದ ಕರ್ಮಮಾರ್ಗವನ್ನು ಮುರಿದು ವೇದಾಂತಮಾರ್ಗವನ್ನು ಸ್ಥಾಪಿಸಿದರು. ೧) ಸೌರ. ೨) ಶಾಕ್ತ. ೩) ಗಾಣಾಪತ್ಯ. ೪) ಸ್ಮಾರ್ತ. ೫) ಶೈವ. ೬) ವೈಷ್ಣವ ಎಂಬೀ ಆರು ಮತಗಳು ಈ ಆಚಾರ್ಯರಿಂದ ಹುಟ್ಟಿದವು. ಆದ್ದರಿಂದಲೇ ಅವರಿಗೆ **ಷಣ್ಮತಸ್ಥಾಪನಾಚಾರ್ಯ**ರೆಂಬ ಬಿರುದುಂಟಾಗಿದೆ. ಈ ಎಲ್ಲ ಮತಗಳು ಅದ್ವೈತಬ್ರಹ್ಮೋಪಾಸನಾ ಸಾಧಕವಾದವುಗಳು. ಇವಲ್ಲದೆ ಅದ್ವೈತವೆಂಬ ಹೊಸ ಸಿದ್ಧಾಂತವನ್ನೂ ಇವರು ಸ್ಥಾಪಿಸಿದರು ದೇವರು ಸತ್ಯ; ಆದರೆ ನಿರ್ಗುಣನು; ನಿರಾಕಾರನು; ಪ್ರತ್ಯಕ್ಷ, ಅನುಮಾನ, ಆಗಮ ಇವುಗಳಿಗೆ ಅಗೋಚರನು; ದೂರದಲ್ಲಿಯ ಒಂದು ಸುಣ್ಣದ ತಟಕು ದೃಷ್ಟಿದೋಷದಿಂದ ರೂಪಾಯಿಯಂತೆ ಕಾಣುವಂತೆ ಈ ಜಗವು ಭ್ರಾಂತಿಯಿಂದ ಇದ್ದಂತೆ ತೋರುವದೇ ಹೊರತು ನಿಜವಾಗಿಯೂ ಇಲ್ಲ; ಅಂದರೆ ಜಗವೆಂಬ ಒಂದು ಪದಾರ್ಥವೇ ಇಲ್ಲ; ಜೀವನು ಬ್ರಹ್ಮನೇ ಹೊರತು ಬೇರೆ ಅಲ್ಲ; ಇವೇ ಈ ಸಿದ್ಧಾಂತದ ಮೂಲ ತತ್ವಗಳು.

ಇಂದ್ರಿಯಗಳಿಗೆ ಗೋಚರವಾಗದ ವಸ್ತುಗಳಿಗೆ ಅಸ್ತಿತ್ವವು ಇಲ್ಲ! ಇಂದ್ರಿಯ ಗೋಚರವಾದ ಈ ಜಗತ್ತು ಸತ್ಯವೆಂದು ಬೌದ್ಧರು ಹೇಳುತ್ತಾರೆ! ಅದ್ವೈತರು ದೇವರ ಅಸ್ತಿತ್ವವನ್ನು ಒಡಂಬಟ್ಟು ಜ್ಞಾನಾನಂದಾದಿಗುಣಗಳಿಂದ ಅವನು ರಹಿತನೆಂದೆನ್ನುತ್ತಾರೆ; ವಸ್ತುವಿಗೆ ಅಸ್ತಿತ್ವವೇ ಇದ್ದ ಪಕ್ಷದಲ್ಲಿ ಅದು ಪ್ರತ್ಯಕ್ಷ, ಅನುಮಾನ, ಆಗಮ ಈ ಮೂರು ಪ್ರಮಾಣಗಳಲ್ಲೊಂದಕ್ಕೆ ಗೋಚರವಾಗಲೇ ಬೇಕು! ಯಾವ ಪ್ರಮಾಣಕ್ಕೂ ದೇವರು ನಿಲುಕನೆಂದ ಮೇಲೆ ದೇವರೇ ಇಲ್ಲವೆಂದಂತಾಯಿತಲ್ಲ. ಜಗತ್ತೂ ಇಲ್ಲ; ದೇವರೂ ಇಲ್ಲ. ಅಂದರೇನು? ಉಪಾಸ್ಯ ಪರಬ್ರಹ್ಮವಸ್ತುವೇ ಪ್ರಮಾಣಕ್ಕೆ ವಿಷಯವಲ್ಲದ ಮೇಲೆ ಅದರ

ಉಪಾಸನೆಯಿಂದ ಸಿಗಲಿರುವ **ಮೋಕ್ಷಾ**ದಿ ಪುರುಷಾರ್ಥಗಳೂ ಪ್ರಮಾಣಕ್ಕೆ ಹೇಗೆ ವಿಷಯಗಳಾಗುವವು? ಆದ್ದರಿಂದ ಈ ಫಲಗಳೂ ಸುಳ್ಳು ಎಂದಂತಾಯಿತಲ್ಲ? ಈ ಮುಂತಾಗಿ ಸಜ್ಜನರು ಸಂಶಯಗೊಳ್ಳ ಹತ್ತಿದರು. ಅದ್ವೈತಮತವನ್ನು ಅನುಸರಿಸಲು ಅವರು ಒಪ್ಪಲೊಲ್ಲರಾದರು. ಫಲವೇ ಇಲ್ಲದ ಈ ಮತದಿಂದೇನೆಂದು ಅವರು ಎಣಿಕೆಯನ್ನು ಹಾಕಹತ್ತಿದರು.

ಹೀಗಿದ್ದರೂ ಈ ಮತಸ್ಥಾಪಕರ ಬುದ್ಧಿಬಲದಿಂದ ಅವರ ಮತವು ಮೇಲ್ಮೆಯನ್ನು ಪಡೆಯಿತು. ಎಲ್ಲೆಡೆಯಲ್ಲಿಯೂ ಅದು ಪಸರಿಸಿತು. ಅವರ ಶಿಷ್ಯರ ಸಂಖ್ಯೆಯು ಹೆಚ್ಚಿತು. ಜೀವೇಶ್ವರಭೇದವಾದಿಗಳ ಬಲವು ಕಡಿಮೆಯಾಯಿತು.

ಈ ರೀತಿಯಾಗಿರಲು **ದುರ್ವಾಸರ** ಪರಂಪರೆಯ ಶಿಷ್ಯರಾದ **ಸತ್ಯಪ್ರಜ್ಞರೂ**, ಅವರ ಶಿಷ್ಯರಾದ **ಪ್ರಾಜ್ಞತೀರ್ಥರೂ** ಹಿಮಾಲಯದಲ್ಲಿ ವಾಸವಾಗಿದ್ದರು. ಅವರಲ್ಲಿ ಎಷ್ಟೋ ಸಜ್ಜನರು ದೂರನ್ನು ಒಯ್ದರು; ದ್ವೈತತತ್ವಗಳಿಗೆ ಬಂದ ಬಾಧೆಯನ್ನು ಬಿಡಿಸಲು ಅವರಿಗೆ ಬಿನ್ನಹ ಮಾಡಿಕೊಂಡರು. "ಸಮಯವು ಸೂಕ್ಷ್ಮವಾಗಿದೆಯಾದ್ದರಿಂದ ಎಲ್ಲಿಯೋ ಅದ್ವೈತಿಗಳಂತೆಬಚ್ಚಿಕೊಂಡಿದ್ದು ಸಜ್ಜನರಲ್ಲಿ ಅಂತರ್ಗತನಾದ ಪರಮಾತ್ಮನಿಗೆ ವಂದನೆಗಳನ್ನು ಅರ್ಪಿಸುತ್ತ ಇದ್ದರೆಯೇ ಒಳಿತು; ಇಲ್ಲವಾದರೆ ಅದ್ವೈತಿಗಳ ಭೈರವಾದಿ ಮಂತ್ರಗಳ ಬಲದಿಂದ ಜೀವಕ್ಕೆ ಎರವಾದೀರಿ; ಈ ಕಷ್ಟದ ಕಾಲವು ಬೇಗನೇ ದೂರಾಗುವದು; ಚಿಂತೆ ಮಾಡಬೇಡಿರಿ" ಎಂತಾಗಿ ಸತ್ಯಪ್ರಜ್ಞರೂ ಪ್ರಾಜ್ಞತೀರ್ಥರೂ ಸಜ್ಜನರನ್ನು ಸಮಾಧಾನಗೊಳಿಸಿದರು.

ಇದೀಗ ಈಚೆಯ ಸುದ್ದಿಯಾಯಿತು. ಆಚೆಗೆ ದ್ವಾಪರಯುಗದಲ್ಲಿ ಗೌತುಮ ಋಷಿಗಳ ಶಾಪದಿಂದ ಸಜ್ಜನರ ಜ್ಞಾನವು ಮಲಿನವಾದ್ದರಿಂದ ಅವರು ಬ್ರಹ್ಮನಿಂದ ಸಹಿತರಾಗಿ ಶೇಷಶಾಯಿಯಾದ ಶ್ರೀಮನ್ನಾರಾಯಾಣನಿಗೆ ಮೊರೆಹೋಗಲು ಆತನು ಶ್ರೀವ್ಯಾಸರೂಪದಿಂದ ಭೂಮಿಯಲ್ಲಿ ಬಂದು ಸಕಲಶಾಸ್ತ್ರನಿರ್ಣಾಯಕವಾದ ಬ್ರಹ್ಮಪ್ರತಿಪಾದಕವಾದ ಸೂತ್ರಗಳನ್ನು ರಚಿಸಿದನು.

೧] ಭಾರತೀವಿಜಯ. ೨] ಸವಿದಾನಂದ. ೩] ಬ್ರಹ್ಮಘೋಷ. ೪] ಶತಾನಂದ. ೫] ಉದ್ಧತಾ. ೬] ವಿಜಯ. ೭] ರುದ್ರಭಟ್ಟ. ೮] ವಾಮನ. ೯] ಯಾದವ ಪ್ರಕಾಶ. ೧೦] ರಾಮಾನುಜ. ೧ ] ಭರ್ತೃ. ೧೨] ಪ್ರಪಂಚ ದ್ರವಿಡ. ೧೩] ಬ್ರಹ್ಮದತ್ತ. ೧೪] ಭಾಸ್ಕರ. ೧೫] ಪಿಶಾಚ. ೧೬] ವೃತ್ತಿಕಾರ. ೧೭] ವಿಜಯಭಟ್ಟ. ೧೮] ವಿಷ್ಣುಕ್ರಾಂತ. ೧೯] ವಾದೀಂದ್ರ. ೨೦] ಮಾಧವದಾಸ. ೨೧] ಸಂಕರ ಈ ಮೇಲಿನ ಇಪ್ಪತ್ತೊಂದು ಗ್ರಂಥಗಳು ಶ್ರೀವ್ಯಾಸರ ಸೂತ್ರಗಳಿಗೆ ಭಾಷ್ಯಗಳು.

ಇಷ್ಟು ಭಾಷ್ಯಗಳಿಂದಲೂ ನಿಜವಾದ ತಾತ್ಪರ್ಯವು ಹೊರಡದ್ದರಿಂದ ಸಜ್ಜನರು ಮನದಲ್ಲಿಯೇ ಮಿಡುಕಹತ್ತಿದರು. ಇದನ್ನು ತಿಳಿದು ಶ್ರೀಮನ್ನಾರಾಯಣನು ಎಲ್ಲ ದೇವತೆಗಳನ್ನೂ ಕೂಡಿಸಿ ತನಗೆ ಕಲಿಯುಗದಲ್ಲಿ ಅವತರಿಸಲು ಇಚ್ಛೆಯಿಲ್ಲವಾದ್ದರಿಂದ ಮತ್ತು ಬ್ರಹ್ಮನಿಗೆ ಅವತಾರಕ್ಕೆ ಅಧಿಕಾರವೇ ಇಲ್ಲದ್ದರಿಂದ ತನ್ನ ಅನುಗ್ರಹಕ್ಕೆ ಪಾತ್ರರಾದ ವಾಯುದೇವರಿಗೆ, ಭೂಮಿಯಲ್ಲಿ ಅವತರಿಸಿ ವೇದವೇದಾಂತಗಳ ನಿಜವಾದ ಅರ್ಥವನ್ನು ಪ್ರಕಟಗೊಳಿಸಲಿಕ್ಕೆ ಆಜ್ಞೆಯನ್ನಿತ್ತನು.

ಭಗವಂತನ ಆಜ್ಞೆಯಂತೆ ಅನ್ಯರಿಂದ ಅಸಾಧ್ಯವಾದ ಕಾರ್ಯವನ್ನು ಸಾಧಿಸಲು ವಾಯುದೇವರು ಮದ್ರಾಸ ಇಲಾಖೆಯ ಮಂಗಳೂರ ಜಿಲ್ಹೆಯ **ಉಡಪಿಯ ಕ್ಷೇತ್ರ**ದ ಹತ್ತಿರದ **ಪಾಜಕವೆಂಬ ಕ್ಷೇತ್ರ**ದಲ್ಲಿ **ಮಧ್ಯಗೇಹಭಟ್ಟ**ನಿಂದ **ವೇದವತಿ**ಯೆಂಬವಳ ಹೊಟ್ಟೆಯಲ್ಲಿ **ವಿಳಂಬ ಸಂವತ್ಸರದ ಮಾಘ ಶುದ್ಧ ಸಪ್ತಮಿ ಆದಿತ್ಯವಾರದ ಶುಭಮುಹೂರ್ತ**ದಲ್ಲಿ ಅವತರಿಸಿದರು. ಭಟ್ಟರು ಕೂಸಿಗೆ **ವಾಸುದೇವ**ನೆಂದು ಹೆಸರಿಟ್ಟರು.

ಚಿಕ್ಕಂದಿನಲ್ಲಿಯೇ ಚಂಡಾಡುತ್ತಿರುವಾಗ **'ಕಂದುಕಸ್ತುತಿ'** ಯೆಂಬ ಗ್ರಂಥವು ವಾಸುದೇವನಿಂದ ವಿರಚಿಸಲ್ಪಟ್ಟಿತು. ಮುಂದೆ ದುರ್ಗೆಯಬೆಟ್ಟದಲ್ಲಿ ಬಾಲಕನ ಉಪಯನವಾಯಿತು. ನಿಮಿತ್ತ ಮಾತ್ರ ಉಪದೇಶವನ್ನು ಹೊಂದಿ ಆತನು ಬ್ರಹ್ಮವಿದ್ಯೆಗೆ ಆರಂಭಿಸಿದನು. ತೀವ್ರವೇ ಬ್ರಹ್ಮವಿದ್ಯೆಯಲ್ಲಿ ನಿಷ್ಣಾತನಾಗಿ ವಾಸುದೇವನು ಎಲ್ಲೆಡೆಯಲ್ಲಿಯೂ ಪ್ರಕಾಶಿಸಹತ್ತಿದನು. ಮುಂದೆ ಶ್ರೀಹಂಸ

ರೂಪೀಪರಮಾತ್ಮನಿಂದ ಪರಂಪರೆಯಾಗಿ ಬಂದಿರುವ ಸನ್ಯಾಸಾಶ್ರಮ ವನ್ನು ಬ್ರಹ್ಮಚರ್ಯದಲ್ಲಿಯೇ **ಅಚ್ಯುತಪ್ರೇಕ್ಷಾಚಾರ್ಯ**ರಿಂದ ಸೌಮ್ಯ ಸಂವತ್ಸರದ ಆಷಾಢ ಕೃಷ್ಣ ಪಂಚಮಿಯ ದಿನ ಈತನು ಹೊಂದಿ **ಆನಂದತೀರ್ಥ**ರೆಂಬ ಹೆಸರನ್ನು ಪಡೆದನು.

ಬಳಿಕ ಕೆಲಕಾಲ ಅಚ್ಯುತಪ್ರೇಕ್ಷರಲ್ಲಿಯೇ ಓದುತ್ತಿದ್ದು ಆನಂದ ತೀರ್ಥರು ಬದರಿಗೆ ಹೋಗಿ **ಶ್ರೀವ್ಯಾಸ**ರನ್ನು ಕಂಡು ಅವರಿಂದ ಉಪ ದಿಷ್ಟರಾಗಿ ಗ್ರಂಥರಚನಗೆ ಅನುಜ್ಞೆಯನ್ನು ಹೊಂದಿ **ರಜತಪೀಠ ಪುರ**[ಉಡುಪಿ]ಕ್ಕೆ ಬಂದು ಈ ಕೆಳಗಿನ ಗ್ರಂಥಗಳನ್ನು ರಚಿಸಿದರು.

| ಗ್ರಂಥ | ವಿಷಯ |
|---|---|
| ೧ ಗೀತಾಭಾಷ್ಯ | ಗೀತಾರ್ಥ ಮತ್ತು ಪರಮತ ಖಂಡನ |
| ೨ ಗೀತಾತಾತ್ಪರ್ಯ | ಗೀತಾರ್ಥಕ್ಕೆ ಪ್ರಮಾಣಾಂತರ ಸಮ್ಮತಿ ಮತ್ತು ಸರ್ವಶಾಸ್ತ್ರ ನಿರ್ಣಯವು. |
| ೩ ಸೂತ್ರ ಭಾಷ್ಯ | ಶ್ರೀ ವೇದವ್ಯಾಸಕೃತ ಬ್ರಹ್ಮಸೂತ್ರಗ ಳಿಗೆ ಅರ್ಥ |
| ೪ ಅಣುಭಾಷ್ಯ | ಮೇಲಿನ ಸೂತ್ರಗಳ ಅಧಿಕರಣಾರ್ಥ ವನ್ನು ಸ್ವಲ್ಪದರಲ್ಲಿ ಹೇಳಿದ್ದು. |
| ೫ ಅನುವ್ಯಾಖ್ಯಾನ | ಅದ್ವೈತವಿಶಿಷ್ಟಾದ್ವೈತಗಳ ಖಂಡನೆ ಯಿಂದ ಕೂಡಿದ ವ್ಯಾಸಕೃತ ಬ್ರಹ್ಮಸೂ ತ್ರಾರ್ಥ. |
| ೬ ನ್ಯಾಯವಿವರಣ | ಮೇಲಿನ ಸೂತ್ರಾಧಿಕರಣಗಳ ಪೂರ್ವ ಪಕ್ಷ ಯುಕ್ತಿ, ಸಿದ್ಧಾಂತ ಯುಕ್ತಿ. |
| ೭ ನಖಸ್ತುತಿ | ಮೂಲ ಗ್ರಂಥ. ಶ್ರೀ ನೃಶಿಂಹ ದೇವರ ನಖಸ್ತುತಿ. |
| ೮ ಯಮಕಭಾರತ | ಮೂಲ ಗ್ರಂಥ. ಪರಮಾತ್ಮನ ಸ್ತೋತ್ರ |
| ೯ ದ್ವಾದಶಸ್ತೋತ್ರ | ಮೂಲ ಗ್ರಂಥ. ಪರಿಪರಿಯಿಂದ ಮಾ ಡಿದ ದೇವರ ಪ್ರಾರ್ಥನೆಯು. |

| ಗ್ರಂಥ | ವಿಷಯ |
|---|---|
| ೧೦ ಕೃಷ್ಣಾಮೃತಮಹಾರ್ಣವ | ಮೂಲಗ್ರಂಥ. ಭಗವದರ್ಚನೆ, ಸ್ಮರಣ, ಧ್ಯಾನ ಮತ್ತು ವ್ರತಾಚರಣೆ, ದಿನತ್ರಯ ನಿರ್ಣಯ ಮುಂತಾದ್ದು. |
| ೧೧ ತಂತ್ರಸಾರ | ಮೂಲಗ್ರಂಥ. ಮಂತ್ರೋದ್ಧಾರ, ದೇವತಾರ್ಚನ ವಿಧಿ, ಮೂರ್ತಿಪ್ರತಿಷ್ಠಾ. |
| ೧೨ ಸದಾಚಾರಸ್ಮೃತಿ | ಮೂಲಗ್ರಂಥ. ನಿತ್ಯಕರ್ಮಾಚಾರ |
| ೧೩ ಯತಿಪ್ರಣವಕಲ್ಪ | ಮೂಲಗ್ರಂಥ. ಪ್ರಣವಾರ್ಥಪ್ರಕಾಶಕ, ಸನ್ಯಾಸಗ್ರಹಣವಿಧಿ. |
| ೧೪ ಜಯಂತಿನಿರ್ಣಯ | ಮೂಲಗ್ರಂಥ. ಶ್ರೀಕೃಷ್ಣನು ಅವತಾರ ಮಾಡಿದ ಜಯಂತಿ ನಿರ್ಣಯ. |
| ೧೫ ಭಾಗವತತಾತ್ಪರ್ಯ | ಮೂಲಗ್ರಂಥ. ಶ್ರೀಮದ್ಭಾಗವತದ ತಾತ್ಪರ್ಯಾರ್ಥ. |
| ೧೬ ಮಹಾಭಾರತ ತಾತ್ಪರ್ಯ ನಿರ್ಣಯ | ಮೂಲಗ್ರಂಥ. ಮತ್ತು ಸಕಲ ಪುರಾಣಗಳ ಅರ್ಥನಿರ್ಣಾಯಕವಾದದ್ದು. |
| ೧೭ ಸಂಹಿತಾಭಾಷ್ಯ | ಸಂಹಿತೆಯಲ್ಲಿಯ ಋಕ್ಕುಗಳ ಅರ್ಥ ಇದು ಎಲ್ಲ ವೇದಾರ್ಥಕ್ಕೆ ಮಾರ್ಗದರ್ಶಕವಾದದ್ದು |
| ೧೮ ಪ್ರಮಾಣಲಕ್ಷಣ | ಮೂಲಗ್ರಂಥ. ಪ್ರತ್ಯಕ್ಷ, ಅನುಮಾನ, ಆಗಮ ಈ ಮೂರುಗಳ ಲಕ್ಷಣ. |
| ೧೯ ಕಥಾಲಕ್ಷಣ | ಮೂಲಗ್ರಂಥ. ವಾದಿಗಳ ಲಕ್ಷಣವಾದವನ್ನು ಮಾಡುವ ಬಗೆಯನ್ನು ಹೇಳಿದೆ. |
| ೨೦ ಉಪಾಧಿಖಂಡನ | ಮೂಲಗ್ರಂಥ. ಬ್ರಹ್ಮನಿಗೆ ಉಪಾಧಿಯು ಹತ್ತಿರುವ ಕಾರಣ, ಜಗತ್ತು ಜಡಾತ್ಮ ಪ್ರಪಂಚವಾಗಿದೆಯೆಂಬದಾಗಿ ಹೇಳುವ ಅದ್ವೈತರ ಮತದ ಖಂಡನವು. |

| ಗ್ರಂಥ | ವಿಷಯ |
|---|---|
| ೨೧ ಮಾಯಾವಾದಖಂಡನ | ಮೂಲಗ್ರಂಥ. ಜಗತ್ತು ಮಾಯೆಯಿಂದ ಮುಂದೋರುವದೆಂಬ ಅದ್ವೈತರ ಮತ ಖಂಡನೆಯು. |
| ೨೨ ಪ್ರಪಂಚಮಿಥ್ಯಾತ್ವಾನು-ಮಾನಖಂಡನ | ಮೂಲಗ್ರಂಥ. ಜಗತ್ತು ಸುಳ್ಳೆಂದು ಹೇಳುವದರ ಖಂಡನೆಯು. |
| ೨೩ ತತ್ವಸಂಖ್ಯಾನ | ಮೂಲಗ್ರಂಥ. ಸ್ವತಂತ್ರ ಮತ್ತು ಅಸ್ವತಂತ್ರ ತತ್ವಗಳ ವಿಚಾರ. |
| ೨೪ ತತ್ವವಿವೇಕ | ಮೂಲಗ್ರಂಥ. ಸ್ವತಂತ್ರ, ಅಸ್ವತಂತ್ರವೆಂಬ ಎರಡು ತತ್ವಗಳ ವಿಚಾರಕ್ಕೆ ಅನುಕೂಲವಾದ ಪ್ರಮಾಣಗಳು. |
| ೨೫ ತತ್ವೋದ್ಯೋತ | ಮೂಲಗ್ರಂಥ. ಭೇದಸಾಧನೆಯು. |
| ೨೬ ಕರ್ಮನಿರ್ಣಯ | ಮೂಲಗ್ರಂಥ. ಯಜ್ಞಯಾಗಾದಿ ಕರ್ಮಗಳಲ್ಲಿ ಋಕ್ಕುಗಳ ಸಂಯೋಜನೆಯು. |
| ೨೭ ವಿಷ್ಣುತತ್ವನಿರ್ಣಯ | ಮೂಲಗ್ರಂಥ. ವೇದದ ಅಪೌರುಷೇಯತ್ವ, ಬಿಂಬಪ್ರತಿಬಿಂಬಾದಿ ವಿಷಯಗಳು; ಪರಮತ ಖಂಡನ. |
| ೨೮ ಐತರೇಯ ಭಾಷ್ಯ | ಮಹಿದಾಸರೂಪಿಯಾದ ಪರಮಾತ್ಮನು ಲಕ್ಷ್ಮಿಗೆ ಋಗ್ವೇದದ ಅರ್ಥವನ್ನು ಹೇಳಿದ್ದರ ವಿವರ. |
| ೨೯ ತೈತರೇಯ ಭಾಷ್ಯ | ಅನಿರುದ್ಧ ಮುಂತಾದ ಪಂಚರೂಪಗಳ ವಿಷಯೋಪದೇಶವನ್ನು ವರುಣನು ತನ್ನ ಮಗನಾದ ಭೃಗುಋಷಿಗೆ ಹೇಳಿದ್ದರ ವಿವರ. |
| ೩೦ ಬೃಹದಾರಣ್ಯಭಾಷ್ಯ | ಅಶ್ವಮೇಧಾದಿ ಯಜ್ಞಗಳಲ್ಲಿ ಪ್ರವರ್ತಕನಾದ ದೇವರ ಮಹಿಮೆಯ ವಿವರವು. |

| ಗ್ರಂಥ | ವಿಷಯ |
|---|---|
| ೩೧ ಈಶಾವಾಸ್ಯಭಾಷ್ಯ | ಸ್ವಾಯಂಭುವ ಮನುವಿನ ದೌಹಿತ್ರನಾಗಿ ಅವತಾರ ಮಾಡಿದ ಯಜ್ಞನಾಮಕ ಪರಮಾತ್ಮನು ರಾಕ್ಷಸರಿಂದ ತ್ರಸ್ತನಾದ ಸ್ವಾಯಂಭುವನನ್ನು ರಕ್ಷಿಸಿದ ಬಗೆ. |
| ೩೨ ಕಾಠಕಭಾಷ್ಯ | ಉದ್ದಾಲಕ ಮುನಿಯು ತನ್ನ ಮಗನಾದ ನಚಿಕೇತುವಿಗೆ ಭಗವತ್ತತ್ವಗಳನ್ನು ಹೇಳಿದ ವಿವರ. |
| ೩೩ ಛಾಂದೋಗ್ಯಭಾಷ್ಯ | ಲಕ್ಷ್ಮೀದೇವಿಯು ಸಾಮವೇದದಿಂದ ಪರಮಾತ್ಮನನ್ನು ಸ್ತುತಿಸಿದ್ದು, ಪ್ರಾಣದೇವರ ಮತ್ತು ಪರಮಾತ್ಮನ ಮಹಾತ್ಮೆಗಳು, ದೇವರ ತಾರತಮ್ಯಾದಿಗಳ ವಿವರ. |
| ೩೪ ಅಥರ್ವಣಭಾಷ್ಯ | ಅಂಗಿರಸಋಷಿಗಳು ಶೌನಕರಿಗೆ ಪರಾಪರ ವಿದ್ಯೆಯ ಉಪದೇಶ ಮಾಡಿದ್ದರ ವಿವರ. |
| ೩೫ ಮಾಂಡುಕ್ಯಭಾಷ್ಯ | ವರುಣನು ಮಂಡೂಕ ರೂಪವನ್ನು ತೆಗೆದುಕೊಂಡು ಜಾಗ್ರದವಸ್ಥಾ ಪ್ರೇರಕನಾದ ವಿಶ್ವನಾಮಕ ಪರಮಾತ್ಮನನ್ನೂ ಸ್ವಪ್ನಾವಸ್ಥೆಯ ತೈಜಸನನ್ನೂ ಸುಷುಪ್ತಿಯ ಪ್ರಾಜ್ಞನನ್ನೂ ಮುಕ್ತಾವಸ್ಥೆಯ ತುರ್ಯನನ್ನೂ ಸ್ತುತಿಸಿದುದರ ವಿವರ. |
| ೩೬ ಷಟ್ಪ್ರಶ್ನಭಾಷ್ಯ | ಪಿಪ್ಪಲಾದಿ ಋಷಿಯು ತನ್ನ ಶಿಷ್ಯರಿಗೆ ಪ್ರಶ್ನೋತ್ತರ ರೂಪದಿಂದ ಉಪದೇಶ ಮಾಡಿದ್ದರ ವಿವರ. |

| ಗ್ರಂಥ | ವಿಷಯ |
| --- | --- |
| ೩೭ ತಲವಕಾರಭಾಷ್ಯ | ಯಕ್ಷರೂಪಿಯಾದ ಪರಮಾತ್ಮನು ದೇವತೆಗಳಿಗೆ ಮಾಡಿದ ಉಪದೇಶ ಮುಂತಾದ್ದು, ಉಮಾದೇವರಿಂದ ಇಂದ್ರನಿಗೆ ಸಿಕ್ಕ ಭಗವದ್ವಾಕ್ಯೋಪದೇಶ ವಿವರ. |

ಸೂತ್ರಗಳಿಗಾದ ಮೊದಲಿನ ೨೧ ಭಾಷ್ಯಗಳನ್ನು ಖಂಡಿಸಿ ಆಚಾರ್ಯರು ಸಚ್ಛಾಸ್ತ್ರದ ಪುನರುಜ್ಜೀವನವನ್ನು ಮಾಡಿದರು. ದೇಶಸಂಚಾರ ಮಾಡುತ್ತ ಪರವಾದಿಗಳನ್ನು ಗೆದ್ದು ಇವರು ದ್ವೈತ ಮತವನ್ನು ಹಬ್ಬಿಸಿದರು. ಆಗ ಆಸೇತುಹಿಮಾಚಲದಲ್ಲಿಯೂ ಇವರ ಕೀರ್ತಿಯು ಕಂಗೊಳಿಸಿತು.

ಒಮ್ಮೆ ಆಚಾರ್ಯರು ಸಂಚರಿಸುತ್ತ **ಕೊಡಿಯಾಲ**ವೆಂಬಲ್ಲಿಗೆ ಬಂದರು. ಅಲ್ಲಿ **ತ್ರಿವಿಕ್ರಮ ಪಂಡಿತಾಚಾರ್ಯ**ರೆಂಬ ಘನಪಂಡಿತರಿದ್ದರು. ಇವರು ಮೊದಲು ಅದ್ವೈತಿಗಳು. ಒಂದೂಕಾಲು **ಲಕ್ಷ** ಅದ್ವೈತಗ್ರಂಥಗಳು ಇವರ ಬಾಯಿಯಲ್ಲಿ ಕುಳಿತಿದ್ದವು. ಇವರೊಡನೆ ೧೫ ದಿನ ಆಚಾರ್ಯರ ವಾದವಾಗಿ ಪಂಡಿತರು ಸೋತರು. ಕೂಡಲೆ ಅವರು ಆಚಾರ್ಯರ ಪರಮ ಶಿಷ್ಯರಾದರು. ಈ ಬಗೆಯಿಂದ ದ್ವೈತಮತವು ಪಸರಿಸತೊಡಗಿತು.

## ದ್ವೈತ ತತ್ವಗಳು

ಜಗತ್ಕರ್ತನಾದ ಹರಿಯು ಚೇತನಾಚೇತನ ಜಗತ್ತಿನಿಂದ ಭಿನ್ನನಿದ್ದು ಅವನೇ ಸೃಷ್ಟಿ, ಸ್ಥಿತಿ, ಲಯಾದಿಗಳಿಗೆ ಕಾರಣನು; ಸರ್ವೋತ್ತಮನು; ಸರ್ವಶಕ್ತನು; ಸರ್ವವ್ಯಾಪಿಯು; ಸರ್ವಜ್ಞನು; ಅನಂತಗುಣಪೂರ್ಣನು. ಜಗತ್ತು ಸತ್ಯವಾದದ್ದು. ದೇವರು ಜಗತ್ತಿನಿಂದ ಭಿನ್ನವಿರುವಂತೆ ಚೇತನಾತ್ಮಕ ಜಗತ್ತು ಜಡಜಗತ್ತಿನಿಂದ ಭಿನ್ನವಾದದ್ದು. ಜೀವರೂ ಪರಸ್ಪರ ಭಿನ್ನರಾದವರು. ಪ್ರತ್ಯಕ್ಷ ಅನುಮಾನ, ಆಗಮ ಇವು ಮೂರು ಪ್ರಮಾಣಗಳು. ನಾರಾಯಣನು ವೇದಪ್ರತಿಪಾದ್ಯನು. ಇವೇ ಮುಂತಾದವುಗಳು.

ಬಹು ಜನರ ಬೆಂಬಲದ ಬಲುಮೆಯಿಂದಲೂ ಹಿಂಸೆಯಿಂದಲೂ ಒಬ್ಬನು ಹೊಸ ಮತವನ್ನು ಕೈಕೊಳ್ಳುವದುಂಟು. ಆದರೆ ಆಚಾರ್ಯರಿಗೆ ಈ ಬಗೆಯ ಆವ ಸಾಧನೆಗಳೂ ಇರಲಿಲ್ಲ. ಸದುಪದೇಶದ ಬಲವೇ ಬಲವು. ಇದರಿಂದಲೇ ಅವರು ಎಲ್ಲರನ್ನು ಸನ್ಮಾರ್ಗಕ್ಕೆ ಹಚ್ಚಿದರು. ಇದರಿಂದ ಆಚಾರ್ಯರ ಮಹಿಮೆಯು ಪ್ರಕಟವಾಗುವದಲ್ಲದೆ ಅವರ ಮತದಲ್ಲಿಯ ತಥ್ಯವೂ ಕಂಡು ಬರುವದು.

ಶ್ರೀಮದಾನಂದ ತೀರ್ಥರು ಒಮ್ಮೆ ಉಡಪಿಯ ಸಮುದ್ರಸ್ನಾನಕ್ಕೆ ಹೋಗಿದ್ದರು. ಆಗ ಸರಕುಗಳಿಂದ ತುಂಬಿ ದ್ವಾರಕೆಯತ್ತಣಿಂದ ಬರುತ್ತಿರುವ ಒಬ್ಬ ವರ್ತಕನ ನೌಕೆಯು ಅವರಿಗೆ ಕಾಣಿಸಿತು. ಸಮುದ್ರಕ್ಷೋಭೆಯಿಂದ ಆ ನೌಕೆಯು ತೂಗಾಡಲು ಪ್ರಾರಂಭವಾಗಿತ್ತು. ಇವನ್ನು ಕಂಡು ದಯೆದುಂಬಿದವರಾಗಿ ಆನಂದತೀರ್ಥರು ತಮ್ಮ ಶಾಟಿಯನ್ನು ತುಸು ಕೊಡವಿದರು. ಕೂಡಲೆ ನೌಕೆಯು ದಂಡೆಗೆ ವೇಗದಿಂದ ಬಂದು ಸೇರಿತು. ಆಗ ವರ್ತಕನಿಗೆ ಆನಂದವೇ ಆನಂದ. ನನ್ನನ್ನು ಅನುಗ್ರಹಿಸಿ ನನ್ನ ಸೇವೆಯನ್ನು ಕೊಳ್ಳಿರೆಂದು ಆತನು ತೀರ್ಥರನ್ನು ಪ್ರಾರ್ಥಿಸಿದನು. ಬಯಕೆಗಳೇ ಬಯಲಾಗಿ ಹೋದ ಆ ಭಗವದ್ಭಕ್ತರಿಗೆ ಬೇಕೇನು! ಗೋಪೀಚಂದನದ ಕರಣೆಯನ್ನು ಮಾತ್ರ ಅವರು ಕೊಡಹೇಳಿದರು. ಅದನ್ನು ಕೊಂಡವರೇ ಆನಂದ ತೀರ್ಥರು ತಲೆಯ ಮೇಲಿಟ್ಟುಕೊಂಡು ದಶಾವತಾರ ಸ್ತೋತ್ರವನ್ನು ಮಾಡುತ್ತ ಕುಣಿಯುತ್ತ ಒಡಬಂಡೇಶ್ವರನ ದೇವಾಲಯಕ್ಕೆ ನಡೆತಂದರು. ಆ ಕರಣೆಯಲ್ಲಿ ಕಡಗೋಲಕೃಷ್ಣನ ಮೂರ್ತಿಯೊಂದಿದೆಯೆಂದು ದಿವ್ಯದೃಷ್ಟಿಯಿಂದ ಅವರು ತಿಳಿದುಕೊಂಡದ್ದರಿಂದಲೇ ಅವರಿಗೆ ಈ ಬಗೆಯ ಉಲ್ಹಾಸವು. ಗುಡಿಗೆ ಬಂದವರೇ ತೀರ್ಥರು ಗೋಪೀಚಂದನದ ಕರಣೆಯನ್ನು ಒಡೆದರು. ಆ ಕೂಡಲೇ ಸರ್ವಾಂಗ ಚಕ್ರಾಂಕಿತವಾದ **ಕಡಗೋಲಕೃಷ್ಣನ** ಕಮನೀಯ ಮೂರ್ತಿಯೊಂದು ಕಡೆಗೆ ಬಂತು. ಮೂರ್ತಿಯನ್ನು ನೋಡುತ್ತಲೆ ಮಧ್ವಾಚಾರ್ಯರಿಗೆ ಆನಂದಭಾಷ್ಪಗಳು ಉದುರಹತ್ತಿದವು. ಕೆಲ ಹೊತ್ತು ಅವರು ಅತಿ ಪರವಶರಾದರು. ಸ್ವಲ್ಪ ವೇಳೆಯಲ್ಲಿ ಮತ್ತೆ ಅವರು ಆ ಮೂರ್ತಿಗೆ

ಸಾಷ್ಟಾಂಗವಾಗಿ ನಮಿಸಿ ಅದನ್ನು ತಲೆಯ ಮೇಲಿಟ್ಟುಕೊಂಡು ರಜತ ಪೀಠಪುರದೊಳಕ್ಕೆ ಬಂದು, ಒಂದು ಸರೋವರದ ತೀರದ ಮೇಲೆ ಆ ಮೂರ್ತಿಯನ್ನು ಸ್ಥಾಪಿಸಿದರು. ಈ ಸರೋವರವೇ **ಮಧ್ವಸರೋವರ** ವೆಂದು ಈಗಲೂ ಹೆಸರಾಗಿದೆ. ಬ್ರಹ್ಮಚರ್ಯದಿಂದಲೇ ಸನ್ಯಾಸ ವನ್ನು ಪಡೆದ ಎಂಟು ಜನ ಯತಿಗಳಿಂದ ಈ ಕೃಷ್ಣನ ಪೂಜೆಯು ನಡೆ ಯುವಂತೆ ಆಚಾರ್ಯರು ಪರ್ಯಾಯ ನಿರ್ಬಂಧನೆಯನ್ನು ಮಾಡಿದರು. ಅದರಂತೆ ಈಗಲೂ ನಡೆಯುತ್ತಿದೆ.

ಮುಂದೆ ಆನಂದತೀರ್ಥರು ಸ್ವಹಸ್ತದಿಂದಲೇ ಶಿಲ್ಪಶಾಸ್ತ್ರ ದಂತೆ ಪಂಚಲೋಹದ ಹದಿನೇಳು ಪ್ರತಿಮೆಗಳನ್ನು ಮಾಡಿ ಎಂಟು, ಎಂಟು ಜನ ಗೃಹಸ್ಥಾಶ್ರಮಿಗಳಿಗೆ ಕೊಟ್ಟರು; ಎಂಟು, ಎಂಟು ಮಠದ ಯತಿಗಳಿಗೆ ಕೊಟ್ಟರು; ಒಂದನ್ನು ತಮ್ಮ ಬಳಿಯಲ್ಲಿಯೇ ಪೂಜೆಗಾಗಿ ಇಟ್ಟುಕೊಂಡರು.

## ಎಂಟು ಗೃಹಸ್ಥರು

| | ಪ್ರತಿಮೆಯ ಹೆಸರು | ತೆಕ್ಕೊಂಡವರ ಹೆಸರು |
|---|---|---|
| ೧ | ಶ್ರೀ ಲಕ್ಷ್ಮೀನಾರಾಯಣ | ಶ್ರೀನಿವಾಸ ಬಲ್ಲಾಳ, ಪೂರ್ವಾಲಯ ಮಠ |
| ೨ | ಶ್ರೀ ವರಹ ದೇವರು | ವ್ಯಾಸರಾಯ ಬಲ್ಲಾಳ, ಪಶ್ಚಿಮಾಲಯ ಮಠ |
| ೩ | ದೇವರ ಪ್ರತಿಮೆ | ಪಂಡಿತರು |
| ೪ | ಶ್ರೀ ಕೇಶವದೇವರು | ವೆಂಕಟರಮಣ ಉಪಾಧ್ಯಾಯ, ರಂಕಿಯ ಮಠ |
| ೫ | ಶ್ರೀ ಹಸ್ತಗತಲಕ್ಷ್ಮೀನೃಸಿಂಹ | ತ್ರಿವಿಕ್ರಮ ಪಂಡಿತಾಚಾರ್ಯರು, ಕರ್ತವ ಮಠ |
| ೬ | ಶ್ರೀ ವಿಠ್ಠಲಮೂರ್ತಿ | ವೆಂಕಟರಮಣ ಪಂಡಿತ, ಕುಂಜರಾಜ ಮಠ |
| ೭ | ಶ್ರೀ ಗೋಪಾಲಕೃಷ್ಣ | ಹರಿಪಂಡಿತ, ಮಂಜನಾತಿ ಮಠ |
| ೮ | ಶ್ರೀ ಅನಂತ ಪದ್ಮನಾಭೇಶ್ವರ | ಅಧ್ಯಾಪಕರು, ಹೂವಿನಕೇರಿಯ ಮಠ |

## ಎಂಟು ಯತಿಗಳು

| ಪ್ರತಿಮೆಯ ಹೆಸರು | ತೆಕ್ಕೊಂಡವರ ಹೆಸರು |
|---|---|
| ೧ ಶ್ರೀ ರಾಮದೇವರು | ಶ್ರೀ ಹೃಷೀಕೇಶತೀರ್ಥರು, ಪಲುಮಾರ ಮಠ |
| ೨ ಶ್ರೀ ಕಾಲಿಯಾಮರ್ದನ ಚತುರ್ಭುಜ ಕೃಷ್ಣ | ಶ್ರೀ ನರಸಿಂಹತೀರ್ಥರು, ಅದಮಾರು ಮಠ |
| ೩ ಶ್ರೀ ಕಾಲಿಯಾಮರ್ದನ ದ್ವಿಭುಜ ಕೃಷ್ಣ | ಶ್ರೀ ಜನಾರ್ದನತೀರ್ಥರು, ಕೃಷ್ಣಾಪುರ ಮಠ |
| ೪ ಶ್ರೀ ವಿಠ್ಠಲದೇವರು | ಶ್ರೀ ಉಪೇಂದ್ರತೀರ್ಥರು, ಪುತ್ತಿಗೆಯ ಮಠ |
| ೫ ಶ್ರೀ ಯೋಗಪಟ್ಟಧಾರಕ ವಿಠ್ಠಲದೇವರು | ಶ್ರೀ ವಾಮನತೀರ್ಥರು, ಶಿರೂರ ಮಠ |
| ೬ ಶ್ರೀ ಭೂವರಹದೇವರು | ಶ್ರೀ ವಿಷ್ಣುತೀರ್ಥರು, ಸೋದೆಯ ಮಠ |
| ೭ ಶ್ರೀ ನರಸಿಂಹದೇವರು | ಶ್ರೀ ರಾಮತೀರ್ಥರು, ಕಾಣೂರ ಮಠ |
| ೮ ಶ್ರೀ ವಿಜಯ ವಿಠ್ಠಲ ದೇವರು | ಶ್ರೀ ಅಧೋಕ್ಷಜತೀರ್ಥರು, ಪೇಜಾವರ ಮಠ |
| ೧ ಶ್ರೀ ದಿಗ್ವಿಜಯ ರಾಮ ದೇವರು | ಆಚಾರ್ಯರ ನಿತ್ಯಾರ್ಚನೆಯ ಪ್ರತಿಮೆ |

ಎಂಟು ಮಠದ ಯತಿಗಳಿಗೆ ಕೊಟ್ಟಂಥ ಪ್ರತಿಮೆಗಳು ಈಗಲೂ ಪರಂಪರೆಯಿಂದ ಪೂಜೆಗೊಳ್ಳುತ್ತಲಿವೆ. ತಮ್ಮ ಗುರುಗಳಾದ ಅಚ್ಯುತ ಪ್ರೇಕ್ಷಾಚಾರ್ಯಕರಾರ್ಚಿತ ಶ್ರೀದಾಮೋದರ ಶಾಲಗ್ರಾಮವನ್ನೂ ಶ್ರೀರಾಮದೇವರ ಪ್ರತಿಮೆಯನ್ನೂ ಅವರಿಂದ ಆಶ್ರಮವನ್ನು ಪಡೆದ **ಸತ್ಯತೀರ್ಥ**ರಿಗೆ ಕೊಟ್ಟು ಆಚಾರ್ಯರು ಅವರಿಗೆ **ಭೀಮನಕಟ್ಟೆ**ಯ ಮಠದವರೆಂದು ಕರೆದರು. ತಮ್ಮ ಪೂರ್ವಾಶ್ರಮದ ತಂದೆಗಳಾದ ಮಧ್ಯಗೇಹಭಟ್ಟರು ಪೂಜೆ ಮಾಡುತ್ತಿದ್ದ ಶ್ರೀನರಸಿಂಹದೇವರ

ಮೂರ್ತಿಯನ್ನು **ನರಸಿಂಹತೀರ್ಥ**ರೆಂಬವರಿಗೆ ಕೊಟ್ಟು ಸುಬ್ರಹ್ಮಣ್ಯ ಉಡಪಿಗಳ ಮಧ್ಯದಲ್ಲಿ **ಮಧ್ಯತಾಳಾಡು** ಎಂಬ ಮಠವನ್ನು ಸ್ಥಾಪಿಸಿದರು. ಸಂಚಾರದಲ್ಲಿದ್ದಾಗ ಅಚ್ಯುತಪ್ರೇಕ್ಷಾಚಾರ್ಯಕರಾರ್ಚಿತ ಶ್ರೀಕೃಷ್ಣಪ್ರತಿಮೆಯನ್ನು **ಸುಬ್ರಹ್ಮಣ್ಯತೀರ್ಥ**ರೆಂಬವರಿಗೆ ಕೊಟ್ಟು **ಸುಬ್ರಹ್ಮಣ್ಯ** ಮಠವನ್ನು ಸ್ಥಾಪನೆ ಮಾಡಿದರು. ತಾವು ಸ್ಥಾಪಿಸಿದ ಎಲ್ಲ ಮಠದ ಮೂಲ ಪುರುಷರಿಗೂ ಆಚಾರ್ಯರು ಜಗದಲ್ಲೆಲ್ಲ ದ್ವೈತ ಮತ ಪ್ರಚಾರಕ್ಕಾಗಿ ವೈಷ್ಣವ ದೀಕ್ಷಾ ಸಂಪ್ರದಾಯ ಪೂರ್ವಕವಾಗಿ ಪಟ್ಟಾಭಿಷೇಕವನ್ನು ಮಾಡಿದರು. ಅವರವರ ಮಠದ ಶಿಷ್ಯರಿಗೆ ಮಂತ್ರೋಪದೇಶ, ತಪ್ತಮುದ್ರೆಯನ್ನು ಕೊಡುವ ಅಧಿಕಾರವನ್ನು ಕೊಟ್ಟು ಈ ಪ್ರಕಾರಕ್ಕೆ ಅಲ್ಲಲ್ಲಿಯ ರಾಜರಿಂದ ಶಾಸನ ಮಾಡಿಸಿದ್ದಾರೆ.

ಇಂತು ಕೆಲಸವನ್ನು ಮಾಡಿ ಶ್ರೀವಾಯುದೇವರ ಮೂರನೆಯ ಅವತಾರವಾದ ಶ್ರೀಮಧ್ವಾಚಾರ್ಯರು **ಹಿರಿಯ ಬದರಿಕಾಶ್ರಮಕ್ಕೆ** ಹೋದರು. ಅಲ್ಲಿ ಶ್ರೀವೇದವ್ಯಾಸರಿಂದ ಅವರು **ಮಳಲಮುಟ್ಟಿಗೆಯ** ಶ್ರೀವೇದವ್ಯಾಸದೇವರನ್ನು ಪಡೆದರು. ಆ ಮೇಲೆ ಆಚಾರ್ಯರು ಉಡಪಿಗೆ ಬಂದು ನರಹರಿತೀರ್ಥರಿಂದ ಒಡ್ಡೀ ಜಗನ್ನಾಥಪುರಿಯಲ್ಲಿ ಅಂತರ್ಭೂತವಾಗಿದ್ದ ಬ್ರಹ್ಮಕರಾರ್ಚಿತ ಶ್ರೀಮೂಲಸೀತಾರಾಮ ದೇವರ ಪ್ರತಿಮೆಗಳನ್ನು ಚತುರೋಪಾಯದಿಂದ ತೆರಿಸಿಕೊಂಡು ಅವನ್ನು ಕೆಲವು ದಿನಗಳ ವರೆಗೆ ಪೂಜೆಯನ್ನು ಮಾಡಿದರು.

ಶ್ರೀಮದಾನಂದತೀರ್ಥರಿಗೆ ೧. ಪದ್ಮನಾಭತೀರ್ಥರು ೨. ನರಹರಿತೀರ್ಥರು ೩. ಮಾಧವತೀರ್ಥರು ೪. ಅಕ್ಷೋಭ್ಯತೀರ್ಥರು ಈ ನಾಲ್ವರು ಶಿಷ್ಯರು. ಇವರು ಉತ್ತರಾದಿಮಠದ ಮಹಾಸಂಸ್ಥಾನ ಪೂಜೆಯನ್ನು ಕ್ರಮವಾಗಿ ಮಾಡುವದೆಂದು ಆಚಾರ್ಯರು ವಿಧಿಸಿದರು. ತಮ್ಮ ಮತ್ತು ತಮ್ಮ ಶಿಷ್ಯರ ಪುಸ್ತಕಭಾರವನ್ನೇ ವಹಿಸುವ ಎತ್ತಿಗೆ ತಮ್ಮ ಗ್ರಂಥಗಳಿಗೆ ವಿಶದವಾಗಿ ಟೀಕೆಯನ್ನು ಬರೆಯುವಂತೆ ಅನುಗ್ರಹ ಮಾಡಿದರು. ಈ ಎತ್ತೇ ಮುಂದೆ ಟೀಕಾರಾಯರು ಅಥವಾ **ಜಯತೀರ್ಥ**ರೆಂದು ಹೆಸರು ಪಡೆಯಿತು. ಶ್ರೀಮೂಲಸೀತಾರಾಮ ದೇವರ ಪೂಜೆಯು ಮೇಲಿನ ನಾಲ್ವರು ಶಿಷ್ಯರಿಂದ ಕ್ರಮವಾಗಿ

ಸಾಗಿತು. ಶ್ರೀಮದಾಚಾರ್ಯರ ಸವಿಸ್ತರವಾದ ಮಹಿಮೆಯು **ನಾರಾಯಣ ಪಂಡಿತಾಚಾರ್ಯ**ರಿಂದ ವಿರಚಿತವಾದ **ಸುಮಧ್ವವಿಜಯ**ದಲ್ಲಿ ಚೆನ್ನಾಗಿ ವರ್ಣಿಸಲ್ಪಟ್ಟಿದೆ.

ಹೀಗೆ ಶ್ರೀಮಧ್ವಾಚಾರ್ಯರು **ದ್ವೈತ ಸಿದ್ಧಾಂತ ಸ್ಥಾಪನಾಚಾರ್ಯ**ರೆಂಬುದಾಗಿ ಹೆಸರನ್ನು ಹೊಂದಿ ತಮ್ಮ ಶಿಷ್ಯರಲ್ಲಿ ಮೊದಲಿನವರಾದ ಪದ್ಮನಾಭತೀರ್ಥರಿಗೆ ಉತ್ತರಾದಿ ಮಠಕ್ಕೆ ಪಟ್ಟಗಟ್ಟಿ ಅವರಿಗೆ ಪ್ರಣವೋಪದೇಶವನ್ನು ಮಾಡಿದರು. ಮುಂದೊಮ್ಮೆ ಶಾಲಿವಾಹನ ಶಕೆ ೧೧೨೦ನೇ ಪಿಂಗಳ ಸಂವತ್ಸರದ ಮಾಘ ಶುದ್ಧ ೯ ದಿವಸ ಶ್ರೀಚಂದ್ರ ಮೌಳೀಶ್ವರನ ಗುಡಿಯಲ್ಲಿ ಶಿಷ್ಯರಿಗೆ ಆಚಾರ್ಯರು ಐತರೇಯ ಭಾಷ್ಯದ ಪಾಠವನ್ನು ಹೇಳುವ ಸಮಯದಲ್ಲಿ ಪುಷ್ಪವೃಷ್ಟಿಯಾಗ ಹತ್ತಿತು. ಶಿಷ್ಯರು ಆಶ್ಚರ್ಯಭರಿತರಾಗಿ ಗುರುಗಳಿಗೆ ಇದರ ಕಾರಣವನ್ನು ಕೇಳಲು ಶ್ರೀಮದಾಚಾರ್ಯರು ತಮ್ಮನ್ನು ಶ್ರೀವೇದವ್ಯಾಸರು ಕರೆಕಳುಹಿದ್ದಾರೆಂದು ತಿಳುಹಿ ಆ ಪುಷ್ಪವೃಷ್ಟಿಲ್ಲಿಯೇ ಅಂತರ್ಧಾನರಾಗಿ ಇಳಾವೃತಪರ್ವತ ಭದ್ರಾಶ್ವಖಂಡ ಇವುಗಳ ಮಧ್ಯದಲ್ಲಿ ಮೇರುಪರ್ವತದ ಪೂರ್ವಕ್ಕಿರುವ ಪರ್ವತದ ನಡುವಿರುವ, **ದೊಡ್ಡ ಬದರಿಕಾಶ್ರಮಕ್ಕೆ** ತೆರಳಿ ಹೋದರು.

## ೨ ಶ್ರೀಪದ್ಮನಾಭತೀರ್ಥರು



**ಪಟ್ಟ:- ೯-೧೧-೧೧೨೦ನೇ ಪಿಂಗಳದಿಂದ ೨೯-೮-೧೧೨೭ನೇ ರಕ್ತಾಕ್ಷಿಯು ವರೆಗೆ**

ಇವರ ಪೂರ್ವಾಶ್ರಮದ ಹೆಸರು **ಆನಂದಭಟ್ಟರು.** ಇವರು ಶ್ರೀ ಪೂರ್ಣಪ್ರಜ್ಞರ ಮೊದಲನೆಯ ಶಿಷ್ಯರು. ಸರ್ವಜ್ಞರು ಬದರಿಕಾಶ್ರಮಕ್ಕೆ ಹೋದನಂತರ ಈ ತೀರ್ಥರು ಅನೇಕ ದೇಶಗಳನ್ನು ಸಂಚರಿಸಿ ಅಲ್ಲಲ್ಲಿಯ ಬಹು ಜನ ಅದ್ವೈತಿಗಳನ್ನು ವಾದದಲ್ಲಿ ಗೆದ್ದು ಅವರಿಗೆ ಮಂತ್ರೋಪದೇಶ ಮುದ್ರಾಧಾರಣೆಗಳನ್ನು ಕೊಟ್ಟು ದ್ವೈತಮತವನ್ನು ವೃದ್ಧಿಗೊಳಿಸಿದರು. ಇವರು ರಚಿಸಿದ ಗ್ರಂಥಗಳು. ೧ ಆನಂದ

ಮಾಲಾ. ೨ ಸನ್ನ್ಯಾಯರತ್ನಾವಳಿ. ೩ ಸತ್ತರ್ಕರತ್ನಾವಳಿ ಮುಂತಾದವು.

ಇವರು ಆನೆಯಗುಂದೆಯ ರಾಜರಿಂದ ಬಹು ಮನ್ನಿಸಲ್ಪಟ್ಟರು. ಕಡೆಗೆ **ದಕ್ಷಿಣಕಾಶಿ**ಯೆಂದು ಪ್ರಸಿದ್ಧಿಯನ್ನು ಪಡೆದ **ಹಂಪೆಯ** ಬಳಿಯಲ್ಲಿಯ ತುಂಗಭದ್ರೆಯ ಮಧ್ಯಸ್ಥ ದ್ವೀಪವಾದ **ನವವೃಂದಾವನ**ದಲ್ಲಿ ೧೧೨೭ನೇ ರಕ್ತಾಕ್ಷಿ ಕಾರ್ತಿಕ ವ ೧೪ ದಿನ ವೃಂದಾವನಸ್ಥರಾದರು. ಇವರು **ಶೇಷಾಂಶ**ರೆಂದು ಪ್ರಸಿದ್ಧಿಯಿದೆ.

## ೩ ಶ್ರೀನರಹರಿತೀರ್ಥರು

ಪಟ್ಟ:- ೨೯-೮-೧೧೨೭ ರಕ್ತಾಕ್ಷಿಯಿಂದ ೨೨-೧೦-೧೧೩೬ನೇ ಶ್ರೀಮುಖದ ವರೆಗೆ

ಇವರು ಶ್ರೀಮದಾಚಾರ್ಯರ ಎರಡನೆಯ ಶಿಷ್ಯರು. ಇವರ ಪೂರ್ವಾಶ್ರಮದ ಹೆಸರು **ಶಾಮಶಾಸ್ತ್ರಿ**ಗಳು. ಇವರನ್ನೇ ಸರ್ವಜ್ಞರು ಶ್ರೀಮೂಲಸೀತಾರಾಮ ಪ್ರತಿಮೆಗಳನ್ನು ತರುವದಕ್ಕೋಸುಗ ಒಡ್ಡಿಯ ಜಗನ್ನಾಥಪುರಿಗೆ ಕಳುಹಿದ್ದರು. ಇವರು ಅಲ್ಲಿಗೆ ಹೋದಾಗ ಅಲ್ಲಿಯ ಅರಸನು ಮರಣಹೊಂದಿದ್ದನು. ರಾಣಿಯು ಗರ್ಭಿಣಿಯಿದ್ದಳು. ಆಕೆಯು ಹಡೆಯುವವರೆಗೆ ಆರು ಅರಸರಾಗಬೇಕೆಂಬ ನಿರ್ಣಯಕ್ಕಾಗಿ ಮಂತ್ರಿಗಳು ಆನೆಯ ಶುಂಡಲಿನಲ್ಲಿ ಹೂಮಾಲೆಯನ್ನು ಕೊಟ್ಟಿದ್ದರು. ಭಗವದಿಚ್ಛೆಯಿಂದಲೇ ಆ ಆನೆಯು ಪುರಪ್ರವೇಶವನ್ನು ಮಾಡುತ್ತಲಿರುವ ಈ ಶ್ರೀಗಳ ಕೊರಳಲ್ಲಿ ಮಾಲೆಯನ್ನು ಹಾಕಿತು. ಇದನ್ನು ನೋಡಿ ಪಟ್ಟಣಿಗರಿಗೆ ಬಹು ಸಂತೋಷವಾಯಿತು. ಮಂತ್ರಿ ಮೊದಲಾದವರೆಲ್ಲರೂ ಸಕಲ ವೈಭವಗಳೊಡನೆ ಶ್ರೀಗಳನ್ನು ಕರೆದೊಯ್ದು ರಾಜ್ಯವನ್ನು ಅವರಿಗೆ ಒಪ್ಪಿಸಿದರು.

ಶ್ರೀಪಾದಾನುಗ್ರಹದಿಂದ ರಾಣಿಯು ಗಂಡುಗೂಸನ್ನು ಹೆತ್ತಳು. ರಾಜಪುತ್ರನು ವಯಸ್ಸಿಗೆ ಬರುವ ತನಕ ಚೆನ್ನಾಗಿ ರಾಜ್ಯಕಾರಭಾರವನ್ನು ಮಾಡುತ್ತಿದ್ದು ಮುಂದೆ ಅವನ ರಾಜ್ಯವನ್ನು ಅವನಿಗೆ ಒಪ್ಪಿಸಿ ರಾಣಿಯವರಿಗೆ ತಾವು ಹೋಗುವದಕ್ಕೆ ಅಪ್ಪಣೆಯನ್ನು ಕೇಳಿ

ದರು. ಈವರೆಗೆ ಶ್ರೀಗಳಿಂದಾದ ಉಪಕಾರವನ್ನು ಸ್ಮರಿಸಿ ರಾಜ್ಞಿಯು ತನ್ನಿಂದ ತುಸು ಸೇವೆಯನ್ನು ಕೈಕೊಳ್ಳುವುದೆಂದು ಶ್ರೀಪಾದರಿಗೆ ಬೇಡಿಕೊಂಡಳು. ತಾವು ಯತಿಗಳಾದ್ದರಿಂದ ಯಾವ ಪದಾರ್ಥವೂ ತಮಗೆ ಬೇಕಿಲ್ಲೆಂದು ಅವರು ಹೇಳಿದರು. ಶ್ರೀಗಳು ರಾಣಿಯವರನ್ನು ಸಂತೋಷಗೊಳಿಸಲೆಂದೇ ಏನನ್ನಾದರೂ ಸ್ವೀಕರಿಸಲೆಂದಾದರೆ ತಮಗೆ ಕೋಶಾಗಾರದ ಗೋಡೆಯಲ್ಲಿರುವ ಶ್ರೀಸೀತಾರಾಮರ ಪ್ರತಿಮೆಗಳನ್ನು ಕೊಟ್ಟರೆ ಸ್ವೀಕರಿಸುವೆವೆಂದು ಹೇಳಿದರು. ರಾಣಿಯವರು ಇದಕ್ಕೆ ಆನಂದದಿಂದ ಒಪ್ಪಿದರು. ಶ್ರೀಗಳವರು ಪ್ರತಿಮೆಗಳನ್ನು ತಕ್ಕೊಂಡು ಸ್ವಲ್ಪ ದೂರ ಹೋಗುವಷ್ಟರಲ್ಲಿಯೇ ಕೋಶಾಗಾರಕ್ಕೆ ಭುಗಿಲೆಂದು ಬೆಂಕಿಯು ಹತ್ತಿತು. ಶ್ರೀಗಳು ಪ್ರತಿಮೆಗಳನ್ನು ಒಯ್ದುದರಿಂದಲೇ ಹೀಗಾಯಿತೆಂದು ತಿಳಿದು ಮಂತ್ರಿಗಳು ಶ್ರೀಗಳನ್ನು ಚಾರರಿಂದ ಬೆನ್ನಟ್ಟಿಸಿದರು.

ಇಷ್ಟರಲ್ಲಿ ಶ್ರೀಗಳು **ಕೂರ್ಮಕ್ಷೇತ್ರ**ವೆಂಬ ಸ್ಥಳಕ್ಕೆ ಬಂದಿದ್ದರು. ಚಾರರ ಬರವನ್ನು ದಿವ್ಯದೃಷ್ಟಿಯಿಂದ ಈ ಮೊದಲೇ ತಿಳಿದುಕೊಂಡು ಅವರು ಕೂರ್ಮನಾಥನ ಗುಡಿಯಲ್ಲಿ ಬೇರೆ ಮೂರ್ತಿಗಳನ್ನು ಸ್ಥಾಪಿಸಿ ಮೂಲ ಪ್ರತಿಮೆಗಳನ್ನು ಬಚ್ಚಿಟ್ಟುಕೊಂಡು ಕುಳಿತಿದ್ದರು. ಇಷ್ಟರಲ್ಲಿ ಅರಸಾಳುಗಳು ಅಲ್ಲಿಗೆ ಬಂದುಬಿಟ್ಟರು. ಪ್ರತಿಮೆಗಳನ್ನು ಕೊಡಲೀ ಬೇಕೆಂದು ಅವರು ಶ್ರೀಗಳನ್ನು ಬಲುಮೆಪಡಿಸಿದರು. ಸ್ಥಾಪಿಸಿದ ಪ್ರತಿಮೆಗಳನ್ನು ಕೊಂಡು ಹೋಗಬಹುದೆಂದು ಅವರಿಗೆ ಶ್ರೀಗಳು ಹೇಳಿದರು. ಅರಸಾಳುಗಳಿಗೆ ಆ ಪ್ರತಿಮೆಗಳನ್ನು ಕಿತ್ತಿಗೊಳ್ಳಲಾಗದೆ ಕಡೆಗೆ ಅವರು ಆನೆಯನ್ನು ಹಚ್ಚಿ ಜಗ್ಗಿಸಿದರು. ಆದರೆ ಎಲ್ಲವೂ ವ್ಯರ್ಥ. ಕಡೆಗೆ ರಾಜಭಟರು ಹತಾಶರಾಗಿ ಹೊರಟು ಹೋದರು.

ಭಟರು ಅಲ್ಲಿಂದ ಕದಲಿದ ಕೂಡಲೆ ರಹಸ್ಯವಾಗಿ ಶ್ರೀನರಹರಿತೀರ್ಥರು ಶ್ರೀಮೂಲಸೀತಾರಾಮರ ಪ್ರತಿಮೆಗಳನ್ನು ನಡುನಡುವೆ ಕುದುರೆಗಳ ವ್ಯವಸ್ಥೆಯನ್ನು ಮಾಡಿಕೊಂಡು ಗುರುಗಳಾದ ಪೂರ್ಣಪ್ರಜ್ಞರಿಗೆ ತಂದೊಪ್ಪಿಸಿದರು. ಈ ಪ್ರತಿಮೆಗಳೇ ಈಗ ಉತ್ತರಾದಿ ಮಠದಲ್ಲಿವೆ.

ಶ್ರೀಪದ್ಮನಾಭತೀರ್ಥರಿಂದ ಈ ಶ್ರೀನರಹರಿತೀರ್ಥರು ಪಟ್ಟವನ್ನು ಪಡೆದು ದೇಶಸಂಚಾರ ಮಾಡುತ್ತ ದ್ವೈತ ಮತ ಪ್ರಸಾರ ಮಾಡಿದರು. ಇವರ ಸಂಚಾರವು ಉತ್ತರ ದೇಶದಲ್ಲಿ ಹೆಚ್ಚಾಗಿ ಅಲ್ಲಿಯೇ ಇವರ ಪ್ರಸಿದ್ಧಿಯಾದ್ದರಿಂದ ಅಂದಿನಿಂದ ಅವರ ಮಠಕ್ಕೆ **ಉತ್ತರಾದಿ ಮಠ**ವೆಂದು ಹೆಸರಾಯಿತು.

ಇವರು ಶ್ರೀಮದಾಚಾರ್ಯರ ಯಮಕಭಾರತಕ್ಕೆ ವ್ಯಾಖ್ಯಾನವನ್ನೂ ದಶೋಪನಿಷತ್ತುಗಳಿಗೆ ಟೀಕೆಯನ್ನೂ, ಸೂತ್ರಭಾಷ್ಯಕ್ಕೆ ಟೀಕೆಯನ್ನೂ ಮಾಡಿದ್ದಾರೆ.

ಒಮ್ಮೆ ಹೊಸಪೇಟೆಯ ಹತ್ತಿರವಿರುವ ನಾರಾಯಣದೇವರಕೆರೆಗೆ ಸಂಚಾರ ಮಾಡುತ್ತ ಬಂದಾಗ ಇವರು ತಮ್ಮ ಬಟ್ಟೆಗಳನ್ನು ಆ ಕೆರೆಯ ಒಂದು ಕಲ್ಲಿನ ಮೇಲೆ ಒಗೆದರು. ಅಂದು ರಾತ್ರಿ ಅವರ ಕನಸಿನಲ್ಲಿ ದೇವರು ಬಂದು ಒಗೆಯಲಿಕ್ಕೆ ಉಪಯೋಗಿಸಿದ ಶಿಲೆಯು ತಮ್ಮ ಪ್ರತಿಮೆಯಾದ್ದರಿಂದ ಅದನ್ನು ಪ್ರತಿಷ್ಠಾಪಿಸಬೇಕೆಂದು ಆಜ್ಞಾಪಿಸಿದರು. ಆ ಮೇರೆಗೆ ಮರುದಿನವೇ ಅವರು ಬಹು ಆನಂದದಿಂದ ಆ ಪ್ರತಿಮೆಯನ್ನು ತಂದು ಸ್ಥಾಪಿಸಿದರು. **ನಾರಾಯಣದೇವರಕೆರೆ** ಯೆಂಬ ಹೆಸರು ಬರಲು ಇದೇ ಕಾರಣ.

ಇವರು ೯ ವರ್ಷಗಳ ತನಕ ಉತ್ತರಾದಿ ಮಠದ ಪಟ್ಟವಾಳಿ ೧೧೪೬ನೇ ಶ್ರೀಮುಖ ಸಂವತ್ಸರದ ಪುಷ್ಯ ಶುದ್ಧ ಸಪ್ತಮಿಯ ದಿವಸ ನಾರಾಯಣಧ್ಯಾನ ಪರರಾದರು. ಇವರ ವೃಂದಾವನವು ಹಂಪೆಯ ತುಂಗಭದ್ರೆಯ ಚಕ್ರತೀರ್ಥದ ಸಮೀಪದಲ್ಲಿದೆ.

# ೪ ಶ್ರೀಮಾಧವತೀರ್ಥರು



ಪಟ್ಟ:- ೨೨-೧೦-೧೧೪೬ನೇ ಶ್ರೀಮುಖದಿಂದ ೩೦-೬-೧೧೫೨ನೇ ವಿಕೃತಿಯ ವರೆಗೆ

ಇವರು ಸರ್ವಜ್ಞರ ಸಾಕ್ಷಾತ್ ಶಿಷ್ಯರಲ್ಲಿ ಮೂರನೆಯವರು. ಇವರ ಪೂರ್ವಾಶ್ರಮದ ಹೆಸರು **ವಿಷ್ಣುಶಾಸ್ತ್ರಿ**ಯೆಂದಿತ್ತು. ಶ್ರೀನರಹರಿತೀರ್ಥರಿಂದ ಉತ್ತರಾದಿ ಪೀಠವನ್ನು ಪಡೆದು ಇವರು ಭಕ್ತರಿಗೆ

ಶ್ರೀರಾಮವೇದವ್ಯಾಸರ ಸಂದರ್ಶನವನ್ನೀಯುತ್ತ ಅಲ್ಲಲ್ಲಿ ಅದ್ವೈತ ವಾದಿಗಳನ್ನು ಗೆಲ್ಲುತ್ತ ಬಹು ಕಡೆಗೆ ಸಂಚರಿಸಿದರು.

ಇವರು ಋಗ್ವೇದ-ಯಜುರ್ವೇದ- ಸಾಮವೇದಗಳಿಗೆ ವ್ಯಾಖ್ಯಾನ ವನ್ನು ರಚಿಸಿದ್ದಾರೆ.

ಈ ಶ್ರೀಗಳು ಶ್ರೀಮೂಲಸೀತಾರಾಮವೇವರು, ಮಳಲಮುಕ್ಟಿಗೆಯು ಶ್ರೀವೇದವ್ಯಾಸರು ಮುಂತಾಗಿ ೨೮ ಪದಾರ್ಥಗಳುಳ್ಳ ಸಂಸ್ಥಾನವನ್ನು ಪೂಜೆಮಾಡಿದರೆಂದು ಈ ಕೆಳಗಿನ ಶ್ಲೋಕದಿಂದ ತಿಳಿಯುತ್ತದೆ.

> ಲಕ್ಷ್ಮೀನಾರಾಯಣಶ್ರೀಹಯಮುಖದಧಿಕೃದ್ವಾಮಶ್ರೀಧರಾಖ್ಯಾನ್ ।
> ವ್ಯಾಸಶ್ರೀಜೇತುರಾಪಾನಪನಿಜಸಹಿತ ಶ್ರೀಜಗನ್ಮೂಲರಾಮಾನ್ ॥
> ವಂದೇ ಶ್ರೀರಾಮನಿಷ್ಕಾಮಮಿತಸುತಸತ್ಪಂಚಸೌದರ್ಶನಾಖ್ಯಾನ್ ।
> ಪಂಚಾರ್ಯಾಂಕಾಂ ದ್ವಿಬಾಣೌ ಭುಜಯುಗಸಹಿತಾಮಕ್ಷಯಾಖ್ಯಂ ಚ ಪಾತ್ರಮ್ ॥

೧ ಶ್ರೀ ಲಕ್ಷ್ಮೀನಾರಾಯಣ
೧ ಶ್ರೀ ದಧಿವಾಮನ
೫ ಶ್ರೀ ವೇದವ್ಯಾಸರ ಮಳಲು ಮುಟ್ಟಿಗೆ
೧ ಶ್ರೀ ಮೂಲ ಸೀತಾದೇವಿಯರು
೫ ಸುದರ್ಶನಗಳು
೨ ಬಾಣ
೨ ಬಲಮೂಡಿ ಶಂಖ
೧ ಶ್ರೀ ಹಯಗ್ರೀವ
೧ ಶ್ರೀ ಶ್ರೀಧರ
೧ ಶ್ರೀ ದಿಗ್ವಿಜಯ ರಾಮದೇವರು
೧ ಶ್ರೀ ಮೂಲರಾಮದೇವರು
೧ ಶ್ರೀ ರಾಮಟಂಕಿ ವರಹಗಳು
೫ ಚಕ್ರಾಂಕಿತ
೧ ಅಕ್ಷಯಪಾತ್ರೆ
ಒಟ್ಟು ೨೮

ಇವರು ೧೭ ವರ್ಷ ಸಂಸ್ಥಾನವನ್ನಾಳಿದರು. ಆ ಮೇಲೆ ಆನೆಯಗುಂದೆಯಲ್ಲಿ ೧೨೫೨ನೇ ವಿಕೃತಿ ಸಂವತ್ಸರದ ಭಾದ್ರಪದ ವದ್ಯ ೩೦ ದಿವಸ ಶ್ರೀರಾಮಧ್ಯಾನತತ್ಪರರಾದರು. ಆ ಕಾಲಕ್ಕೆ ಮುಸಲ್ಮಾನರ ಹಾವಳಿಯು ಬಹಳವಾಗಿದ್ದುದರಿಂದ **ಭೀಮರಥೀ ನದಿಯ** ದಂಡೆಯ ಮೇಲಿನ (ಖ್ಯಾಡ) **ಮಣ್ಣೂರೆಂಬಲ್ಲಿ** ಇವರ ೨ನೆಯ ವೃಂದಾವನವಾಗಿದೆ. ಇವರು **ಗರುಡಾಂಶರೆಂದು** ಪ್ರಸಿದ್ಧಿಯಿದೆ.

# ೫ ಶ್ರೀ ಅಕ್ಷೋಭ್ಯತೀರ್ಥರು



**ಪಟ್ಟ:- ೩೦-೬-೧೧೫೨ನೇ ವಿಕೃತಿಯಿಂದ ೨೦-೯-೧೧೬೭ನೇ ವಿಶ್ವಾವಸುವಿನ ವರೆಗೆ**

ಇವರು ಶ್ರೀಮದಾಚಾರ್ಯರ ಶಿಷ್ಯರಲ್ಲಿ ನಾಲ್ಕನೆಯವರು. ಇವರ ಪೂರ್ವಾಶ್ರಮದ ಹೆಸರು **ಗೋವಿಂದಶಾಸ್ತ್ರಿ**ಗಳು.

ಇವರ ಕಾಲದಲ್ಲಿ **ವಿದ್ಯಾರಣ್ಯ** ( ಪೂರ್ವಾಶ್ರಮದ ಹೆಸರು **ಮಾಧವಾಚಾರ್ಯ**)ರೆಂಬ ಹೆಸರಿನ ಒಬ್ಬ ಘನ **ಪಂಡಿತರು** ಅದ್ವೈತವಿದ್ಯೆಯಲ್ಲಿ ಬಲು ಪ್ರಾಬಲ್ಯವನ್ನು ಹೊಂದಿದ್ದರು. **ಈ ಪಂಡಿತ**ರಲ್ಲಿ ದ್ರವ್ಯ ಬಲಕ್ಕಂತೂ ಮೇರೆಯೇ ಇರಲಿಲ್ಲ. ವಿಜಯನಗರದ ಅರಸರಲ್ಲಿ ಇವರಿಗೆ ಮನ್ನಣೆಯು ಬಹಳ. ಇಂತಹರೊಡನೆ ಶ್ರೀಗಳು ವಾದಮಾಡುವದೆಂದು ಬಯಸಿದರು. ಆದರೆ ರಾಜಾಶ್ರಯ ಬಲದಿಂದ ಇವರ ಮಾರ್ಗಮಧ್ಯದಲ್ಲಿ ಎಡರುಗಳು ಆ ಪಂಡಿತರಿಂದ ಬಹುವಾಗಿ ಬರತೊಡಗಿದವು. ಶ್ರೀಗಳವರು ನಿರಾಶರಾದರು. ತಮ್ಮ ಬಯಕೆಯನ್ನು ಕೈಗೂಡಿಸೆಂದು ತುಂಗಭದ್ರಾತೀರದ ಕೂಡಲದ ಹತ್ತಿರದಲ್ಲಿರುವ ಶ್ರೀನೃಸಿಂಹದೇವರನ್ನೇ ಅವರು ಮೊರೆಹೊಕ್ಕರು. ಶ್ರೀನೃಸಿಂಹನು ತೀರ್ಥರ ಅನನ್ಯಭಾವನೆಯ ಸೇವೆಗೆ ಸಂತುಷ್ಟನಾದನು. ಆಗ ಕನಸಿನಲ್ಲಿ ಅವರ ಎದುರಿನಲ್ಲಿ ದೇವರು ನಿಂತು, ಎರಡು ನೀರಲಹಣ್ಣುಗಳನ್ನು ಶ್ರೀಗಳ ಕೈಯಲ್ಲಿತ್ತು, ಒಂದನ್ನು ಮಕ್ಕಳಿಲ್ಲೆಂದು ಮಿಡುಕುವ ಆನೇಗುಂದೆಯ ಅರಸನಿಗೆ ಕೊಟ್ಟು, ಮತ್ತೊಂದನ್ನು ಅವರಿಗೆ ತಿನ್ನಲು ಹೇಳಿ, ಬಯಕೆಯು ಕೈಗೂಡುವದೆಂದು ಆಶೀರ್ವದಿಸಿ ಕಣ್ಮರೆಯಾದನು.ಎಚ್ಚತ್ತು ಶ್ರೀಅಕ್ಷೋಭ್ಯರು ತಮ್ಮ ಕೈಯಲ್ಲಿಯ ಎರಡು ನೀರಲ ಹಣ್ಣುಗಳನ್ನು ನೋಡಿ ಆನಂದದಿಂದ ಆಗಲೇ ಆನೇಗುಂದೆಯ ದಾರಿಯನ್ನೇ ಹಿಡಿದರು. ಹೋದವರೇ ಶ್ರೀಗಳು ಆನೇಗುಂದೆಯ ಅರಸನಿಗೆ ತಮ್ಮ ಕನಸಿನ ಸುದ್ದಿಯನ್ನೆಲ್ಲ ವಿವರಿಸಿ ಹೇಳಿದರು. ಅರಸನು ಸಂತೋಷಗೊಂಡು ನೀರಲಹಣ್ಣನ್ನು ಸ್ವೀಕರಿಸಿ ಶ್ರೀಗಳ ಬಯಕೆಯನ್ನು ಕೈಗೂಡಿಸಿಕೊಡುವ ವಚನವನ್ನಿತ್ತನು. ಅರಸನಿಂದ

ಆಗಲೇ ವಿದ್ಯಾರಣ್ಯರಿಗೆ ಕರೆವು ಹೋಯಿತು. ವಾದದ ಸ್ಥಾನವು ಮೈಸೂರ ಇಲಾಖೆಯ ಕೊಲ್ಹಾರ ಜಿಲ್ಹೆಯ **ಮುಳಬಾಗಲ**ವೆಂದು ಗೊತ್ತಾಯಿತು. ಸಭೆಯಲ್ಲಿ ಬಹು ಜನ ಪಂಡಿತರು ನೆರೆದರು. ವಾದಕ್ಕೆ ಆರಂಭವಾಗಿ ಅನೇಕ ಶಾಸ್ತ್ರಾರ್ಥಗಳ ವಿಚಾರಣೆಯು ನಡೆದು ಕಡೆಗೆ ವಿದ್ಯಾರಣ್ಯರು ನಿರುತ್ತರರಾದರು. ಆದರೂ ಸೋತೆವೆಂಬ ಸೊಲ್ಲು ವಿದ್ಯಾರಣ್ಯರಿಂದ ಕಡೆಗೂ ಬರಲಿಲ್ಲ. ಅಗ ಶ್ರೀಗಳು ಅಸಮಾಧಾನ ವಾಗಿ '**ತತ್ತ್ವಮಸಿ**' ಎಂಬುವದರ ವಾಕ್ಯಾರ್ಥವನ್ನು ಬರೆದು ಆಗಿನ ಕಾಲದ ರಾಮಾನುಜೀಯ ಪಂಥದ ಮಹಾಪಂಡಿತರಾದ **ವೇದಾಂತ ದೇಶಿಕಾಚಾರ್ಯ**ರ ಕಡೆಗೆ ಕಳುಹಿಕೊಟ್ಟರು. ಅದನ್ನೋದಿ ಅವರು ಕೆಳಗಿನಂತೆ ಶ್ರೀಗಳಿಗೆ ಉತ್ತರವನ್ನು ಬರೆದು ಕಳುಹಿದರು:—

ಅಸಿನಾ ತತ್ತ್ವಮಸಿನಾ ಪರಜೀವಪ್ರಭೇದಿನಾ ।
ವಿದ್ಯಾರಣ್ಯಮಹಾರಣ್ಯಮಕ್ಷೋಭ್ಯಮುನಿರಚ್ಛಿನತ್ ॥

ಅರ್ಥ:- ಜೀವಬ್ರಹ್ಮರಿಗೆ ಭೇದವನ್ನು ಹೇಳುವ 'ತತ್ತ್ವಮಸಿ' ರೂಪಿಯಾದ ಖಡ್ಗದಿಂದ ಅಕ್ಷೋಭ್ಯಮುನಿಯು ವಿದ್ಯಾರಣ್ಯವೆಂಬ ದೊಡ್ಡ ಅಡವಿಯನ್ನು ಕಡಿದನು.

ಈ ಸಭೆಯಾದ ಸ್ಥಳದಲ್ಲಿ ಜಯಸ್ತಂಭವೂ ವೇದಾಂತದೇಶಿಕಾ ಚಾರ್ಯರು ಬರೆದು ಕಳುಹಿರುವ ಮೇಲಿನ ಶ್ಲೋಕವೂ ಈ ವರೆಗಾ ದರೂ ಹಾಗೇ ಇವೆ. ಇಂತನೇಕ ರೀತಿಯಿಂದ ಶ್ರೀಅಕ್ಷೋಭ್ಯತೀರ್ಥರು ಮಧ್ವಮತವನ್ನು ಎತ್ತಿಹಿಡಿದರು.

ಇನ್ನೊಮ್ಮೆ ಶ್ರೀಗಳ ಕಡೆಗೆ ಬ್ರಹ್ಮಹತ್ಯೆಯ ದೋಷದವ ನೊಬ್ಬನು ಸಾರಿಬಂದು ತನ್ನನ್ನು ಪವಿತ್ರಗೊಳಿಸುವುದೆಂದು ಅವರನ್ನು ಬೇಡಿಕೊಂಡನು. ಆಗ ಶ್ರೀಗಳು ನಿಜವಾಗಿಯೂ ಆತನಿಗೆ ಪಶ್ಚಾ ತ್ತಾಪವಾಗಿದೆಯೋ ಇಲ್ಲವೆಂಬದನ್ನು ಗುರುತಿಸುವ ಬಗ್ಗೆ ನದಿಯ ದಂಡೆಯ ಮೇಲಿನ ಅರಳೆಯ ಮರವೇರಿ ತಮ್ಮ ಆಜ್ಞೆಯನ್ನು ಮೂರು ಸಲ ಸ್ಮರಿಸಿ ಕೆಳಮೋರೆಯಿಂದ ತುದಿಟೊಂಗೆಗೆ ನೇತಾಡುತ್ತ ನದಿ ಯಲ್ಲಿ ಬೀಳುವುದೆಂದು ಅವನಿಗೆ ವಿಧಿಸಿದರು. ಆತನು ಹಾಗೆ ಮಾಡಲು

ಹಿಂಜರಿಯಲಿಲ್ಲ. ಇನ್ನು ಅವನು ನೇತ್ರಾವತಿ ನದಿಯಲ್ಲಿ ಬೀಳುವವನು, ಇಷ್ಟರಲ್ಲಿ ಶ್ರೀಗಳು ಅವನಿಗೆ ಪಶ್ಚಾತ್ತಾಪವಾದುದು ನಿಜವೆಂದರಿದು ತಮ್ಮ ಶಿಷ್ಯರಿಂದ ಅವನನ್ನು ಕೆಳಗಿಳಿಸಿಕೊಂಡರು. ಆ ದಿನದ ದೇವತಾರ್ಚನೆಯಾಗಲು ತೀರ್ಥದ ಕಾಲಕ್ಕೆ ಆ ದೋಷಿಯ ಮೇಲೆ ಶಂಖೋದಕವನ್ನು ಸಿಂಪಡಿಸಿ ಬೇರೆ ಬ್ರಾಹ್ಮಣರೊಡನೆ ಅವನಿಗೆ ಭೋಜನವನ್ನು ಮಾಡಹೇಳಿದರು. ಇದು ಜನಗಳಿಗೆ ಸರಿದೋರಲಿಲ್ಲ. ಕಂಡವರು ಕಂಡಂತೆ ಆಡಿಕೊಳ್ಳತೊಡಗಿದರು. ಆಗ ಶ್ರೀಗಳು ಒಂದು ಬಿಳಿ ಬಟ್ಟೆಯನ್ನು ತರಿಸಿ ಗೇರೆಣ್ಣೆಯಲ್ಲಿ ಅದನ್ನು ಚೆನ್ನಾಗಿ ಅದ್ದಿಸಿದರು. ಆ ಮೇಲೆ ಅದರ ಎರಡು ಭಾಗ ಮಾಡಿಸಿ ಒಂದನ್ನು ಮಠದಲ್ಲಿಟ್ಟುಕೊಂಡು ಮತ್ತೊಂದನ್ನು ಆ ಬ್ರಹ್ಮಹತ್ಯೆಯವನಿಗೆ ಕೊಟ್ಟು ಅವನಿಗೆ ಎಲ್ಲ ತೀರ್ಥಗಳನ್ನು ಸಂಚರಿಸಿ ಆ ಅರಿವೆಯನ್ನು ಅಲ್ಲಲ್ಲಿ ಅದ್ದಿ ತರುವದೆಂದು ಹೇಳಿ ಕಳುಹಿದರು. ಶ್ರೀಗಳ ಆಜ್ಞೆಯಂತೆ ಆತನು ಹೋಗಿ ಬಂದನು. ಆದರೆ ಅರಿವೆಯ ಕರಿಬಣ್ಣವು ಇನ್ನೂ ತುಸು ಉಳಿದೇ ಇತ್ತು. ಆ ಮೇಲೆ ಮಠದಲ್ಲಿಯ ಅರಿವೆಯನ್ನೂ ಶ್ರೀಗಳು ತೆಗೆಯಿಸಿ ನೆಲಕ್ಕೆ ಹಾಸಿಸಿ ಎರಡೂ ಅರಿವೆಗಳ ಮೇಲೆ ಶಂಖೋದಕವನ್ನು ಸಿಂಪಡಿಸಿದರು. ಕೂಡಲೇ ಎರಡೂ ಅರಿವೆಗಳ ಕರಿಬಣ್ಣವೆಲ್ಲ ಹರಿದು ಹೋಗಿ ಬೆಳ್ಳಗಾಗಿ ಬಿಟ್ಟವು. ಈ ಮಹಿಮೆಯನ್ನು ನೋಡಿ ನೆರೆದವರೆಲ್ಲ ಬಟ್ಟುಕಚ್ಚಿದರು. ಬ್ರಹ್ಮಹತ್ಯೆಯ ವಿಷಯದಲ್ಲಿ ಶ್ರೀಗಳವರು ಹಿಂದೆ ಮಾಡಿದ್ದು ಸರಿಯಾದದ್ದೆಂದು ಉಸುರಿದರು. ಇಂದಿನಿಂದಲೇ ಶಂಖೋದಕ ಮಹಿಮೆಯು ಎಲ್ಲರಿಗೂ ತಿಳಿಯಿತು.

ಶ್ರೀ ಅಕ್ಷೋಭ್ಯರು '**ಮಧ್ವತತ್ವಸಾರಸಂಗ್ರಹ**'ವೆಂಬುದೊಂದೇ ಗ್ರಂಥವನ್ನು ರಚಿಸಿರುವರು.

ಇವರು ಅನೇಕ ವಿಧವಾಗಿ ದೇವರ ಸೇವೆಮಾಡಿ ದೇಶ ಸಂಚರಿಸಿ ಪರವಾದಿಗಳನ್ನು ಮುರಿದು ತಮ್ಮ ಮಹಿಮೆಯನ್ನು ಅವರಿಗೆ ತೋರಿಸಿ ೧೫ ವರ್ಷ ಶ್ರೀಸೀತಾಮೂಲರಾಮರನ್ನು ಪೂಜಿಸಿ **ಶ್ರೀಜಯರಾಯ**ರಿಗೆ ಸಂಸ್ಥಾನವನ್ನು ಕೊಟ್ಟು ಶಕೆ ೧೧೬೭ನೇ ವಿಶ್ವಾವಸು ಸಂವತ್ಸರದ ಮಾರ್ಗಶೀರ್ಷ ವದ್ಯ ೫ ಗೆ ಹರಿಪುರವನ್ನು ಹೊಂದಿದರು.

ಇವರ ವೃಂದಾವನವು ನಿಜಾಮ ಇಲಾಖೆಯ ವಾಡಿಯ ಜಂಕಶನ್ ಬಳಿಯಲ್ಲಿ **ಕಾಗಿಣಿ**ಯೆಂಬ ನದಿಯ ಮೇಲಿನ **ಮಳಖೇಡ**ವೆಂಬಲ್ಲಿದೆ. ಇವರು **ರುದ್ರಾಂಶ**ರೆಂದು ಪ್ರಖ್ಯಾತಿಯಿದೆ.

# ೬ ಶ್ರೀಜಯತೀರ್ಥರು (ಟೀಕಾರಾಯರು)



ಪಟ್ಟ:- ೨೦-೯-೧೧೬೭ನೇ ವಿಶ್ವಾವಸುವಿನಿಂದ ೨೦-೪-೧೧೯೦ನೇ ವಿಭವದ ವರೆಗೆ

ಇವರ ಪೂರ್ವಾಶ್ರಮದ ಹೆಸರು **ಧೋಂಡೋಪಂತ**ರು; ತಂದೆಯ ಹೆಸರು **ರಘುನಾಥರಾಯ**ರು; ತಾಯಿಯ ಹೆಸರು **ರಕುಮಾಬಾಯಿ**. ಇವರು ಪಂಢರಪುರದ ಹತ್ತಿರದ **ಮಂಗಳವೇಢೆ**ಯೆಂಬ ಹಳ್ಳಿಯ ದೇಶಪಾಂಡೆಯವರು. ಪಂತರ ಮದುವೆಯು ಕುಪ್ಪಸಗಿಯೆಂಬ ಹಳ್ಳಿಯ **ಭೀಮಾಬಾಯಿ** ಎಂಬಾಕೆಯೊಡನೆ ಅವರ ೧೩ನೆಯ ವರ್ಷಕ್ಕೆ ಆಯಿತು.

ಒಂದು ದಿನ ಪಂತರು ಕಾರ್ಯಾಂತರಕ್ಕಾಗಿ ಕುದುರೆಯ ಮೇಲೇರಿ ತಮ್ಮ ಪರಿವಾರದೊಂದಿಗೆ ಪರಊರಿಗೆ ಹೊರಟರು. ಮುಂದೆ ಮಾರ್ಗ ಮಧ್ಯದಲ್ಲಿ ಬಿಸಿಲಿನಿಂದ ಬಾಯಾರಿ ಅವರು ಬಲು ಕಳವಳಗೊಳ್ಳಲಾರಂಭಿಸಿದರು. ಇಷ್ಟರಲ್ಲಿ ದೂರದಲ್ಲಿ ಭೀಮಾ ನದಿಯು ಅವರಿಗೆ ಕಾಣಿಸಿತು. ಕೂಡಲೆ ಅವರು ಪರಿವಾರವನ್ನು ಬಿಟ್ಟು ತಮ್ಮ ಕುದುರೆಯನ್ನು ವೇಗದಿಂದ ಓಡಿಸುತ್ತ ಬಂದವರೇ ಕುದುರೆಯಿಂದ ಸಹಿತರಾಗಿಯೇ ನದಿಯಲ್ಲಿ ಹೊಕ್ಕರು. ಆಗ ಅವರು ಕುದುರೆಯ ಮೇಲಿಂದಲೇ ನೀರಿಗೆ ಬಾಯಿಯನ್ನು ಹಚ್ಚಿ ನೀರುಕುಡಿಯ ಹತ್ತಿದರು.

ನದಿಯ ಆಚೆಯ ದಂಡೆಯ ಮೇಲೆಯೇ ಆಗ **ಶ್ರೀಅಕ್ಷೋಭ್ಯತೀರ್ಥ**ರ ಸಂಸ್ಥಾನವು ಬಂದಿತ್ತು. ಸಂಸ್ಥಾನದ ಜನರು ಈ ರಾವುತನ ನೀರು ಕುಡಿಯುವ ಬಗೆಯನ್ನು ಕಂಡು ಬೆರಗಾದರು. ತೀರ್ಥರು ಇವರು ಹಿಂದಿನ ಜನುಮದಲ್ಲಿ ಪಶುವಾಗಿದ್ದನೋ ಎಂದುಕೊಂಡರು. ಇಷ್ಟರಲ್ಲಿ ನದಿಗೆ ಬಾಯಿಯನ್ನು ಹಚ್ಚಿ ನೀರು ಕುಡಿಯುತ್ತಿರುವನನ್ನು ಬರಮಾಡಿಕೊಂಡು ಪಟ್ಟಗಟ್ಟೆಂದು ಶ್ರೀಸರ್ವಜ್ಞರು ಹೇಳಿದ್ದುದು ಅವರ ನೆನಪಿಗೆ ಬಂದಿತು. ಆಗಲೇ ಅವರು ಈ ರಾವುತನನ್ನು ಶಿಷ್ಯ

ರಿಂದ ಕರೆಯಿಸಿಕೊಂಡರು. ಬಂದೊಡನೆಯೇ ಶ್ರೀಗಳು 'ನಿಮ್ಮ ಪೂಜೆಯೇ ರಾಮದೇವರಿಗೆ **ಬೇಕಾಗಿದೆಯಂತೆ.** ಆದುದರಿಂದ ಹಾಗೆ ಮಾಡಿ ನೀವು ಹರಿವಾಯುಗಳ ಅನುಗ್ರಹಕ್ಕೆ ಪಾತ್ರರಾಗಿರಿ' ಎಂದು ಅವರಿಗೆ ಹೇಳಿದರು. ಪಂತರು ಮೊದಲು ಇದನ್ನು ನಂಬಲಿಲ್ಲ. 'ನನಗೂ ಕನಸಿನಲ್ಲಿ ದೇವರ ಅಪ್ಪಣೆಯಾಗಲಿ' ಎಂದು ಅವರು ಉತ್ತರ ಕೊಟ್ಟರು. ಆ ದಿನ ರಾತ್ರಿ ಪಂತರಿಗೂ ಸ್ವಪ್ನದಲ್ಲಿ ಆಜ್ಞೆಯು ಆಯಿತು. ಮರುದಿನ ಎದ್ದು ಪಂತರು ಸನ್ಯಾಸಕ್ಕೆ ಒಪ್ಪಿಕೊಂಡು ಶ್ರೀಗಳಿಂದ ಆಶ್ರಮವನ್ನು ಸ್ವೀಕರಿಸಿದರು. ಈ ಹೊಸ ಯತಿಗಳನ್ನು ಶ್ರೀಅಕ್ಷೋಭ್ಯರು '**ಜಯತೀರ್ಥ**'ರೆಂದು ಕರೆದರು. ಇಷ್ಟರಲ್ಲಿ ಪಂತರನ್ನು ಹುಡುಕುತ್ತ ಬಂದ ಅವರ ಪರಿವಾರದವರು ನಡೆದ ಸಂಗತಿಯನ್ನು ತಿಳಿದು ಪಂತರ ಊರಿಗೆ ತಿರುಗಿ ಹೋಗಿ ಧೋಂಡೋಪಂತರ ತಾಯ್ತಂದೆಗಳಿಗೆ ಆದದ್ದನ್ನು ಹೇಳಿದರು. ಆಗ ಪಂತರ ತಾಯ್ತಂದೆಗಳಿಗೆ ಅದೆಷ್ಟೋ ಕೋಪ. ಆಗಲೇ ಅವರು ಪಂತರ ಹೆಂಡತಿಯೊಡನೆ ಶ್ರೀಗಳಿದ್ದಲ್ಲಿಗೆ ಬಂದರು. ಸಿಟ್ಟಿನಿಂದಲೇ ತಮ್ಮ ಮಗನನ್ನು ತಮಗೆ ಒಪ್ಪಿಸಲು ಶ್ರೀಗಳಿಗೆ ಅವರು ಹೇಳಿದರು. ಚಿಕ್ಕವನಿಗೆ ಸನ್ಯಾಸವನ್ನೆಂತು ಕೊಟ್ಟಿರೆಂದು ಶ್ರೀಗಳನ್ನು ಅವರು ಕೆರಳಿ ಕೇಳಿದರು. ಆಗ ಜಯತೀರ್ಥರು, ಸ್ವಪ್ನದಂತೆ ನಾನೇ ಆಶ್ರಮವನ್ನು ಕೈಕೊಂಡಿದ್ದೇನೆಂದು ಮುಂದೆ ಬಂದು ಅಂದರು. ಆದರೂ ಪಂತರ ತಂದೆಯ ಆಗ್ರಹವು ಬಹಳಾಯಿತು. ಅವರು ಮಗನನ್ನು ಊರಿಗೇ ಕರೆದುಕೊಂಡು ಹೋದರು. ಅಲ್ಲಿ ರಾತ್ರಿ ಅವರು ಸ್ತ್ರೀಸಂಗಕ್ಕೆ ಹೊಸ ಯತಿಗಳನ್ನು ಬಲುಮೆ ಪಡಿಸಿದರು. ಗಂಡನಿರುವ ಕೋಣೆಯಲ್ಲಿ ಹೆಂಡತಿಯನ್ನು ಬಿಟ್ಟರು. ಆದರೆ ಆ ಕೋಣೆಯಲ್ಲಿ ಹೆಂಡತಿಗೆ ಹಾವು ಕಂಡಿತೇ ಹೊರತು ಗಂಡನು ಕಾಣಲಿಲ್ಲ. ಬೆದರಿ ಚೀರುತ್ತ ಆಕೆಯು ಹೊರಗೆ ಬಂದಳು; ಒಳಗಿನ ಸಮಾಚಾರವನ್ನು ಎಲ್ಲರಿಗೂ ಹೇಳಿದಳು.

ಆಗ ತಾಯ್ತಂದೆಗಳಿಗೆ ತಮ್ಮ ಮಗನು ಪ್ರಪಂಚಕ್ಕೆ ಯೋಗ್ಯನಿಲ್ಲೆಂದು ಮನವರಿಕೆಯಾಯಿತು. ಆದ್ದರಿಂದ ಆತನಿಗೆ ಶ್ರೀಗಳ ಕಡೆಗೆ ಹೋಗಲು ಅವರು ಅಪ್ಪಣೆಯನ್ನಿತ್ತರು. ಆಗ ಆ ಹೊಸ ಯತಿಗಳು

'ದೇವರ ಚಿತ್ತಕ್ಕೆ ಎದುರಿಲ್ಲ; ಇನ್ನೊಬ್ಬ ಮಗನು ನಿಮ್ಮನ್ನು ಕಾಪಾಡುವನು;' ಎಂತಾಗಿ ತಾಯ್ತಂದೆಗಳನ್ನು ಸಮಾಧಾನಪಡಿಸಿದರು. ಅವರು ವಿಕಾರವಶರಾಗಿ ಜಗದ್ಗುರುಗಳಾದ ಭಗವದ್ಭಕ್ತರಿಗೆ ಕಟೂಕ್ತಿಗಳನ್ನಾಡಿದ್ದುದರಿಂದ ಅವರನ್ನು ಶ್ರೀಗಳೆಡೆಗೆ ಕರೆದೊಯ್ದು ಅವರಿಂದ ಅವರಿಗೆ ಪ್ರಸಾದವನ್ನು ಕೊಡಿಸಿ ಅವರನ್ನು ತಿರುಗಿ ಮನೆಗೆ ಕಳುಹಿಸಿದರು.

ಸಂಸ್ಥಾನವು ಬಂದರೂ ಶಾಸ್ತ್ರಜ್ಞಾನವು ತಮಗಿಲ್ಲೆಂದು ತೀರ್ಥರು ಚಡಪಡಿಸಹತ್ತಿದರು. ಆಗೊಮ್ಮೆ ಒಂದು ದೊಡ್ಡ ಹಾವು ಇವರನ್ನು ಕಾಣಿಸಿಕೊಂಡಿತು. ಅಂದಿನಾರಭ್ಯವೇ ತೀರ್ಥರಿಗೆ ಜ್ಞಾನೋದಯವಾಯಿತು. ಮುಂದೆ ಶಾಸ್ತ್ರಗಳೆಲ್ಲ ನೆನಪಾದಂತೆ ಅವರ ಬುದ್ಧಿಗೆ ಹೊಳೆಯಹತ್ತಿದವು. ಶ್ರೀ ಅಕ್ಷೋಭ್ಯತೀರ್ಥರ ಅನುಗ್ರಹದಿಂದ ಆಗಲೇ ಅವರ ಗ್ರಂಥರಚನೆಗೆ ಮೊದಲಾಯಿತು. ತಮ್ಮ ೨೩ ವರುಷಗಳ ಪಟ್ಟದಲ್ಲಿ ಶ್ರೀಜಯತೀರ್ಥರು ಶ್ರೀಮದಾಚಾರ್ಯರ ಎಲ್ಲ ಗ್ರಂಥಗಳಿಗೂ ಟೀಕೆಯನ್ನು ಮಾಡಿದ್ದನ್ನು ನೋಡಿದರೆ ಅವರು ದೇವಾಂಶರಲ್ಲದೆ ಬೇರಲ್ಲವೆಂದು ಎಲ್ಲರಿಗೂ ಹೊಳೆಯುವಂತಿದೆ. ಶ್ರೀಗಳು **ಶೇಷಾವೇಶರೂ ಇಂದ್ರಾಂಶರೂ** ಇದ್ದರೆಂಬುದಕ್ಕೆ ಅನೇಕ ಪ್ರಮಾಣಗಳಿವೆ.

## ಶ್ರೀಗಳು ರಚಿಸಿದ ಗ್ರಂಥಗಳು

| ಗ್ರಂಥಗಳು | ವಿಷಯಗಳು |
|---|---|
| ೧ ತತ್ವಪ್ರಕಾಶಿಕಾ | ಶ್ರೀಮದಾಚಾರ್ಯರ ಬ್ರಹ್ಮಸೂತ್ರ ಭಾಷ್ಯ ಮೂಲ ೨೦೦೦ಗ್ರಂಥಕ್ಕೆ ೮೦೦೦ ಟೀಕಾ ಗ್ರಂಥವು. |
| ೨ ಸುಧಾ | ಶ್ರೀಮದಾಚಾರ್ಯರ ಅನುವ್ಯಾಖ್ಯಾನ ೪೦೦೦ ಗ್ರಂಥಕ್ಕೆ ೨೮೦೦೦ ಟೀಕಾ ಗ್ರಂಥವು. |
| ೩ ನ್ಯಾಯ ವಿವರಣೆ | ಆಚಾರ್ಯರ ಮೂಲ ಗ್ರಂಥಕ್ಕೆ ಟೀಕಾ ೨ಪಾದ |
| ೪ ಪ್ರಮೇಯದೀಪಿಕಾ | ಗೀತಾಭಾಷ್ಯಕ್ಕೆ ಟೀಕಾ |

| ಗ್ರಂಥಗಳು | ವಿಷಯಗಳು |
|---|---|
| ೫ ನ್ಯಾಯದೀಪಿಕಾ | ಗೀತಾತಾತ್ಪರ್ಯದ ಟೀಕಾ |
| ೬ ತತ್ವಸಂಖ್ಯಾನ ಟೀಕಾ | ಆಚಾರ್ಯರ ಗ್ರಂಥಕ್ಕೆ ಟೀಕಾ |
| ೭ ತತ್ವವಿವೇಕ ,, | ,, |
| ೮ ಉಪಾಧಿ ಖಂಡನ ,, | .. |
| ೯ ಮಾಯಾವಾದ ಖಂಡನ ,, | ,, |
| ೧೦ ಮಿಥ್ಯಾತ್ವಾನುಮಾನ ಖಂಡನ ,, | ,, |
| ೧೧ ತತ್ವನಿರ್ಣಯ ,, | ,, |
| ೧೨ ಕಥಾಲಕ್ಷಣ ,, | ,, |
| ೧೩ ತತ್ವೋದ್ಯೋತ ,, | ,, |
| ೧೪ ಕರ್ಮನಿರ್ಣಯ ,, | ,, |
| ೧೫ ಷಟ್ಪ್ರಶ್ನ ಭಾಷ್ಯ ,, | ,, |
| ೧೬ ಈಶಾವಾಸ್ಯಭಾಷ್ಯ ,, | ,, |
| ೧೭ ಋಗ್ಭಾಷ್ಯ ,, | ,, |
| ೧೮ ನ್ಯಾಯಕಲ್ಪತರು ,, | ಪ್ರಮಾಣ ಲಕ್ಷಣಕ್ಕೆ ಟೀಕಾ |

ಸ್ವಂತ ಗ್ರಂಥಗಳು

| | |
|---|---|
| ೧೯ ಪ್ರಮಾಣ ಪದ್ಧತಿ | ಪ್ರಮಾಣ ಲಕ್ಷಣಗಳು |
| ೨೦ ವಾದಾವಲಿ | ಅದ್ವೈತ ಖಂಡನ, ಹರಿಸರ್ವೋತ್ತಮತ್ವ |
| ೨೧ ಶತಾಪರಾಧಸ್ತೋತ್ರ | ದೇವರ ಸ್ತೋತ್ರ |
| ೨೨ ಪದ್ಯಮಾಲಾ | ದೇವತಾರ್ಚನ ವಿಧಿ |
| ೨೩ ಅಧ್ಯಾತ್ಮಾಮೃತ ತರಂಗಿಣಿ | ವೇದಾಂತ ಪ್ರಮೇಯ ಸಂಗ್ರಹ |

**ಶ್ರೀಜಯತೀರ್ಥ**ರು ಯರಗೋಳವೆಂಬ ಗ್ರಾಮದಲ್ಲಿ ಶ್ರೀರಾಮದೇವರ ಪೂಜೆಮಾಡುತ್ತ ಶಿಷ್ಯರು ತಂದೀಯುವ ಭಿಕ್ಷಾನ್ನವನ್ನುಂಡು ಈ ಗ್ರಂಥಗಳನ್ನು ಬರೆಯುತ್ತ ಕಾಲಕಳೆಯುತ್ತಿದ್ದರು. ಒಮ್ಮೆ ಇವರು

ಆಚಾರ್ಯರ ಪ್ರಮಾಣಲಕ್ಷಣವನ್ನು ತಮ್ಮ ಭೆಟ್ಟಿಗೆ ಬಂದ ವಿದ್ಯಾರಣ್ಯ ರಿಗೆ ತೋರಿಸಿದರು. ಅವರಿಗೆ ಅವರ ಪೂರ್ವಾಪರವೇ ತಿಳಿಯಲಿಲ್ಲ. ಆಗ ಶ್ರೀಜಯತೀರ್ಥರು ಅದಕ್ಕಿರುವ ತಮ್ಮ ಟೀಕೆಯನ್ನು ಅವರಿಗೆ ತೋರಿಸಿದರು. ಆಗ ತಾನೆ ಸರ್ವಜ್ಞರ ಗ್ರಂಥದ ಗೂಢಾರ್ಥದ ಪೂರ್ವಾಪರವು ತಿಳಿದು ವಿದ್ಯಾರಣ್ಯರು ತೀರ್ಥರ ಜಾಣ್ಮೆಗೆ ತಲೆತೂಗಿ ಅವರಿಗೆ ಸಾಷ್ಟಾಂಗವೆರಗಿದರು. ಆಚಾರ್ಯರ. ಗ್ರಂಥಗಳ ಗೂಢಾ ಭಿಪ್ರಾಯವನ್ನು ಬೆಳಕಿಗೆ ತಂದದ್ದಕ್ಕೆ ಅವರ ಧನ್ಯವಾದವನ್ನು ಮಾಡಿ ದಿಗ್ವಿಜಯ ಮಾಡಿಕೊಂಡು ಕುಳಿತುಕೊಂಡು ಬಂದ ತಮ್ಮ ಆನೆಯ ಮೇಲೆ ಕೂಡಿಸಿಯೇ ಅವರನ್ನು ಮೆರೆಸಿದರು. ಮುಂದೆ ಇವರು ದೇಶ ಸಂಚಾರವನ್ನೂ ಮಾಡಿದರು. ಶ್ರೀಮದಾಚಾರ್ಯರ ಮತವನ್ನು ಸಜ್ಜನರಿಗೆ ಉಪದೇಶಿಸಿ ಅದನ್ನು ಪ್ರಸಾರಗೊಳಿಸಿದರು.

ಪ್ರವಾಸಕ್ರಮದಿಂದ ವಾದಿಗಳನ್ನು ಗೆಲ್ಲುತ್ತ ಶಿಷ್ಯರಿಗೆ ಮಂತ್ರೋ ಪದೇಶಮುದ್ರೆಗಳನ್ನು ಕೊಡುತ್ತ ಮಳಖೇಡವೆಂಬಲ್ಲಿಗೆ ತೀರ್ಥರು ಬಂದು ಮುಟ್ಟಿದರು. ಅಲ್ಲಿ ಶ್ರೀಜಯರಾಯರು ಸಚ್ಛಾಸ್ತ್ರದಲ್ಲಿಯೇ ಸಕ್ತರಾಗಿರುತ್ತಿದ್ದರು. ಶ್ರೀರಾಮದೇವರ ಪೂಜೆಯನ್ನು ಮಾಡಿ ಶ್ರೀಹರಿ ವಾಯುಗಳ ಅನುಗ್ರಹಕ್ಕೆ ಪಾತ್ರರಾಗಿ ತಮ್ಮ ವಯಸ್ಸಿನ ೪೬ನೆಯ ವರುಷ ಕಾಗಿಣೀ ನದಿಯ ತೀರದ **ಮಳಖೇಡ**ದಲ್ಲಿಯೇ ಅವರು **ಶ್ರೀವಿದ್ಯಾಧಿರಾಜ**ರಿಗೆ ಸಂಸ್ಥಾನವನ್ನು ಸಮರ್ಪಿಸಿ ವಿಭವ ಸಂವತ್ಸ ರದ ಆಷಾಢ ವದ್ಯ ೫ ದಿವಸ ಶ್ರೀಹರಿಧ್ಯಾನಪರರಾದರು.

ಶ್ರೀಉತ್ತರಾದಿ ಮಠವು ಮಳಖೇಡಕ್ಕೆ ಹೋದರೆ ಶ್ರೀಟೀಕಾ ರಾಯರ ಪೂಜ್ಯತೆಗಾಗಿ ಈಗಲೂ ಬ್ರಾಹ್ಮಣರ ಸಂತರ್ಪಣೆ ದಾನ ಧರ್ಮಾದಿಗಳು ಮಠದ ದುಡ್ಡಿನಿಂದಲೇ ನಡೆಯುತ್ತವೆ. ಅಲ್ಲಿ ಪ್ರತಿ ವರ್ಷವೂ ಮಹಾಸಮಾರಾಧನೆಯು ಬಲು ಸಡಗರದಿಂದ ನಡೆಯು ತ್ತಿದ್ದು ಅದಕ್ಕೆ ನಿಜಾಮಸರಕಾರದಿಂದ ವರ್ಷಾಶನವಿದೆ. ಮಠತ್ರ ಯದವರೂ ಶ್ರೀಗಳ ಆರಾಧನೆಯನ್ನು ಪರಮ ಆದರದಿಂದ ಮಾಡು ತ್ತಾರೆ.

# ೭ ಶ್ರೀವಿದ್ಯಾಧಿರಾಜತೀರ್ಥರು



**ಪಟ್ಟ:- ೨೮-೪-೧೧೯೦ನೇ ವಿಭವದಿಂದ ೩-೨-೧೨೫೪ನೇ ಅಂಗಿರಾದ ವರೆಗೆ**

ಇವರ ಪೂರ್ವಾಶ್ರಮದ ಹೆಸರು **ಕೃಷ್ಣಭಟ್ಟರು.** ಶ್ರೀಟೀಕಾಕೃತ್ಪಾದರಿಂದ ಸಂಸ್ಥಾನವನ್ನು ಪಡೆದು ಇವರು ದ್ವೈತಸಿದ್ಧಾಂತದ ಪ್ರಚಾರದಲ್ಲಿಯೇ ಇದ್ದರು. ಆಚಾರ್ಯರ ಮತವು ಎಲ್ಲೆಡೆಯಲ್ಲಿಯೂ ಚಲ್ಲವರಿಯಬೇಕೆಂಬ ಆಶೆಯನ್ನಿಟ್ಟುಕೊಂಡು ರಾಜರು ತಮ್ಮಲ್ಲಿಯ ಮಹಾಪಂಡಿತರಾದ **ರಾಜೇಂದ್ರ**ರಿಗೆ ಆಶ್ರಮವನ್ನು ಕೊಟ್ಟು ಅವರನ್ನು ಸಂಚಾರಕ್ಕಾಗಿ ಕಳುಹಿಕೊಟ್ಟರು. ಆಗ ಪಾಂಡಿತ್ಯ ಬಲದಿಂದ ರಾಜೇಂದ್ರರು ಎಲ್ಲೆಡೆಯಲ್ಲಿಯೂ ಗುಡುಗಾಡಹತ್ತಿದರು.

ಇತ್ತ ರಾಜರಿಗೆ ಅವರ ೬೪ನೆಯ ಪಟ್ಟದ ವರುಷಕ್ಕೆ ಅಂತ್ಯಕಾಲವೊದಗಿ ರಾಜೇಂದ್ರರು ಸಮಯಕ್ಕೆ ಬರದ್ದರಿಂದ ಶಕೆ ೧೨೫೪ ಅಂಗಿರಸ ಸಂವತ್ಸರದ ವೈಶಾಖ ಶುದ್ಧ ೩ ದಿವಸ **ಕವೀಂದ್ರ**ರಿಗೆ ಆಶ್ರಮಕೊಟ್ಟು ಉತ್ತರಾದಿ ಮಠವನ್ನು ಅವರಿಗೆ ಒಪ್ಪಿಸಿ ತಾವು ಯರಗೋಳದಲ್ಲಿ ವೃಂದಾವನಸ್ಥರಾದರು. ರಾಜೇಂದ್ರರು ಈ ವಾರ್ತೆಯನ್ನು ಆ ಮೇಲೆ ಕೇಳಿ ಅಸಮಾಧಾನ ಹೊಂದಿ ದ್ವೈತ ಪ್ರಚಾರಕ್ಕೆಂದು ಹೊಸದೊಂದು ಮಠವನ್ನೇ ಸ್ಥಾಪಿಸಿದರು. ಇದೇ ಮುಂದೆ **ವ್ಯಾಸರಾಯರ ಮಠ**ವೆಂದು ಹೆಸರಾಗಿದೆ. ರಾಜರು **ಸೂರ್ಯಾಂಶ**ರೆಂದು ಬಲ್ಲವರ ಮತವು.

# ೮ ಶ್ರೀಕವೀಂದ್ರತೀರ್ಥರು



**ಪಟ್ಟ:- ೩-೨-೧೨೫೪ ಅಂಗಿರಾದಿಂದ ೯-೧-೧೨೬೧ನೇ ಪ್ರಮಾಥಿಯ ವರೆಗೆ**

ಇವರ ಪೂರ್ವಾಶ್ರಮದ ಹೆಸರು **ವಾಸುದೇವಶಾಸ್ತ್ರಿ**ಗಳು. ಪೀಠಕ್ಕೆ ಬಂದ ಮೇಲೆ ಶ್ರೀಗಳು ಯಾವಾಗಲೂ ಪ್ರಣವಜಪತಪಾದಿ ನಿತ್ಯಾನುಷ್ಠಾನವನ್ನು ಕಠಿಣವ್ರತದಿಂದ ಆಚರಿಸುತ್ತಲೂ ಪಾಠ

ಪ್ರವಚನಾದಿಗಳನ್ನು ಮಾಡಿಸುತ್ತಲೂ ದೇಶಸಂಚಾರವನ್ನು ಮಾಡು ತ್ತಿದ್ದರು. ಇಂತು ಏಳು ವರ್ಷ ಸಂಸ್ಥಾನವನ್ನಾಳಿ ಕವೀಂದ್ರರು **ಶ್ರೀವಾಗೀಶ**ರಿಗೆ ಆಶ್ರಮವನ್ನು ಕೊಟ್ಟು ಸಂಸ್ಥಾನಕ್ಕೆ ಪಟ್ಟಗಟ್ಟಿ ದರು. ಆ ಮೇಲೆ ತಾವು ಆನೆಯಗುಂದೆಯಲ್ಲಿ ೧೨೬೧ನೇ ಶಕೆಯ ಪ್ರಮಾಥಿ ಸಂವತ್ಸರದ ಚೈತ್ರ ಶುದ್ಧ ೯ ದಿನ ಹರಿಧ್ಯಾನತತ್ಪರ ರಾದರು. ಇವರು **ಚಂದ್ರಾಂಶ**ರೆಂದು ಹೇಳಿಕೆಯಿದೆ.

## ೯ ಶ್ರೀವಾಗೀಶತೀರ್ಥರು



ಪಟ್ಟ:- ೯-೧-೧೨೬೧ ಪ್ರಮಾಥಿಯಿಂದ ೧೮-೧-೧೨೬೯ನೇ ಸರ್ವಜಿತುವಿನವರೆಗೆ

ಇವರ ಪೂರ್ವಾಶ್ರಮದ ಹೆಸರು **ರಘುನಾಥಾಚಾರ್ಯರು.** ಇವರೂ ಗುರುಗಳಂತೆ ಪೂಜಾದಿ ಅನುಷ್ಠಾನಗಳಲ್ಲಿಯೇ ಕಾಲ ಕಳೆ ಯುತ್ತಿದ್ದು ತಮ್ಮ ಆಳಿಕೆಯ ಎಂಟನೆಯ ವರ್ಷ **ಶ್ರೀರಾಮಚಂದ್ರ ತೀರ್ಥರಿಗೆ** ಸಂಸ್ಥಾನವನ್ನನುಗ್ರಹಿಸಿ ಆನೇಗುಂದೆಯಲ್ಲಿ ೧೨೬೯ನೇ ಸರ್ವಜಿತು ಸಂವತ್ಸರದ ಚೈತ್ರವದ್ಯ ೩ ದಿವಸ ನಾರಾಯಣನಾಮರತ ರಾದರು. ಇವರು **ಯಮಾಂಶ**ರೆಂದು ಪ್ರಸಿದ್ಧಿಯು.

## ೧೦ ಶ್ರೀರಾಮಚಂದ್ರತೀರ್ಥರು



ಪಟ್ಟ:- ೧೮-೧- ೬೯ನೇ ಸರ್ವಜಿತುವಿನಿಂದ ೬-೨-೧೨೯೮ನೇ ನಳದವರೆಗೆ

ಇವರ ಪೂರ್ವಾಶ್ರಮದ ಹೆಸರು **ಮಾಧವಶಾಸ್ತ್ರಿ**ಗಳು. ಇವ ರಿಗೆ ಖವಲೂರ ರಾಮಚಂದ್ರತೀರ್ಥರೆಂದು ಕರೆಯುವದುಂಟು. ಈ ಶ್ರೀಗಳು ಶ್ರೀಮಧ್ವಮತಪ್ರಸಾರಕ್ಕೆಂದು ಬಹು ಕಡೆಗೆ ಸಂಚರಿಸಿದರು. ಒಮ್ಮೆ ದಾರಿಯಲ್ಲಿ ಶ್ರೀರಂಗಪಟ್ಟಣದಲ್ಲಿ **ಕಾಶೀನಾಥ**ನೆಂಬ ಮಹಾ ಪಂಡಿತನೊಡನೆ ಇವರು ಅನೇಕ ಶಾಸ್ತ್ರಗಳಲ್ಲಿ ವಿವಾದಮಾಡಿದರು. ವೇದಾಂತಗ್ರಂಥವಾದ ಸುಧಾವಾದದಲ್ಲಿ ೨೪ ದಿನ ೨೪೦೦೦ ಗ್ರಂಥಗಳ

ನ್ನು ಉಪದೇಶ ಮಾಡುತ್ತ ಉಪನ್ಯಾಸ ಮಾಡಿದರು. ಅಲ್ಲಿಯ ರಾಜನು ಆಗ ಶ್ರೀಗಳಿಗೆ ಕಾಶೀನಾಥನಿಂದ ಜಯಪತ್ರವನ್ನು ಕೊಡಿಸಿದ್ದಲ್ಲದೆ ನಡೆದದ್ದನ್ನು ಶಿಲಾಶಾಸನದಲ್ಲಿ ಬರೆಯಿಸಿದನು. ಅಲ್ಲಿಯೇ ಶ್ರೀಗಳು ಕೆಲವು ದಿನಗಳಿರುತ್ತಿರಲು ದೇಹದಲ್ಲಿ ಬಲು ಆಯಾಸವಾಗಿ ಅವರು ಮಹಾಪಂಡಿತರಾದ **ಶ್ರೀವಿಭುದೇಂದ್ರ**ರಿಗೆ ಆಶ್ರಮವನ್ನಿತ್ತರು. ಆದರೆ ಎಂಟೇ ದಿನಗಳಲ್ಲಿ ಶ್ರೀಗಳಿಗೆ ವಾಸಿಯಾಗಲು ಅವರು ಶ್ರೀವಿಭುದೇಂದ್ರರಿಗೆ ಶ್ರೀಟೀಕಾಕೃತ್ಪಾದರಿಂದ ಪೂಜೆಗೊಂಡ ಶ್ರೀಜಯರಾಮ ಪ್ರತಿಮೆಯನ್ನೂ ಮತ್ತೆ ಕೆಲವು ಶಾಲಗ್ರಾಮಗಳನ್ನೂ ಪೂಜೆಗಾಗಿ ಕೊಟ್ಟು ಅವರನ್ನು ಉತ್ತರದೇಶದಲ್ಲಿ ಮಧ್ವಮತವನ್ನು ಹಬ್ಬಿಸಲು ಕಳುಹಿಕೊಟ್ಟರು. ಮುಂದೆ ಶ್ರೀಪಾದರು ಪೂಜೆಪ್ರವಚನಾದಿಗಳನ್ನು ಮಾಡುತ್ತ ರಾಜಮಹೇಂದ್ರಿಯ ಕಡೆಗೆ ಹೊರಟರು. ಅಲ್ಲಿ ಕೆಲ ದಿನಗಳ ವರೆಗೆ ವಾಸವಾಗಿದ್ದು ಮುಂದೆ ಅವರು ಯರಗೋಳ ಗ್ರಾಮಕ್ಕೆ ಬಂದರು. ಅಲ್ಲಿ ಶ್ರೀಗಳಿಗೆ ಬೇನೆಯು ಬಲವಾಗಲು ಪಟ್ಟಕ್ಕಾಗಿ ಅವರು ವಿಭುದೇಂದ್ರರಿಗೆ ಹೇಳಿ ಕಳುಹಿದರು. ಆದರೆ ವಾದಮಾಡುತ್ತಲಿದ್ದು ಬಹು ದೂರ ಸಂಚಾರದಲ್ಲಿದ್ದುದರಿಂದ ಅವರಿಗೆ ವೇಳೆಗೆ ಸರಿಯಾಗಿ ಬರಲು ಆಗಲಿಲ್ಲ. ಆದ್ದರಿಂದ ಶ್ರೀಗಳು ನಿರುಪಾಯರಾಗಿ ಚಿಕ್ಕವರಾದ **ಕೃಷ್ಣಾಚಾರ್ಯ**ರೆಂಬವರಿಗೆ **ಶ್ರೀವಿದ್ಯಾನಿಧಿತೀರ್ಥ**ರೆಂದು ಹೆಸರಿಟ್ಟು ಆಶ್ರಮವನ್ನು ಕೊಟ್ಟರು. ಮತ್ತು ಶ್ರೀಮೂಲರಾಮದೇವರ ಪೆಟ್ಟಿಗೆಯನ್ನು ತೆಗ್ಗಿನಲ್ಲಿ ಹೂಳಿಟ್ಟರು. ತಿಂಗಳೊಳಗೇ ಶ್ರೀವಿಬುಧೇಂದ್ರರು ಬಂದು ಪಟ್ಟವನ್ನು ಕೇಳಿದರೆ ಅವರು ಹಿರಿಯರಾದುದರಿಂದ ಅವರಿಗೇ ಪಟ್ಟವನ್ನು ಕೊಡಿಸುವುದೆಂದೂ ತಮ್ಮ ತರುವಾಯ ಅವರು ಮುಂದೆ ಶ್ರೀವಿದ್ಯಾನಿಧಿಗಳಿಗೇ ಪಟ್ಟಗಟ್ಟಬೇಕೆಂದೂ ಆ ಊರ ದೊಡ್ಡ ಮನುಷ್ಯರಾದ **ಧರ್ಮಣ್ಣ** ಮೊದಲಾದವರಿಗೆ ಹೇಳಿ ಶ್ರೀಗಳು ತಮ್ಮ ಆಳಿಕೆಯ ೨೫ನೆಯ ವರುಷ **ಯರಗೋಳ**ದಲ್ಲಿ ೧೩೯೮ನೇ ನಳ ಸಂವತ್ಸರದ ವೈಶಾಖ ಶುದ್ಧ ೬ ದಿನ ಹರಿಧ್ಯಾನರತರಾದರು. ಇವರು ಆಚಾರ್ಯರ ಅನೇಕ ಗ್ರಂಥಗಳಿಗೆ ಟಿಪ್ಪಣೆಗಳನ್ನು ಬರೆದಿದ್ದಾರೆ. ಇವರು **ಅಗ್ನಿಯ ಅಂಶ**ದವರೆಂದು ವದಂತಿಯಿದೆ.

# ೧೧ ಶ್ರೀವಿದ್ಯಾನಿಧಿತೀರ್ಥರು



**ಪಟ್ಟ:- ೬-೨-೧೨೯೮ನೇ ನಳದಿಂದ ೧೯-೮-೧೩೬೬ನೇ ರಕ್ತಾಕ್ಷಿಯವರೆಗೆ**

ಇವರ ಪೂರ್ವಾಶ್ರಮದ ಹೆಸರು **ಕೃಷ್ಣಾಚಾರ್ಯ**ರು. ಇವರು ತುಳುವ ಬ್ರಾಹ್ಮಣರು. ಇವರು ಶ್ರೀರಾಮಚಂದ್ರತೀರ್ಥರಿಂದ ಆಶ್ರಮವನ್ನು ಹೊಂದಿ ಶ್ರೀವಿಭುದೇಂದ್ರರ್ಬರಸಲುವಾಗಿ ಆರು ತಿಂಗಳು ಹಾದಿಯನ್ನು ನೋಡಿದರು. ಆದರೂ ಅವರು ಬಾರದಿರಲು ಯರಗೋಳದ ಧರ್ಮಣ್ಣ ಮುಂತಾದವರು ಇವರಿಗೇ ಒಂದು ಶುಭಮುಹೂರ್ತದಲ್ಲಿ ಸಂಸ್ಥಾನಪೂಜೆಗೆ ಮೊದಲು ಮಾಡುವದೆಂದು ಹೇಳಿ ಅವರನ್ನು ಸ್ನಾನಕ್ಕೆ ಕಳುಹಿದರು. ಅಷ್ಟರಲ್ಲಿ **ಶ್ರೀವಿಭುದೇಂದ್ರ**ರು ಬಂದವರೇ ಪಟ್ಟವನ್ನು ತಮಗಾಗಿ ಕೇಳತೊಡಗಿದರು. ಆಗ ನೆರೆದ ಸದ್ಗೃಹಸ್ಥರು ಈರ್ವರಿಗೂ ಸ್ನಾನಮಾಡಿಕೊಂಡು ಬಂದು ಶ್ರೀಮೂಲರಾಮರನ್ನು ಪ್ರಾರ್ಥಿಸುವುದೆಂದು ಕೇಳಿಕೊಂಡರು. ಯಾರ ಪ್ರಾರ್ಥನೆಗೆ ಶ್ರೀರಾಮರ ಪೆಟ್ಟಿಗೆಯು ತನ್ನಷ್ಟಕ್ಕೆ ತಾನೇ ಮೇಲೆದ್ದು ಬರುವುದೋ ಅವರೇ ಸಂಸ್ಥಾನವನ್ನು ಆಳುವುದೆಂದು ನಿಯಮವಾಯಿತು. ಆಗ **ಶ್ರೀವಿದ್ಯಾನಿಧಿ**ಗಳ ಭಕ್ತಿಯ ಬಲುಮೆಯೇ ಬಲವಾಯಿತು. ಶ್ರೀರಾಮರ ಪೆಟ್ಟಿಗೆಯು ಭೂಮಿಯನ್ನು ಬಿಟ್ಟು ನಾಲ್ಕು ಬೆರಳು ಮೇಲೇರಿ ಬಂದಿತು. ಶ್ರೀವಿದ್ಯಾನಿಧಿಗಳೇ ಸಂಸ್ಥಾನದಲ್ಲಿರುವದು ನಿಶ್ಚಯವಾಯಿತು. ಶ್ರೀವಿಭುದೇಂದ್ರರಿಗೆ ಆಗ ತುಸು ಕೋಪವುಂಟಾಯಿತು. ಅವರು ತಮ್ಮ ಪಾಂಡಿತ್ಯ ಬಲದಿಂದ ಬೇರೊಂದು ಮಠವನ್ನು ಸಂಸ್ಥಾಪಿಸಿದರು. ಆ ಮಠದಲ್ಲಿಯೇ ಮುಂದೆ **ಶ್ರೀರಾಘವೇಂದ್ರ**ರೆಂಬವರು ಹೆಸರುಗೊಂಡದ್ದರಿಂದ ಅವರ ಹೆಸರಿನಿಂದಲೇ ಈಗಲೂ ಮಠದ ಪರಂಪರೆಯು ನಡೆದಿದೆ.

ಇತ್ತ ಶ್ರೀವಿಭುದೇಂದ್ರರ ಪಾಂಡಿತ್ಯವು ಹೆಚ್ಚಾಗಿ ಉತ್ತರಾದಿ ಸಂಸ್ಥಾನಕ್ಕೆ ಸ್ವಲ್ಪ ಕಡಿಮೆತನವು ಬರುವಂತಾಗಲು ಶ್ರೀವಿದ್ಯಾನಿಧಿಗಳು ಶ್ರೀನೃಶಿಂಹಾಚಲದಲ್ಲಿ ೧೨ವರ್ಷ ತಪವನ್ನಾಚರಿಸಿ ಶ್ರೀನೃಶಿಂಹ

ದೇವರಿಂದ ಅನುಗ್ರಹವನ್ನು ಹೊಂದಿ ಬಂದರು. ಅಂದಿನಿಂದ ಶ್ರೀಗಳ ಪಾಂಡಿತ್ಯವು ಉಕ್ಕೇರಹತ್ತಿತು. ಸುಧಾದಿಪಾಠಪ್ರವಚನಗಳನ್ನು ಮಾಡಿಸುತ್ತ ಕಾಶಿ, ರಾಮೇಶ್ವರ, ಏಕಚಕ್ರನಗರ ಮುಂತಾಗಿ ಎಲ್ಲ ಕಡೆಯಲ್ಲಿಯೂ ತಿರುಗಾಡಿ ಅಲ್ಲಿಯ ರಾಜರಿಂದ ಅವರು ಮನ್ನಣೆಯನ್ನು ಹೊಂದಿ ಮಧ್ವಮತವನ್ನು ಹಬ್ಬುಗೊಳಿಸಿದರು. ಅವರು ಗೋದಾವರೀ ತೀರದ ಧರ್ಮಪುರಿ ಕ್ಷೇತ್ರದಲ್ಲಿ ಕೆಲ ದಿನ ವಾಸವಾಗಿದ್ದರು. ಮುಂದೆ ಅವರು ತುಂಗಾತೀರದ ಪಂಪಾಕ್ಷೇತ್ರಕ್ಕೆ ಬಹು ಜನ ಶಿಷ್ಯರೊಡಗೂಡಿ ದಯಮಾಡಿಸಿದರು. ಅಲ್ಲಿ ಶ್ರೀನಿಧಿಗಳು ಆನೇಗುಂದೆಯ ರಾಜನಿಂದ ಬಹು ಬಗೆಯಿಂದ ಸೇವೆಯನ್ನು ಕೊಂಡು ಅವನಿಗೆ ಸಂತಾನವಾಗುವಂತೆ ಅನುಗ್ರಹಿಸಿದರು. ರಾಜನಿಗೆ ಮಕ್ಕಳಾಗಲು ಅವನು ಸಂತೋಷದಿಂದ ರಾಯಚೂರ ಜಿಲ್ಲೆಯಲ್ಲಿ ಶ್ರೀಗಳವರ ಸಂಸ್ಥಾನಕ್ಕೆ ಕೆಲವು ಉಂಬಳಿಯನ್ನು ಹಾಕಿಕೊಟ್ಟನು. ಅವು ಈಗಲೂ ಮಠಕ್ಕೆ ನಡೆಯುತ್ತಲಿವೆ.

ಆಮೇಲೆ ಶ್ರೀಗಳು **ಯರಗೋಳಕ್ಕೆ** ಪ್ರಯಾಣವನ್ನು ಬೆಳೆಸಿದರು. ಅಲ್ಲಿ ಅವರಿಗೆ ಕಾಹಿಲೆಯು ಹೆಚ್ಚಾಗಲು **ವಿಷ್ಣುಶಾಸ್ತ್ರಿ**ಗಳೆಂಬವರಿಗೆ **ರಘುನಾಥತೀರ್ಥ**ರೆಂದು ಹೆಸರಿಟ್ಟು ಆಶ್ರಮವನ್ನಿತ್ತು ಸಂಸ್ಥಾನವನ್ನು ಅವರಿಗೆ ಒಪ್ಪಿಸಿ ೧೩೬೬ನೇ ರಕ್ತಾಕ್ಷಿ ಸಂವತ್ಸರದ ಕಾರ್ತೀಕ ವದ್ಯ ೪ದಿನ ವೃಂದಾವನಸ್ಥರಾದರು. ಇವರು **ವರುಣಾಂಶ**ರೆಂದು ವದಂತಿಯಿದೆ.

## ೧೨ ಶ್ರೀರಘುನಾಥತೀರ್ಥರು.

ಪಟ್ಟ:- ೧೯-೮-೧೩೬೬ನೇ ರಕ್ತಾಕ್ಷಿಯಿಂದ ೧೬-೯-೧೪೨೪ನೇ ದುಂದುಭಿಯವರೆಗೆ

ಇವರ ಪೂರ್ವಾಶ್ರಮದ ಹೆಸರು **ವಿಷ್ಣುಶಾಸ್ತ್ರಿ**ಗಳು. ಇವರು ವಿಷ್ಣುಭಕ್ತರೆಂದು ಬಹು ಪ್ರಸಿದ್ಧಿಯು. ಇವರ ವೈರಾಗ್ಯವಂತೂ ಮಿತಿಮೀರಿದ್ದು. ಶ್ರೀಮೂಲಸೀತಾರಾಮುರನ್ನು ಹಗಲ

ಮೇಲೇರಿಸಿಕೊಂಡು ಶಿಷ್ಯರಿಂದ ನಂದದ ದೀಪವನ್ನು ಹಿಡಿಸಿಕೊಂಡು ಕಾಲಿನಿಂದಲೇ ಈ ಶ್ರೀಗಳು ನಡೆದು ಹೋಗುತ್ತಿದ್ದರಂತೆ.

ಒಮ್ಮೆ ಇವರು ತಿರುಪತಿಯಲ್ಲಿ ಶ್ರೀವೆಂಕಟೇಶನ ದರ್ಶನಪೂಜನಾದಿಗಳನ್ನು ತೀರಿಸಿಕೊಂಡು ತಿರುಗಿ ಬಿಡಾರಕ್ಕೆ ಬರುವಾಗ್ಗೆ ಇವರನ್ನು ಶ್ರೀಶ್ರೀಪಾದರಾಯರು ಕಂಡರು. ರಾಯರು ತಮ್ಮ ಅಂತಜ್ಞಾನದಿಂದ ಶ್ರೀಗಳ ಭಕ್ತಿತಪಸ್ಸಾಮರ್ಥ್ಯಗಳನ್ನು ತಿಳಿದವರಾಗಿ ಅವರಿಗೆ ಸಾಷ್ಟಾಂಗವೆರಗಿದರು. ಮುಂದೆ ಅವರೊಡನೆ ಅವರ ಬಿಡಾರಕ್ಕೆ ಹೋಗಿ ಅವರ ಪೂಜೆಯ ವೇಳೆಗೆ ರಾಯರು ಶ್ರೀಪದ್ಮನಾಭಕರಾರ್ಚಿತ ಪ್ರತಿಮೆಯೊಂದನ್ನು ಅವರಿಗೆ ಕೊಟ್ಟರು. ಆ ಪ್ರತಿಮೆಯನ್ನು ಮೂಲರಾಮಸೀತಾ ಪ್ರತಿಮೆಗಳ ಬಳಿಯಲ್ಲಿಯೇ ಇಟ್ಟು ಭಕ್ತಿಯಿಂದ ಪೂಜಿಸಿ ಶ್ರೀಗಳು ಅದಕ್ಕೊಂದು ಮುತ್ತಿನ ಹಾರವನ್ನು ಹಾಕಿ ಅದನ್ನು ರಾಯರಿಗೆ ತಿರುಗಿ ಕೊಟ್ಟರು. ಮುಂದೆ ೨-೩ ದಿನಗಳ ವರೆಗೆ ರಾಯರು ಅಲ್ಲಿಯೇ ಇದ್ದರು. ಆಗ ಅವರ ಆಚಾರ ಪಾಠ ಪ್ರವಚನಾದಿಗಳಿಗೆ ಶ್ರೀಗಳು ಸಂತುಷ್ಟರಾಗಿ ತಮ್ಮೊಡನೆಯೇ ಅವರಿಗೆ ಸಂಚಾರದಲ್ಲಿರಲು ಹೇಳಿದರು.

ಆ ಮೇಲೆ ಈರ್ವರೂ ಶ್ರೀಗಳು ದೇವರನ್ನು ಹೆಗಲಲ್ಲಿಟ್ಟು ಕಾಲಿಲಿ ನಡೆಯಹತ್ತಿದರು. ನಡುವೇ **ಶ್ರೀಬ್ರಹ್ಮಣ್ಯತೀರ್ಥ**ರಿಂದ ಸಂವರ್ಧಿತರಾದ **ಶ್ರೀವ್ಯಾಸರಾಯ**ರು ಶ್ರೀಪಾದರಾಯರನ್ನು ಕೂಡಿಕೊಂಡರು. ಇವರು ರಾಯರಲ್ಲಿಯೇ ಓದುತ್ತಿದ್ದರು. ಮೈಸೂರ ಹತ್ತರದ ಅಬಲೂರಲ್ಲಾಗುವ ಗುರುಗಳ ಮಹಾಸಮಾರಾಧನೆಗೆ ಹೋಗಿ ಅದನ್ನು ಪೂರೈಸಿಕೊಂಡು ಈಗ ತಾನೆ ಅವರು ಬಂದಿದ್ದರು. ಮುಂದೆ ಮೂವರೂ ದ್ವೈತಮತವನ್ನು ಹಬ್ಬಿಸುತ್ತ ನಡೆದರು.

ಒಮ್ಮೆ ಈ ಮೂವರೂ ಮಾರ್ಗದಲ್ಲಿ ನಿತ್ಯಕರ್ಮಕ್ಕಾಗಿ ಒಂದು ನದಿಯ ದಂಡೆಯಲ್ಲಿ ಇಳಿದುಕೊಂಡಿದ್ದರು. ಆಗ ಉಡಪಿಯ ಪೇಜಾವರ ಮಠದ **ಶ್ರೀವಿಜಯಧ್ವಜತೀರ್ಥ**ರು ಆಚೆಯ ದಂಡೆಯಲ್ಲಿ ಮೂರು ಕಲ್ಲುಗಳ ಮೇಲೆ ತಂಬಿಗೆಯೊಂದನ್ನಿಟ್ಟು ಅನ್ನವನ್ನು ಬೇಯಿಸುತ್ತಿರುವದು ಅವರಿಗೆ ಕಾಣಿಸಿತು. ಈ ತೀರ್ಥರು ಸಮುದ್ರಯಾನ

ದಿಂದ ಶ್ರೀದ್ವಾರಕಾ ಮುಂತಾದ ತೀರ್ಥಗಳನ್ನು ಸಂಚರಿಸಿ ಬರುವಾಗ ಎಲ್ಲ ಶಿಷ್ಯರೂ ಇವರನ್ನು ಬಿಟ್ಟು ಹೋಗಿದ್ದರು. ಆದ್ದರಿಂದ ಭಿಕ್ಷೆಯಿಲ್ಲದೆ ಗಡ್ಡೆಗೆಣಸುಗಳ ಮೇಲೆಯೇ ೪-೬ ತಿಂಗಳು ಇವರಿಗೆ ಇರಬೇಕಾಯಿತು. ಕಡೆಗೆ ಹಸಿವೆಯು ಬಲು ಬಾಧೆಪಡಿಸಲು ಅವರು ಮೇಲಿನಂತೆ ಅನ್ನದ ಸಿದ್ಧತೆಗೆ ತೊಡಗಿದ್ದರು. ಬೆಂಕೆಯನ್ನು ಹೊತ್ತಿಸುವಂಥ ನಿಷಿದ್ಧ ಕಾರ್ಯವನ್ನು ಮಾಡುತ್ತಿರುವ ಈ ಸನ್ಯಾಸಿಯ ಮುಖಾವಲೋಕನ ವನ್ನು ಸಹ ಮಾಡಕೂಡದೆಂದು ಶ್ರೀವ್ಯಾಸರು ತಮ್ಮ ಶಿಷ್ಯರಿಂದ ವಿಜಯ ಧ್ವಜತೀರ್ಥರಿಗೆ ದೂರಕ್ಕೆ ಸಾರಲು ಹೇಳಿ ಕಳುಹಿದರು. ಶಿಷ್ಯರಿಂದ ಹೇಳಿಸಿಕೊಳ್ಳಲ್ಪಟ್ಟವರಾಗಿ ಈ ಮೂವರು ಮಹಾಯತಿಗಳ ಹೆಸರನ್ನು ಕೇಳಿ ತಿಳಿದು ವಿಜಯಧ್ವಜರು ಭಯದಿಂದ ನಡುಗುತ್ತ ಇವರೆಡೆಗೆ ಬಂದವರೇ ಸಾಷ್ಟಾಂಗವೆರಗಿ ದೂರ ಸರಿದು ನಿಂತರು. ಇವರ ಚಿಕ್ಕ ವಯಸ್ಸನ್ನೂ ಇವರು ಅಡಿಗೆ ಮಾಡಿ ಸನ್ಯಾಸಭ್ರಷ್ಟರಾದದ್ದನ್ನೂ ನೋಡಿ ವ್ಯಾಸರಾಯರಿಗೆ ನಗೆ ಬಂದಿತು.

ಕ್ಷುಧೆಯಿಂದ ಬಳಲಿ ಅಜ್ಞಭಾವದಿಂದ ಮಾಡಿದ ಈ ಕಾರ್ಯಕ್ಕೆ ಪ್ರಾಯಶ್ಚಿತ್ತವುಂಟೆಂದು **ಶ್ರೀರಘುನಾಥತೀರ್ಥ**ರು ತಿಳಿದು ನುಡಿದರು. ಶ್ರೀವ್ಯಾಸರಾಯರು ದೇಹಾಂತ ಪ್ರಾಯಶ್ಚಿತ್ತವೇ ಇದಕ್ಕೆ ಯೋಗ್ಯವೆಂ ತೆಂದರು. ಕಡೆಗೆ ಮೂವರೂ ಶ್ರೀಗಳು ಆಲೋಚಿಸತೊಡಗಿದರು. ಒಬ್ಬೊಬ್ಬರಲ್ಲಿಯೇ ಅನೇಕ ಪಾಪಗಳನ್ನು ಕಳೆದುಹಾಕುವಷ್ಟು ಸಾಮರ್ಥ್ಯ. ಅಂತಹದರಲ್ಲಿ ಮೂವರು ಒಂದೆಡೆಯಲ್ಲಿ ಸೇರಿದ ಮೇಲೆ ಹೇಳುವದೇನು! ಕ್ಷಣದಲ್ಲಿಯೇ, ಚಿತ್ತದ ಅಶುದ್ಧಿಯಿಂದುಂಟಾದ ಸಕಲ ಪಾಪಗಳೂ ಭಾಗವತ ಸಪ್ತಾಹದಿಂದ ಕಳೆದುಹೋಗುವವೆಂಬ ಪದ್ಮ ಪುರಾಣದ ವಚನವನ್ನು ಶ್ರೀವ್ಯಾಸರು ಹುಡುಕಿತೆಗೆದರು. ಅನಶನರಾಗಿ ಭಾಗವತ ಸಪ್ತಾಹವನ್ನು ಮಾಡಿ ಪಾಂಡಿತ್ಯವಿದ್ದರೆ ಭಾಗವತಕ್ಕೆ ವ್ಯಾಖ್ಯಾನವನ್ನೂ ಬರೆದು ತಮ್ಮ ಬಳಿಗೆ ಬರುವದಾದರೆ ಮುಂದಿನ ಮಾತನ್ನು ಅಪ್ಪಣೆಕೊಡಿಸುವೆವೆಂದು ಮೂವರೂ ಯತಿಗಳು ವಿಜಯ ಧ್ವಜರಿಗೆ ಹೇಳಿದರು.

ವಿಜಯಧ್ವಜರು ಆರು ತಿಂಗಳುಗಳ ವರೆಗೆ ವ್ರತದಿಂದಿದ್ದು

ಭಾಗವತಕ್ಕೆ ವ್ಯಾಖ್ಯಾನವನ್ನು ಬರೆದುಕೊಂಡು ಸಪ್ತಾಹವನ್ನು ಮಾಡಿ ಆ ಮೇಲೆ ಶ್ರೀರಘುನಾಥತೀರ್ಥರ ಬಳಿಗೆ ಬಂದರು. ವ್ಯಾಖ್ಯಾನವನ್ನು ಶ್ರೀಪಾದರಾಯರೂ ವ್ಯಾಸರಾಯರೂ ಪರಿಶೋಧಿಸಿದರು. ಆದನ್ನು ಅಭಿಮಂತ್ರಿಸಿ ಅದು ಲೋಕದಲ್ಲಿ ಹೆಸರುವಾಸಿಯಾಗುವಂತೆ ಅನುಗ್ರಹಿಸುವುದೆಂದು ಅವರು ಶ್ರೀರಘುನಾಥತೀರ್ಥರನ್ನು ಬೇಡಿಕೊಂಡರು. ಅದರಂತೆಯೇ ಶ್ರೀಗಳು ಮಾಡಿದರು.

ವಿಜಯಧ್ವಜರು ತಮ್ಮನ್ನು ಪಾವನ ಮಾಡಿದುದಕ್ಕಾಗಿ ಶ್ರೀಗಳ ಮಹಿಮೆಯನ್ನು ಹೊಗಳುತ್ತ ಉಡಪಿಗೆ ಹೋದರು.

ಆ ಮೇಲೆ ಶ್ರೀಪಾದರಾಯರನ್ನೂ ಶ್ರೀವ್ಯಾಸರನ್ನೂ ಮತ ಪ್ರಸಾರಕ್ಕಾಗಿ ಸಂಚಾರಕ್ಕೆ ಕಳುಹಿ ಶ್ರೀಗಳು ತಾವು ನಿವೃತ್ತಿ ಸಂಗಮಕ್ಕೆ ದಯಮಾಡಿಸಿದರು. ಶಿಷ್ಯರಿಗೆ ಮಂತ್ರ ಮುದ್ರಾಧಾರಣೆಗಳನ್ನು ಕೊಡುತ್ತ ಶ್ರೀಗಳು ಅಲ್ಲಿಯೇ ಬಹು ಕಾಲವಿದ್ದರು. ಬಳಿಕ ಅವರು **ಮಳಖೇಡ**ಕ್ಕೆ ಬಂದರು. ಅಲ್ಲಿ ದೇಹಾಯಾಸವಾಗಲು ಶ್ರೀಗಳು **ರಾಮಚಂದ್ರಶಾಸ್ತ್ರಿ**ಗಳೆಂಬವರಿಗೆ ಆಶ್ರಮವಿತ್ತು **ಶ್ರೀರಘುವರ್ಯ**ರೆಂದು ಹೆಸರಿಟ್ಟು ಅವರಿಗೆ ಸಂಸ್ಥಾನಾಭಿಷೇಕವನ್ನು ಮಾಡಿಸಿದರು. ಮುಂದೆ ೧೪೩೪ನೇ ಶಕೆಯ ದುಂದುಭಿಸಂವತ್ಸರದ ಮಾರ್ಗಶೀರ್ಷ ವದ್ಯ ೧ ದಿನ ನಾರಾಯಣನಾಮನಿರತರಾದರು. ಇವರು **ಕುಬೇರಾಂಶ**ರೆಂದು ಬಲ್ಲವರ ಅಭಿಪ್ರಾಯವು.

## ೧೩ ಶ್ರೀರಘುವರ್ಯತೀರ್ಥರು

**ಪಟ್ಟ:- ೧೬-೯-೧೪೩೪ನೇ ದುಂದುಭಿಯಿಂದ ೧೪-೩-೧೪೭೯ನೇ ಪಿಂಗಳದವರೆಗೆ**

ಇವರ ಪೂರ್ವಾಶ್ರಮದ ಹೆಸರು **ರಾಮಚಂದ್ರಶಾಸ್ತ್ರಿ**ಗಳು. ಇವರು ಶ್ರೀರಘುನಾಥರಿಂದ ಆಶ್ರಮವನ್ನು ಹೊಂದಿ ಉತ್ತರಾದಿ ಸಂಸ್ಥಾನವನ್ನು ೧೪ ವರ್ಷಗಳ ವರೆಗೆ ಆಳಿದರು. ಇವರು ಬಹುಜನ ಶಿಷ್ಯರನ್ನು ಮಾಡಿಕೊಂಡರು. ಇವರ ಕಾಲಕ್ಕೆ ದ್ವೈತಮತ ಪ್ರಚಾರವಂತೂ ಘನವಾಯಿತು. ಇವರು "**ಪ್ರವಾಹವಸು**" **ದೇವಾಂಶ**ರೆಂದು ಪ್ರಸಿದ್ಧಿಯಿದೆ.

ಶ್ರೀಗಳು **ರಾಮಚಂದ್ರ**ನೆಂಬ ಒಬ್ಬ **ಬಾಲಬ್ರಹ್ಮಚಾರಿ**ಯಾದವನಿಗೆ ಆಶ್ರಮವನ್ನು ಕೊಟ್ಟು ತಾವೇ ಆತನಿಗೆ ಪಾಠವನ್ನು ಹೇಳಿ ಕೊಡುತ್ತಿದ್ದರು. ತಮಗೆ ಕಾಲವು ಸಮೀಪಿಸಲು ಬಾಲಯತಿಗಳನ್ನು ಬಳಿಗೆ ಕರೆದು ಶ್ರೀಗಳು:- "ಹೆಗಲಲ್ಲಿ ದೇವರನ್ನು ಹೊತ್ತು ತಿರುಗುವ ಕಾಲವು ಇದಲ್ಲ; ಅದರಿಂದ ಗೌರವವು ಕಡಿಮೆಯಾಗುತ್ತಿದೆ. ಆದ್ದರಿಂದ ಇನ್ನು ಮೇಲೆ ನೀವು ರಾಜಸ್ಥಾನದ ಸೊಬಗನ್ನು ಮಠಕ್ಕೆ ತಂದುಕೊಂಡು ಅಲ್ಲಲ್ಲಿ ಮಠದ ಅಧಿಕಾರಿಗಳನ್ನು ನಿಯಮಿಸಿ ಅವರ ಮುಖಾಂತರವಾಗಿ ಮಠದ ಮರ್ಯಾದೆಯನ್ನು ಜನರಲ್ಲಿ ಹಬ್ಬಿಸಬೇಕು. ಇಲ್ಲವಾದರೆ ಧರ್ಮಬುದ್ಧಿಯು ಸಡಿಲಾದ ಈ ಸಮಯವಲ್ಲಿ ಕೇಳುವದೇನು!' ಎಂತಾಗಿ ಅವರಿಗೆ ಉಪದೇಶಮಾಡಿದರು. ಆ ಮೇಲೆ ತಮ್ಮಲ್ಲಿ ಕಲಿತು ಮಠದ ಮುಖ್ಯ ಶಿಷ್ಯರಾಗಿರುವ **ಮಣ್ಣೂರ ಆದ್ಯಮನೆತನದ** ಮೂಲಪುರುಷರಾದ **ವರದರಾಜಾಚಾರ್ಯ**ರನ್ನು ಶ್ರೀಗಳು ಬರಮಾಡಿಕೊಂಡು ಶಾಸ್ತ್ರಾಧ್ಯಯನಕ್ಕೆಂದು ಶ್ರೀರಘೂತ್ತಮತೀರ್ಥರನ್ನು ಅವರಿಗೆ ಒಪ್ಪಿಸಿದರು.

ಇಂತು ಸಂಸ್ಥಾನದ ವ್ಯವಸ್ಥೆಯನ್ನು ಚೆನ್ನಾಗಿ ಮಾಡಿ ಶ್ರೀರಘುವರ್ಯರು ಆನೇಗುಂದೆಯಲ್ಲಿ ೧೪೭೯ನೇ ಶಕೆಯ ಪಿಂಗಳ ಸಂವತ್ಸರದ ಜೇಷ್ಠ ವದ್ಯ ೩ ದಿನ ಹರಿಧ್ಯಾನಪರರಾದರು.

## ೧೪ ಶ್ರೀರಘೂತ್ತಮತೀರ್ಥರು



ಪಟ್ಟ:- ೧೮-೩-೧೪೭೯ನೇ ಪಿಂಗಳದಿಂದ ೨೬-೧೦-೧೫೧೭ನೇ ಮನ್ಮಥದವರೆಗೆ

ಇವರ ಪೂರ್ವಾಶ್ರಮದ ಹೆಸರು **ರಾಮಚಂದ್ರಾಚಾರ್ಯ**ರು. ಹಿಂದಿನಂತೆ ಇವರು ಬಾಲ್ಯದಲ್ಲಿಯೇ ಗುರುಗಳಿಂದ ಆಶ್ರಮವನ್ನು ಸ್ವೀಕರಿಸಿ ಅವರಲ್ಲಿಯೇ ಓದುತ್ತಿದ್ದು ಗುರುಗಳ ವೃಂದಾವನದ ತರುವಾಯದಲ್ಲಿ ಅವರ ಅಪ್ಪಣೆಯಂತೆ ಆದ್ಯ ಮನೆತನದ ವರದಾಚಾರ್ಯರ ಕಡೆಗೆ ಮಣ್ಣೂರಲ್ಲಿ ಅಧ್ಯಯನಕ್ಕಾಗಿ ವಾಸವಾಗಿದ್ದರು. ಅವರ

ಾಗಿನ ವ್ಯವಹಾರವು ಕೇವಲ ಬಿಡಿ ಸನ್ಯಾಸಿಗಳಂತೆ ಇತ್ತು. ಸಂಸ್ಥಾನದ ವೈಭವಾದಿಗಳನ್ನು ಅವರು ಬಿಟ್ಟುಕೊಟ್ಟಿದ್ದರು.

ಆಗ ಮಣ್ಣೂರ ಗ್ರಾಮದ **ದಳಪತಿಯು** ತಮ್ಮ ವರದಾ ಚಾರ್ಯರೇ ಶ್ರೀಗಳಿಗಿಂತ ಶ್ರೇಷ್ಠರೆಂಬ ಭಾವನೆಯನ್ನು ತಂದುಕೊಂ ತನು. ಅದುಕಾರಣವೇ ಆತನು ಒಂದು ಸಾಧನೆಯ ದ್ವಾದಶಿಯ ದಿನ, ಶ್ರೀಗಳಿಂದ ತುಸು ತಡವಾಗಿರಲು, ಅವರನ್ನುಳಿದೇ ಪಾರಣೆಯನ್ನು ಮಾಡಲು ಆಪೋಶನವನ್ನು ತೆಗೆದುಕೊಳ್ಳುವ ಧೈರ್ಯಮಾಡಿದನು. ಇಷ್ಟರಲ್ಲಿ ಶ್ರೀಗಳು ಬಂದು ಬಿಟ್ಟರು. ಆಗ ದಳಪತಿಯ ಹೆಂಡತಿಯು ದ್ವಾದಶಿಯ ತಿಥಿಯು ಇನ್ನೂ ಸ್ವಲ್ಪ ಉಳಿದದ್ದರಿಂದ ತಾನೇ ತೀವ್ರ ವಾಗಿ ಶ್ರೀಗಳಿಗೆ ಹಸ್ತೋದಕವನ್ನು ಮಾಡಿಸಿದಳು. ಭೋಜನವಾಗಿ ಶ್ರೀಗಳು ತಾವಿರುವಲ್ಲಿಗೆ ಬಂದರು. ಆದರೆ ಆ ದಿನದ ದಳಪತಿಯ ನಡತೆಯು ಅವರನ್ನು ಬಲವಾಗಿ ನೋಯಿಸಿತು. ಅವರು ಮನದ ಲ್ಲಿಯೇ ಮರುಗುತ್ತ ಮಲಗಿಕೊಂಡರು. ಆಗ ಅವರ ಕನಸಿನಲ್ಲಿ ಗುರು ಗಳಾದ ಶ್ರೀರಘುವರ್ಯರು ಬಂದು ವರದಾಚಾರ್ಯರ ಬಳಿಯಲ್ಲಿಯ ಅವರ ಅಧ್ಯಯನವನ್ನು ನಿಲ್ಲಿಸಲು ಹೇಳಿದರು. ಓದಿದಂತೆ ಕಠಿಣವಾಕ್ಯ ಗಳಿಗೂ ಸುಲಭವಾಗಿ ಅರ್ಥವಾಗುವಂತೆ ಅವರನ್ನು ಅನುಗ್ರಹಿಸಿ ಅದೃಶ್ಯರಾದರು.

ಎಚ್ಚತ್ತು ಸ್ವಾಮಿಗಳು ಗುರುಗಳ ಅಪ್ಪಣೆಯಂತೆ ಪಾಠವನ್ನು ಹೇಳಲು ಮೊದಲುಮಾಡಿದರು. ವರದಾಚಾರ್ಯರಲ್ಲಿಯ ಅವರ ಅಧ್ಯ ಯನವೂ ದಳಪತಿಯಲ್ಲಿಯ ಅವರ ಭಿಕ್ಷೆಯೂ ನಿಂತು ಹೋದವು. ಶ್ರೀಗಳ ಪಾಠಕ್ರಮವನ್ನು ಕಂಡು ಆಚಾರ್ಯರು ಬೆರಗಾದರು. ತಮಗೂ ಅಸಾಧ್ಯವಾಗಿದ್ದ ವಾಕ್ಯಾರ್ಥಗಳು ಶ್ರೀಗಳ ಬಾಯಿಂದ ಸುಲಭ ವಾಗಿ ಹೊರಡುತ್ತಿದ್ದುದನ್ನು ತಿಳಿದು ಅವರಿಗೆ ಏನೂ ತೋಚದಾಯಿತು. ಆಗ ಆಚಾರ್ಯರ ಉಕ್ಕು ಇಳಿದು ಶ್ರೀಗಳ ಬಳಿಗೆ ಬಂದು ಅವರು ಸಾಷ್ಟಾಂಗವೆರಗಿ ಬಿಟ್ಟರು. ತಮ್ಮ ಮಹಾಪರಾಧವನ್ನು ಕ್ಷಮಿಸುವು ದೆಂದು ಭಯದಿಂದ ನಡುಗುತ್ತ ಬೇಡಿಕೊಳ್ಳತೊಡಗಿದರು. ಶ್ರೀಗಳು ಆಚಾರ್ಯರನ್ನು ಮನ್ನಿಸಿ ಮುನ್ನಿನಂತೆ ಮಠದಲ್ಲಿರಲು ಹೇಳಿದರು.

ಇಂತು ಜ್ಞಾನೋದಯವಾದ ಮೇಲೆ ಶ್ರೀಗಳು ಮತ್ತೆ ದೇವರ ಪೆಟ್ಟಿಗೆಯನ್ನು ಹೊತ್ತುಕೊಂಡು ಸಂಚಾರಕ್ಕೆ ಹೊರಟರು. ಆದರೆ ಇಷ್ಟರಲ್ಲಿಯೇ ಗುರುಗಳ ಆಜ್ಞೆಯು ನೆನಪಾಗಿ ಅವರು ಛತ್ರಚಾಮರಾದಿ ಸಂಸ್ಥಾನದ **ವೈ**ಭವವನ್ನು ಬೆಳೆಸಲು ಅಂದಿನಿಂದ ಮೊದಲು ಮಾಡಿದರು. ಈ ಶ್ರೀಗಳ ಕಾಲದಿಂದಲೇ ಮಠದಲ್ಲಿ ಚಿಕ್ಕ ನೈವೇದ್ಯ, ಮಹಾನೈವೇದ್ಯ ಇವುಗಳ ವಾಡಿಕೆಯು ಬಿದ್ದು ಅದು ಈಗಲೂ ನಡೆಯುತ್ತಿದೆ. ಮಠವು ಊರಲ್ಲಿ ಬರುವದೆಂದರೆ ಒಬ್ಬಾನೊಬ್ಬ ದೊಡ್ಡ ಅರಸನು ಬಂದಂತೆ ಈ ಶ್ರೀಗಳ ಕಾಲದಿಂದಲೇ ತೋರತೊಡಗಿತು.

ಈ ಶ್ರೀಗಳು ಮುಂದೆ ಅನೇಕ ಗ್ರಂಥಗಳನ್ನೂ ರಚಿಸಿದರು:-

| | |
|---|---|
| ೧) ಭಾವಬೋಧಿ | ತತ್ವಪ್ರಕಾಶದ ಟಿಪ್ಪಣಿ. |
| ೨) ಬ್ರಹ್ಮ ಪ್ರಕಾಶಿಕಾ | ಬೃಹದಾರಣ್ಯಭಾಷ್ಯ ಟೀಕಾ. |
| ೩) ,, ,, | ನ್ಯಾಯವಿವರಣೆಯ ಟೀಕಾ. |
| ೪) ಪ್ರಮೇಯ ದೀಪಿಕಾ | |

ಇವರ ಎಲ್ಲ ಗ್ರಂಥಗಳಿಗೆ **ಭಾವಬೋಧಿ**ಯೆಂದು ಹೆಸರಿಟ್ಟಿದ್ದರ ಮೇಲಿಂದಲೇ ಈ ಶ್ರೀಗಳು **ಭಾವಬೋಧಕಾರ**ರೆಂದು ಹೆಸರುಗೊಂಡಿದ್ದಾರೆ.

ಇವರ ಕಾಲಕ್ಕೆ ಮಠದಲ್ಲಿ ಪಿಲ್ಲೂರವಂಶದ **ಕೊನ್ಹೇರಭಟ್ಟ**ರೆಂಬೊಬ್ಬ ಮಹಾ ವಿದ್ವಾಂಸರಿದ್ದರು. ಇವರಿಗೆ ಬಡತನ ಬಹಳ. ಆ ಕಾರಣವೇ ಇವರು ಶ್ರೀವೇದವ್ಯಾಸರನ್ನು ಪ್ರಸನ್ನೀಕರಿಸಿಕೊಳ್ಳಲು ೧೨ ವರ್ಷಗಳ ವರೆಗೆ ವೇದವ್ಯಾಸಮಂತ್ರದ ಪುನಶ್ಚರಣೆಯನ್ನು ಮಾಡುತ್ತ ತಪವಾಚರಿಸಿದರು. ಆಗ ಶ್ರೀ ವೇದವ್ಯಾಸರ ಅನುಗ್ರಹದಿಂದ ಭಟ್ಟರಿಗೆ ನಾಲ್ವರು ಮಹಾ ಭಾಗ್ಯವಂತ ಮಕ್ಕಳಾದರು. ಅವರೊಳಗಿನ **ವ್ಯಾಸಾಚಾರ್ಯ**ರೆಂಬವರು ಘನಪಂಡಿತರೂ ತಪಸ್ವಿಗಳೂ ಆಗಿದ್ದು ಶ್ರೀಗಳ ಭಾವಬೋಧಿಯನ್ನು ಮುಖೋದ್ಗತಮಾಡಿಕೊಂಡು ಯಾವಾಗಲೂ ಮಠದೊಡನೆಯೇ ತಿರುಗುತ್ತಿದ್ದರು. ತಮ್ಮಲ್ಲಿ ಪಾಠವನ್ನು ಹೇಳಿಸಿಕೊಂಡು ತಮ್ಮೆದುರಿನಲ್ಲಿಯೇ ಬೇರೆ ಶಿಷ್ಯರಿಗೆ ಆಚಾ

ರ್ಯರು ಪಾಠಹೇಳುವುದನ್ನು ಶ್ರೀಗಳು ನೋಡಿ ಬೆರಗಾಗಿ ಆನಂದ ಬಟ್ಟರು. ಆಗ ಅಲ್ಲಲ್ಲಿ ಹಲಕೆಲವು ಅಧಿಕರಣಗಳಿಗೆ ಟಿಪ್ಪಣಿಗಳನ್ನು ಸಹ ಅವರ ಕಡೆಯಿಂದಲೇ ಶ್ರೀಗಳು ಬರೆಯಿಸಿಡಲಾರಂಭಿಸಿದರು.

ಮುಂದೆ ಶ್ರೀಗಳವರ ಪ್ರೇಮವು ಆಚಾರ್ಯರ ಮೇಲೆ ಬೆಳೆಯುತ್ತ ಹೋಗಿ ಅವರಿಂದ ಶ್ರೀಮೂಲರಾಮದೇವರ ಪೂಜೆಯನ್ನು ಮಾಡಿಸಿ ಸಂತೋಷಪಡುವುದೆಂದು ಅವರು ಒಮ್ಮೆ ಬಯಸಿದರು. ತಮ್ಮ ಬಯಕೆಯನ್ನು ಅಚಾರ್ಯರಿಗೆ ತಿಳಿಸಿ ಅವರಿಗೆ ೧೫೧೬ನೇ ಜಯ ಸಂವತ್ಸರ ವೈಶಾಖ ಶುದ್ಧ ೧೫ಕ್ಕೆ ಯತ್ಯಾಶ್ರಮವನ್ನು ಕೊಟ್ಟು ಅವರನ್ನು ಶ್ರೀಮದಾಚಾರ್ಯರ ಪೀಠಕ್ಕೆ ಪಟ್ಟಗಟ್ಟಿದರು. ಶಿಷ್ಯನಿಂದ ಶ್ರೀರಾಮರ ಪೂಜೆಯನ್ನು ಮಾಡಿಸುವುದೆಂಬ ಶ್ರೀಗಳ ಬಯಕೆಯು ಈಡೇರಿತು. ಮುಂದೆ ಕೆಲ ದಿನ ಈರ್ವರೂ ಶ್ರೀಗಳವರು ದ್ವೈತ ಪ್ರಸಾರ ಮಾಡುತ್ತಿದ್ದು ಕಡೆಗೆ **ಶ್ರೀರಘೂತ್ತಮರು** ಶಕೆ ೧೫೧೭ನೇ ಮನ್ಮಥ ಸಂವತ್ಸರ ಪುಷ್ಯ ವದ್ಯ ೧೧ ದಿನ **ದಕ್ಷಿಣಪಿನಾಕಿನೀ ನದಿಯ** ತೀರದ **ತಿರಕೋಲೂರ**ಲ್ಲಿ ನಾರಾಯಣ ಧ್ಯಾನಪರರಾದರು. **ಇವರು ನಿಋತಿದೇವಾಂಶ**ರೆಂದು ಪ್ರಸಿದ್ಧಿಯಿದೆ.

## ೧೫ ಶ್ರೀವೇದವ್ಯಾಸತೀರ್ಥರು



**ಪಟ್ಟ:- ೨೬-೧೦-೧೫೧೭ನೇ ಮನ್ಮಥದಿಂದ ೩-೧-೧೫೪೧ನೇ ಸಿದ್ಧಾರ್ಥಿಯವರೆಗೆ**

ಗುರುಗಳಿರುವಾಗಲೇ ಇವರು ಪಟ್ಟಕ್ಕೆ ಬಂದಿದ್ದರೆಂದು ಈ ಮೊದಲೇ ಹೇಳಿದೆಯಷ್ಟೇ. ಆವಾಗಿನಿಂದಲೂ **ಶ್ರೀವೇದವ್ಯಾಸತೀರ್ಥರು** ಅನೇಕ ದೇಶಗಳನ್ನು ಸಂಚರಿಸುತ್ತಿದ್ದು ಮಧ್ವಮತವನ್ನು ಹಬ್ಬುಗೊಳಿಸಿದರು.

ಒಮ್ಮೆ ಕಂಚೀ ಪಟ್ಟಣಕ್ಕೆ ದಯಮಾಡಿಸಿರಲು ಅವರು ಅಲ್ಲಿಯ **ಚಿಂಚೋಳಿ ಕೃಷ್ಣದ್ವೈಪಾಯನಾಚಾರ್ಯ**ರೆಂಬವರಿಗೆ ಸನ್ಯಾಸವನ್ನು ಕೊಟ್ಟು ಅವರಿಂದ ಕೆಲ ದಿನ ಸಂಸ್ಥಾನಪೂಜೆಯನ್ನು ಮಾಡಿಸಿದರು. ಆ ಮೇಲೆ ದಿಗ್ವಿಜಯರಾಮದೇವರ ಪ್ರತಿಮೆಯನ್ನವರಿಗೆ ಕೊಟ್ಟು ಶ್ರೀಗಳು ಅವರನ್ನು ಸಂಚಾರಕ್ಕೆ ಕಳುಹಿದರು.

ತರುವಾಯ ಶ್ರೀಗಳು ಮತ್ತಿಬ್ಬರಿಗೆ ಯತ್ಯಾಶ್ರಮವನ್ನು ಕೊಟ್ಟರು. ಅವರಲ್ಲಿ ಒಬ್ಬರನ್ನು **ವಿದ್ಯಾಪತಿತೀರ್ಥ**ರೆಂದು ಕರೆದರು; ಮತ್ತೊಬ್ಬರಿಗೆ **ವೇದೇಶತೀರ್ಥ**ರೆಂಬ ಹೆಸರಿಟ್ಟರು. ಕೆಲ ದಿನಗಳ ಮೇಲೆ ಇವರನ್ನೂ ಶ್ರೀಗಳು ಸಂಚಾರಕ್ಕೆ ಕಳುಹಿದರು.

ಅಲ್ಲಿಂದ ಶ್ರೀಗಳು ಪಯಣಗತಿಯಿಂದ ಒಮ್ಮೆ ಪೆನಗುಂಡಿಗೆ ಹೋದರು. ಇವರಿಂದ ಮೊಟ್ಟ ಮೊದಲು ಸನ್ಯಾಸವನ್ನು ಸ್ವೀಕರಿಸಿದ **ನಾರಾಯಣಯತಿ**ಗಳೆಂಬವರು ಬಂಕಾಪುರದಲ್ಲಿದ್ದರು. ಅವರು ಪೀಠವುಳ್ಳ ೨ ರಾಮಪ್ರತಿಮೆಗಳನ್ನು ಮಾಡಿಸಿ ಒಂದನ್ನು **ಮಳಿಗಿ ತಮ್ಮಣ್ಣಭಟ್ಟ**ರೆಂಬವರಿಗೆ ಕೊಟ್ಟು ಇನ್ನೊಂದನ್ನು ತಾವೇ ಪೂಜೆಮಾಡುತ್ತಿದ್ದರು. ಇವರೊಡನೆ ಯಾವಾಗಲೂ ಈರ್ವರು ಶಿಷ್ಯರು ಇರುತ್ತಿದ್ದರು. ಒಮ್ಮೆ ಈ ಯತಿಗಳು ರಾಯಚೂರಿಗೆ ಸಂಚರಿಸುತ್ತ ಹೋಗಿರುವಾಗ ಆ ಇಬ್ಬರು ಶಿಷ್ಯರ ಸಹಾಯದಿಂದ ಗೃಹಸ್ಥರಿಂದ ಭಿಕ್ಷಾದಕ್ಷಿಣೆಗಳನ್ನು ಪಡೆಯುತ್ತ ತಮ್ಮಲ್ಲಿರುವ ಪ್ರತಿಮೆಯು ಮೂಲರಾಮದೇವರದೆಂದು ಜನರಲ್ಲಿ ಭ್ರಮೆಯನ್ನು ಬೀರುತ್ತಿದ್ದರು. ಇದರಿಂದ ಅಲ್ಲಿಯ ಮಠಾಧಿಕಾರಿಯು ಇದ್ದ ಸಂಗತಿಯನ್ನು ಪೆನಗುಂಡಿಯಲ್ಲಿದ್ದ ಶ್ರೀಗಳಿಗೆ ಬರೆದು ತಿಳಿಸಿದನು. ಆ ಕೂಡಲೇ ನಾರಾಯಣಯತಿಗಳಿಗೆ ಶ್ರೀಗಳಿಂದ ಬಹಿಷ್ಕಾರವೇ ಬಂದುಬಿಟ್ಟಿತು. ಅದನ್ನು ಮಠಾಧಿಕಾರಿಯು ಸಭೆಯಲ್ಲಿ ಪ್ರಕಟಗೊಳಿಸಿದನು.

ಶ್ರೀಗಳು ಪೆನಗುಂಡಿಯಲ್ಲಿಯೇ ಅನೇಕ ದಿನಗಳ ವರೆಗೆ ಶ್ರೀರಾಮರ ಪೂಜೆಮಾಡುತ್ತಿದ್ದು ಹತ್ತರದ ಜನರನ್ನೆಲ್ಲ ಪಾಠಪ್ರವಚನಾದಿಗಳಿಂದ ತಣಿಸಿಬಿಟ್ಟರು. ಮುಂದೆ ಸಂಸ್ಥಾನವು ಅಲ್ಲಿಂದ ಹೊರಟಿತು. ಹೀಗೆಯೇ ಸಂಚಾರವು ಸಾಗಿರಲು, ದಿಲ್ಲಿಯ ಬಾದಶಹನಿಂದಲೂ ಮನ್ನಣೆಗೊಂಡ ಶ್ರೀಗಳವರು ತನ್ನ ರಾಜ್ಯಕ್ಕೆ ದಯಮಾಡಿಸಿದ್ದಾರೆಂಬ ವಾರ್ತೆಯನ್ನು ಶ್ರೀರಂಗಪಟ್ಟಣದ ಒಡೆಯನು ಕೇಳಿ ಇಂಥ ಪೂಜ್ಯರ ಪಾದಧೂಳಿಯು ತನ್ನ ರಾಜ್ಯದಲ್ಲಿ ಬೀಳಲೇಬೇಕೆಂದು ಆತನು ಬಯಸಿದನು. ಶ್ರೀಗಳೆಡೆಗೆ ಬಂದು ಅವನು ಆ ಪ್ರಕಾರಕ್ಕೆ ಬೇಡಿಕೊಂಡನು. ಅವನ ಬೇಡಿಕೆಯನ್ನು ಮನ್ನಿಸಿ ಶ್ರೀಪಾದರು ಶ್ರೀರಂಗದ

ಅರಸನಿಗೆ ಶ್ರೀರಾಮವೇದವ್ಯಾಸರ ಸಂದರ್ಶನವನ್ನಿತ್ತರು. ಇದರಿಂದ ಅರಸನು ಸಂತಸಬಟ್ಟು ಪೂರ್ವದಲ್ಲಿ ಕಿತ್ತುಕೊಂಡುಬಿಟ್ಟಿದ್ದ ಹಿರೇ ಮರಳಿ, ಚಿಕ್ಕಮರಳಿ ಮುಂತಾದ ಗ್ರಾಮಗಳನ್ನು ತಿರುಗಿ ಶ್ರೀಗಳಿಗೆ ಅರ್ಪಿಸಿದನು. ಅಲ್ಲದೆ ಮತ್ತೆ ಹೆಚ್ಚು ಹಳ್ಳಿಗಳನ್ನೂ ಉಂಬಳಿಯಾಗಿ ಹಾಕಿಕೊಟ್ಟು ಪಾಳೆಯಗಾರ ನರಸಿಂಗನಾಯಿಕನಿಗೆ ಸೇರಿದ **ಹೇಮಾವತೀ ನದೀ** ತೀರದಲ್ಲಿಯ **ನರಸಿಂಹಪುರ**ವೆಂಬ ಕ್ಷೇತ್ರದಲ್ಲಿ ಸಂಸ್ಥಾನದ ನಿತ್ಯವಾಸಕ್ಕೆಂದು ಒಂದು ಮಠವನ್ನು ಕಟ್ಟಿಸಿಕೊಟ್ಟು ಸಂಸ್ಥಾನಕ್ಕೆ ಭೂಷಣವಾದ ಅನೇಕ ವಸ್ತುವಾಹನಾದಿಗಳನ್ನು ಅರ್ಪಿಸಿದನು.

ಇದರಿಂದ ಶ್ರೀಗಳ ಮನಸ್ಸು ಅರಳಿತು. ಅದು ಕಾರಣವೇ ಬಹುಕಾಲ ಸಂಸ್ಥಾನಪೂಜೆಯು ಅಲ್ಲಿಯೇ ನಡೆಯಿತು. ಇಷ್ಟರಲ್ಲಿ ಕೃಷ್ಣ ದ್ವೈಪಾಯನರು ಸಂಚಾರದಿಂದ ಮರಳಿದರು. ತಾವು ತೆಗೆದುಕೊಂಡು ಹೋದ ದಿಗ್ವಿಜಯ ರಾಮದೇವರ ಪ್ರತಿಮೆಯನ್ನು ಅವರು ಮಠಕ್ಕೆ ತಿರುಗಿ ಒಪ್ಪಿಸಿದರು. ಆಗವರಿಗೆ ಕೆಲಕಾಲ ಗುರುಗಳ ಸನ್ನಿಧಿಯಲ್ಲಿ ಮಹಾ ಸಂಸ್ಥಾನದ ಪೂಜೆಯು ದೊರೆಯಿತು. ಕಾಲಾಂತರದಲ್ಲಿ ಹರಳಿನ ಸಂಪುಟದಲ್ಲಿರುವ ಶ್ರೀವೇದವ್ಯಾಸರ ರತ್ನಖಚಿತ ಮೂರ್ತಿಯನ್ನು ತೆಗೆದುಕೊಂಡು ಅಲ್ಲಿ ತಾವು ಒಂದು ಕೋಟಿ ವೇದವ್ಯಾಸಮಂತ್ರದಿಂದ ಅಭಿಮಂತ್ರಿಸಿದ ಶಿಲೆಯೊಂದನ್ನು ಇಡಬೇಕೆಂಬ ದುರ್ಬುದ್ಧಿಯು ದ್ವೈಪಾಯನರಿಗೆ ಉಂಟಾಯಿತು. ಅದರಂತೆ ಅವರು ಮೂರ್ತಿಯನ್ನು ತಕ್ಕೊಂಡು ತಮ್ಮ ಸಂಚಾರದ ಪೆಟ್ಟಿಗೆಯಲ್ಲಿಟ್ಟು ಮರುದಿನವೇ ಉತ್ತರದ ಕಡೆಗೆ ತಮ್ಮ ಪಯಣವೆಂದು ಗೊತ್ತುಮಾಡಿದರು. ಆದರೆ ಶ್ರೀವೇದವ್ಯಾಸರು ತಮ್ಮ ಮೂರ್ತಿಯನ್ನು ಕೊಂಡೊಯ್ಯಲು ದ್ವೈಪಾಯನರಿಗೆ ಅಡ್ಡೀಮಾಡಿದರು. ಬಲುಮೆಯಿಂದ ಒಯ್ದರೆ ನಿನಗೆ ಕಲ್ಯಾಣವಾಗಲಾರದೆಂದು ಕನಸಿನಲ್ಲಿ ಕಂಡು ಅವರಿಗೆ ಹೇಳಿದರು. ಇದರಂತೆ ಶಿಷ್ಯನಿಂದ ತಮ್ಮ ಮೂರ್ತಿಯನ್ನು ತೆಗೆದುಕೊಳ್ಳುವದೆಂದು ಶ್ರೀಗಳವರಿಗೂ ಸ್ವಪ್ನವಾಯಿತು. ಇಂತು ಈರ್ವರೂ ದುಗುಡಗೊಂಡರು. ಮರುದಿನವೇ ದ್ವೈಪಾಯನರು ಸ್ನಾನಾದಿಗಳನ್ನು ಮುಗಿಸಿಕೊಂಡು ಶ್ರೀಗಳ ಪೂಜೆಯ ಕಾಲಕ್ಕೆ ತಮ್ಮ ದೇವರ ಪೆಟ್ಟಿಗೆಯನ್ನು ಅವರ

ಮುಂದಿಟ್ಟು ಸಾಷ್ಟಾಂಗವೆರಗಿದರು. ಧಾರೆಯಾಗಿ ಕಣ್ಣೀರುದಿರಿಸುತ್ತ ಅಪರಾಧವನ್ನು ಕ್ಷಮಿಸುವುದೆಂದು ಶ್ರೀಗಳನ್ನು ಅವರು ಬೇಡಿಕೊಂಡರು. ಕನಸಿನ ವೃತ್ತಾಂತವನ್ನು ವಿಸ್ತರಿಸಿ ಅವರು ಶ್ರೀಗಳಿಗೆ ನಿಜವನ್ನು ಬಿಚ್ಚಿಹೇಳಿದರು. ಆಗ ಶ್ರೀಗಳು ವೇದವ್ಯಾಸದೇವರ ಪೆಟ್ಟಿಗೆಯನ್ನು ತರಿಸಿ ತಾವೇ ಸಂಪುಟವನ್ನು ತೆರೆದು ನೋಡುವಲ್ಲಿ ಅಲ್ಲಿ ಕಾಂತಿಯುಕ್ತವಾದ ಕರಿಬಣ್ಣದ ಶಿಲೆಯೊಂದು ಕಣ್ಣಿಗೆ ಬಿತ್ತು. ಅದನ್ನು ತೆಗೆದು ಶ್ರೀಗಳು ಬಂಗಾರದ ತಟ್ಟೆಯಲ್ಲಿಟ್ಟು ದ್ವೈಪಾಯನರ ಪೆಟ್ಟಿಗೆಯೊಳಗಿನ ಶ್ರೀವೇದವ್ಯಾಸರ ಮೂರ್ತಿಯನ್ನು ತೆಗೆದು ತಮ್ಮ ಸಂಪುಟದಲ್ಲಿಟ್ಟುಕೊಂಡರು. ಶ್ರೀವೇದವ್ಯಾಸ ಮಂತ್ರದಿಂದ ಅಭಿಮಂತ್ರಿತವಾದ ಆ ಕಲ್ಲನ್ನು ಏನು ಮಾಡುವದೆಂಬ ಬಗ್ಗೆ ವಾದವಿವಾದ ನಡೆದು ಕೆಲವು ಅಜ್ಞ ಶಿಷ್ಯರು ಕಲ್ಲಮೇಲಿಟ್ಟು ಅದನ್ನು ಹಾರಿಯಿಂದ ಹೊಯ್ದರು. ಆದರೆ ಕೆಳಗಿನ ಕಲ್ಲು ಹಾರಿತೇ ಹೊರತು ಆ ಕಲ್ಲೇನು ಒಡೆಯಲಿಲ್ಲ. ಅಲ್ಲದೇ ಹಾರಿಯಿಂದ ಹೊಡೆಯಲಿಕ್ಕೆ ಹೋದವರ ಕೈಗಳಿಗೆ ಗುಳ್ಳೆಗಳೆದ್ದು ರಕ್ತವು ಸುರಿಯತೊಡಗಿತು. ಆಗ ಜನರು ಗಾಬರಿಯಾಗಿ ನಿಜಸಂಗತಿಯನ್ನು ತಿಳಿದುಹೇಳಲು ಶ್ರೀಗಳನ್ನು ಬೇಡಿಕೊಂಡರು. ಕೃಷ್ಣದ್ವೈಪಾಯನರ ಛಲದಿಂದುಂಟಾದ ದ್ರೋಹವನ್ನು ದೂರ ಮಾಡಲು ಶ್ರೀಗಳನ್ನು ದೀನರಾಗಿ ಕೇಳಿದರು. ಆ ಕಾಲಕ್ಕೆ ದ್ವೈಪಾಯನರು ಶ್ರೀಗಳ ಹತ್ತಿರ ಕೈಜೋಡಿಸಿಕೊಂಡು ನಿಂತಿದ್ದರು. ದೇವರು ತನ್ನ ಮಹಿಮೆಯನ್ನು ಅಜ್ಞರಿಗೆ ತಿಳಿಸಲು ಮಾಡಿದ ಲೀಲೆಯಿದು; ದ್ವೈಪಾಯನರು ಅಪರಾಧಿಗಳಲ್ಲವೆಂದು ಶ್ರೀಗಳು ಎಲ್ಲರಿಗೂ ಹೇಳಿದರು. ನಿಜವನ್ನು ವಿವರಿಸಲು ದ್ವೈಪಾಯನರಿಗೆ ಶ್ರೀಗಳ ಆಜ್ಞೆಯಾಯಿತು. ಆಗ ಅವರು ಎಲ್ಲವನ್ನೂ ಬಿಚ್ಚಿ ಹೇಳಿದರು. ಕೃಷ್ಣಶಿಲೆಗೆ ತಾವು ೧ ಕೋಟಿ ಸಲ ಶ್ರೀವೇದವ್ಯಾಸಮಂತ್ರ ಪುನಶ್ಚರಣೆಯಿಂದ ಅಭಿಮಂತ್ರಿಸಿರುವೆವೆಂದು ಅಂದರು; ಶ್ರೀವೇದವ್ಯಾಸರ ಪ್ರತಿಮೆಯನ್ನು ಕೆಲ ದಿನಗಳ ವರೆಗೆ ಪೂಜೆಮಾಡಿ ತಿರುಗಿ ಕೊಡುವ ಇಚ್ಛೆಯಿಂದ ಅದನ್ನು ತಕ್ಕೊಂಡಿದ್ದೇವೆಂದು ಹೇಳಿದರು.

ಈ ಸಮಾಚಾರವನ್ನು ಕೇಳಿ ಶ್ರೀಗಳು ಸಂತುಷ್ಟರಾದರು.

ಕೃಷ್ಣದ್ವೈಪಾಯನರು ಅಭಿಮಂತ್ರಿಸಿದ ಕೃಷ್ಣಶಿಲೆಯನ್ನು ಶ್ರೀಪಾದರು ವೇದವ್ಯಾಸಸಂಪುಟದ ಆರನೇ ಸಂಪುಟದಲ್ಲಿರಿಸಿ ಅವರಿಗೆ ಒಂದು ರಾಮಪ್ರತಿಮೆಯನ್ನು ಪೂಜೆಗಾಗಿ ಕೊಟ್ಟು ಸಂಚಾರಕ್ಕೆ ಅವರಿಗೆ ಅಪ್ಪಣೆಯನ್ನು ಕೊಟ್ಟರು.

ಆ ಮೇಲೆ ಶ್ರೀಗಳು ನರಸಿಂಹಪುರದಿಂದ ಉತ್ತರಕ್ಕೆ ಸಂಚಾರಕ್ಕಾಗಿ ಹೊರಟರು. ಹೋಗಹೋಗುತ್ತ ಕಡಪೆಯ ಕಡೆಗೆ ಅವರ ಬರವಾಯಿತು. ಇಷ್ಟರಲ್ಲಿ ಶ್ರೀಗಳ ಆಜ್ಞೆಯಿಂದ ಸಂಚಾರಕ್ಕೆ ಹೊರಟಿದ್ದ ವಿದ್ಯಾಪತಿಸ್ವಾಮಿಗಳು ದ್ವೈತಮತವನ್ನು ಹಬ್ಬುಗೊಳಿಸುತ್ತ ವೆಲ್ಲೂರಿಗೆ ಬಂದು ಅಸ್ವಸ್ಥೆಯಿಂದ ಅಲ್ಲಿಯೇ ವೃಂದಾವನಸ್ಥರಾದರು. ಕೃಷ್ಣದ್ವೈಪಾಯನರು ಮಾತ್ರ ಜನಗಳು ತಮ್ಮನ್ನು ಹೆಚ್ಚು ಮನ್ನಿಸಲೆಂದು ಶ್ರೀಗಳಿದ್ದಲ್ಲಿಗೆ ಬಂದು ಪ್ರಸನ್ನವಿಠ್ಠಲ, ವಂಶರಾಮ ಮುಂತಾದ ಬೇರೆ ಪ್ರತಿಮೆಗಳನ್ನು ಕೊಂಡೊಯ್ದು ದ್ವೈತತತ್ವಗಳನ್ನು ಬೀರುತ್ತ ಸಾಗಿದರು.

ಶ್ರೀಗಳು ಕಡಪೆಗೆ ಬಂದಾಗ ಅಲ್ಲಿಯ ರಾಜಸಚಿವನಾದ **ರಾಮಚಂದ್ರ** ಪಂಡಿತನು ಸತ್ರ್ಯಯಾಗವನ್ನು ನಡೆಸಿದ್ದನು. ಅದಕ್ಕಾಗಿ ಅನೇಕ ಮಹಾಸ್ವಾಮಿಗಳನ್ನು ಅವನು ಬರಮಾಡಿಕೊಂಡಿದ್ದನು. ಆಗ ಶ್ರೀಗಳು ರಚಿಸಿದ ಸುಧಾ ಟಿಪ್ಪಣಿಯ ಅನುವಾದವು ಅವರ ಶಿಷ್ಯರ ಬಾಯಿಯಿಂದ ಆದದ್ದನ್ನು ಕೇಳಿ ಸಭೆಯವರು ತಲೆದೂಗಿದರು. ಶ್ರೀಗಳ ಮೇಲೆ ಪುಷ್ಪವೃಷ್ಟಿಯೂ ಆಯಿತು. ಆ ಕಾಲದಲ್ಲಿಯೇ ಜಿತೇಂದ್ರಿಯತ್ವದ ಮಾತು ಹೊರಟು ಎಲ್ಲ ಶ್ರೀಗಳ ಒಪ್ಪಿಗೆಯಿಂದ ಸಚಿವನು ಪರಿಕ್ಷಾರ್ಥವಾಗಿ ಎಲ್ಲ ಸ್ವಾಮಿಗಳನ್ನು ಸುತ್ತಲೂ ಕುಳ್ಳಿರಿಸಿ ಅವರ ನಡುವೆ ಒಂದು ಅಗ್ನಿಕುಂಡವನ್ನು ರಚಿಸಿದನು. ಎಲ್ಲ ಸ್ವಾಮಿಗಳ ಕೌಪೀನಗಳು ಆ ಕುಂಡದಲ್ಲಿ ಚಲ್ಲಲ್ಪಟ್ಟವು. ಆಗ ಶ್ರೀವೇದವ್ಯಾಸತೀರ್ಥರ ಕೌಪೀನವು ಮಾತ್ರ ಮೂರು ದಿನವಾದರೂ ದಗ್ಧವಾಗದೆ ಹಾಗೇ ಕುಂಡದಲ್ಲಿ ಉಳಿದಿತ್ತು. ಆದ್ದರಿಂದ ಸಚಿವನೂ ಸಭಿಕರೂ ಈ ತೀರ್ಥರೇ ಹೆಚ್ಚಿನವರೆಂದು ನಿಶ್ಚೈಸಿದರು. ಆ ಪ್ರಕಾರಕ್ಕೆ ಭಟ್ಟಂಗಿಗ

ಳಿಂದ ಸಭೆಯಲ್ಲಿ ಸಾರಿಸಲಾಯಿತು. ಯಾಗಪೂರ್ತಿಯಾಗಲು ರಾಜ ನಿಂದ ಶ್ರೀವೇದವ್ಯಾಸತೀರ್ಥರಿಗೇ ಅಗ್ರಪೂಜೆಯು ದೊರೆಯಿತು.

ಇಂತು ಮನ್ನಿಸಲ್ಪಟ್ಟು ಶ್ರೀಗಳು ಮುಂದೆ ಸಾಗಿದರು. ಮುಂದೆಯೂ ಸಂಚಾರದಲ್ಲಿ ಅವರಿಗೆ ರಡ್ಡೀಹಳ್ಳಿ, ದೊಡ್ಡಘಟ್ಟ ಮುಂತಾದ ಗ್ರಾಮಗಳು ಉಂಬಳಿಯಾಗಿ ದೊರಕಿದವು. ಹೀಗೆ ನಡೆ ದಿರಲು ಒಮ್ಮೆ ಶ್ರೀರಘೂತ್ತಮತೀರ್ಥರು ಶ್ರೀಗಳ ಕನಸಿನಲ್ಲಿ ಕಾಣಿಸಿ ಕೊಂಡು ನಾಳೆಗೆ ಸಂಸ್ಥಾನದ ಕಡೆಗೆ ಬರುವ **ಪಾಂಡುರಂಗೀ ಆನಂದಭಟ್ಟರ** ಮಕ್ಕಳಿಗೆ ಸಂಸ್ಥಾನದ ಪಟ್ಟವನ್ನು ಕೊಡಿರೆಂದು ಹೇಳಿದರು. ಮರುದಿನವೇ **ಪಾಂಡುರಂಗೀ ನರಸಿಂಹಾ ಚಾರ್ಯರು** ಶ್ರೀಗಳ ಬಳಿಗೆ ಬಂದರು. ಗುರುಗಳ ಅಪ್ಪಣೆಯಂತೆ ಶ್ರೀಗಳು ಆಚಾರ್ಯರಿಗೆ ಸನ್ಯಾಸವನ್ನು ಕೊಟ್ಟು **ವಿದ್ಯಾಧೀಶ**ರೆಂದವ ರಿಗೆ ಹೆಸರನ್ನಿಟ್ಟರು. ಆ ಮೇಲೆ ಅವರಿಗೆ ಸಂಸ್ಥಾನದ ಪಟ್ಟದಲ್ಲಿ ಅಭಿಷೇಕವನ್ನು ಮಾಡಿ ಕೆಲವು ದಿನಗಳ ವರೆಗೆ ಅವರಿಂದ ಮೂಲ ರಾಮದೇವರ ಪೂಜೆಯನ್ನು ಮಾಡಿಸಿದರು. ಮುಂದೆ ಅವರಿಗೊಂದು ರಾಮದೇವರ ಮೂರ್ತಿಯನ್ನು ಪೂಜೆಗಾಗಿ ಕೊಟ್ಟು ಅವರನ್ನು ಸಂಚಾರಕ್ಕೆ ಕಳುಹಿದರು.

ಇತ್ತ ಒಮ್ಮೆ **ವೆಂಕಟಪತಿರಾಜ**ನೆಂಬವನು ಪಂಡಿತರ ಮಹಾ ಸಭೆಯನ್ನು ಕೂಡಿಸಿದನು. ಅಲ್ಲಿಗೆ ಶ್ರೀಗಳು ದಯಮಾಡಿಸಿದರು. ಆ ಕಾಲಕ್ಕೆ **ಶ್ರೀಸುಧೀಂದ್ರತೀರ್ಥ**ರು ತಮ್ಮ ಶಿಷ್ಯನಿಂದ ಕೆಳಗಿನ ಶ್ಲೋಕವನ್ನು ಸಭೆಯಲ್ಲಿ ಅನ್ನಿಸಿದರು.

ಅನ್ಯೈರಪಹೃತಾಂ ಮೂಲಮೂರ್ತಿಂ ಶ್ರೀರಘುನಂದನಮ್ ।
ಆಜಹಾರ ಪುನರ್ಮೌಲ್ಯಾತ್ ಶ್ರೀಸುಧೀಂದ್ರಗುರೋರ್ಗುರುಃ ॥

ಇದನ್ನು ಕೇಳಿ ಶ್ರೀವೇದವ್ಯಾಸತೀರ್ಥರು ಈ ವಿಷಯವು ನಿಜ ವಲ್ಲವೆಂದು ಸಭೆಯಲ್ಲಿ ವಾದಿಸಿದರು. ಆಗ ಶ್ರೀಮೂಲರಾಮದೇವರ ಲಕ್ಷಣಗಳ ಪ್ರಶ್ನೆಯು ಹೊರಟಿತು. ಚತುಃಶಾಸ್ತ್ರಗಳಲ್ಲಿಯೂ ೬೪ ವಿದ್ಯೆ ಗಳಲ್ಲಿಯೂ ಪಾರಂಗತರಾದ **ಶ್ರೀವಾದಿರಾಜರೇ** ಇದರ ನಿರ್ಣಯ ವನ್ನು ಹೇಳಬಲ್ಲರೆಂದು ಎಲ್ಲರೊಳಗೆ ಮಾತಾಯಿತು. ರಾಜನೂ

ಶ್ರೀವೇದವ್ಯಾಸರೂ ಶ್ರೀಸುಧೀಂದ್ರರೂ ಮೂವರೂ ಮೂರು ಪತ್ರಗಳನ್ನು ಶ್ರೀವಾದಿರಾಜರಿಗೆ ಬರೆದು ಕಳುಹಿದರು. ಆ ಮೂವರಿಗೂ ಶ್ರೀರಾಜರಿಂದ ಪ್ರತಿ ಉತ್ತರವು ಬರೆದು ಬಂದಿತು.

**ರಾಜನಿಗೆ:–** ಉತ್ತರಾದಿ ಮಠದಲ್ಲಿದ್ದ ಶ್ರೀರಾಮದೇವರ ಲಕ್ಷಣಗಳನ್ನು ಬರೆದು ಕಳುಹಿದ್ದೇನೆ. ಅದರಂತೆಯೇ ಶ್ರೀಮೂಲರಾಮರ ಲಕ್ಷಣಗಳಿವೆ.

**ಶ್ರೀವೇದವ್ಯಾಸರಿಗೆ:–** ಮಾಣಿಕ್ಯ ಖಂಡದಲ್ಲಿರುವದು ಮಾಣಿಕ್ಯವಲ್ಲದೆ ಮತ್ತೇನು?

**ಶ್ರೀಸುಧೀಂದ್ರರಿಗೆ:–** ಶ್ರೀ**ವೇದವ್ಯಾ**ಸರ ದ್ರೋಹವನ್ನು ನೀವು ಮಾಡಬಾರದು. ಇದರಿಂದ ನಿಮ್ಮ ಮಹಾತ್ಮೆಯು ಹೆಚ್ಚದು. ಮುಂದೆ ಇಂತಹ ಅಪರಾಧವನ್ನು ಮಾಡಬೇಡಿರಿ.

ಈ ಮೂರು ಪತ್ರಗಳನ್ನು ರಾಜನು ಸಭೆಯಲ್ಲಿ ಓದಿಸಿದನು. ಶ್ರೀಸುಧೀಂದ್ರರು ಇದಕ್ಕೆ ಸಿಟ್ಟಾಗಿ ಸಭೆ ಬಿಟ್ಟು ಹೊರಗೆ ಹೋಗಿಬಿಟ್ಟರು. ಆ ಮೇಲೆ ಶ್ರೀಮೂಲರಾಮದೇವರು ಉತ್ತರಾದಿ ಮಠದಲ್ಲಿ ಸಾಕ್ಷಾತ್ತಾಗಿಯೂ ಉಳಿದವುಗಳಲ್ಲಿ ಅಂಶದಿಂದಲೂ ಇರುತ್ತಾರೆ; ಆದ್ದರಿಂದ ಮಠಗಳಲ್ಲಿ ಭೇದವನ್ನು ಯಾರೂ ಎಣಿಸಬಾರದೆಂದು ರಾಜನು ನಿರ್ಣಯವನ್ನು ಮಾಡಿಸಿದನು. ಶ್ರೀವೇದವ್ಯಾಸತೀರ್ಥರ ಸೇವೆಯನ್ನು ಬಹಳವಾಗಿ ಮಾಡಿ ರಾಜನು ಅವರ ಅನುಗ್ರಹವನ್ನು ಸಂಪಾದಿಸಿದನು.

ಮುಂದೆ ಶ್ರೀಗಳು **ಮಾರ್ಕಾಂಡೆಯ ನದಿಯ** ತೀರದ ಮೇಲಿರುವ **ಪೆನಗುಂಡಿ**ಗೆ ದಯಮಾಡಿಸಿರಲು ಅವರಿಗೆ ತುಸು ಮೈಯಲ್ಲಿ ದಣುವಾಯಿತು. ಆಗಲೇ ಅವರು ಕೃಷ್ಣದ್ವೈಪಾಯನ ಮತ್ತು ವಿದ್ಯಾಧೀಶರನ್ನು ಬರಮಾಡಿಕೊಂಡು ವಿದ್ಯಾಧೀಶರಿಗೆ ಸಂಸ್ಥಾನವನ್ನು ಒಪ್ಪಿಸಿ ಕೃಷ್ಣದ್ವೈಪಾಯನರಿಗೆ ಅಭಿಮಾನಪೂರ್ವಕವಾಗಿ ಸಂಸ್ಥಾನ

ವನ್ನು ಸಾಗಿಸಿರೆಂದು ಹೇಳಿ ಶ್ರೀಗಳು ಸಿದ್ಧಾರ್ಥಿ ಸಂವತ್ಸರದ ಚೈತ್ರ ಶುದ್ಧ ೩ ದಿನ ನಾರಾಯಣಧ್ಯಾನಪರರಾದರು. ಇವರು **ಕುಬೇರಾಂಶ** ರೆಂದು ಹೇಳಿಕೆಯಿದೆ.

## ೧೬ ಶ್ರೀವಿದ್ಯಾಧೀಶರು



**ಪಟ್ಟ:- ೩-೧-೧೫೪೧ನೇ ಸಿದ್ಧಾರ್ಥಿಯಿಂದ ೨೯-೧೦-೧೫೫೩ನೇ ಪ್ರಜಾಪತಿಯುವರೆಗೆ**

ಇವರ ಪೂರ್ವಾಶ್ರಮದ ಹೆಸರು **ಪಾಂಡುರಂಗೀ ನರಸಿಂಹಾಚಾರ್ಯರು**. ಇವರು ಸಂಸ್ಥಾನಕ್ಕೆ ಬಂದೊಡನೆಯೇ ಮಾಡಿದ ಕೆಲಸವೇದರೆ ತಮ್ಮ ಗುರುಗಳಿಗಾಗಿ ಕಟ್ಟಿಸಿದ ವೃಂದಾವನವು. ಈ ವೃಂದಾವನವು ಪೆನಗುಂಡಿಯಲ್ಲಿದೆ. ಇದಕ್ಕೆ ೧೨ ದಳಗಳಿವೆ. ಅವುಗಳಲ್ಲಿ ದಶಾವತಾರಮೂರ್ತಿ, ಹಂಸ, ಮುಕುಂದ, ಈ ಹನ್ನೆರಡು ಪ್ರತಿಮೆಗಳನ್ನು ಕೆತ್ತಿಸಿದ್ದಾರೆ. ದಳಗಳ ಕೆಳಭಾಗದಲ್ಲಿಯೂ ರಾಮ, ಕೃಷ್ಣ, ಸರ್ವಜ್ಞರು ಮುಂತಾದವರ ಮೂರ್ತಿಗಳು ಮನೋಹರವಾಗಿ ಕೆತ್ತಲ್ಪಟ್ಟಿವೆ. ಆ ವೃಂದಾವನಕ್ಕೆ ಅವರು ಒಂದೇ ವರ್ಷದಲ್ಲಿ ಒಂದು ಶಿಲಾಮಂಟಪವನ್ನು ಕಟ್ಟಿಸಿದರು. ಇದರಿಂದಂತೂ ಅದಕ್ಕೆ ಬಹು ಶೋಭೆಯುಂಟಾಗಿದೆ. ಮಂಟಪವು ಮುಗಿದ ಮೇಲೆ ಗುರುಗಳ ಆರಾಧನೆಯನ್ನು ಶ್ರೀಗಳು ಬಹು ವಿಜೃಂಭಣೆಯಿಂದ ಜರುಗಿಸಿದರು.

ಮುಂದೆ ಶ್ರೀಗಳು ಉತ್ತರದಲ್ಲಿ ಸಂಚರಿಸುತ್ತ ಅನೇಕ ಅದ್ವೈತಿಗಳಿಗೆ ಮುದ್ರಾಧಾರಣೆಯನ್ನು ಕೊಡುತ್ತಾ ರಾಜಮಹೇಂದ್ರಿಯ ಮೇಲಿಂದ ಪಯಣಗತಿಯಾಗಿ ಪಂಢರಪುರಕ್ಕೆ ಬಂದರು. ಅಲ್ಲಿ ಅನೇಕ ದಿನಗಳ ವರೆಗೆ ಶ್ರೀಗಳು ಪಾಠಪ್ರವಚನಗಳನ್ನು ಹೇಳುತ್ತಾ ವಾಸವಾಗಿದ್ದರು. ಆದ್ಯ ಮುಂತಾದ ಮನೆತನದ ಆಚಾರ್ಯರಿಗೆ ಇಲ್ಲಿಯೇ ಶಾಸ್ತ್ರಪಾಠವಾಯಿತು. ಮಹಾಸಮಾರಾಧನೆಯಲ್ಲಂತೂ ಬಹು ಜನಗಳಿಗೆ ಅನ್ನಸಂತರ್ಪಣೆಯಾಯಿತು. ಬಹು ಜನ ಬ್ರಾಹ್ಮಣರು ಶ್ರೀಗಳವರು ಕೊಟ್ಟ ಭೋಜನದಕ್ಷಿಣೆಗಳಿಂದ ತೃಪ್ತಿ ಹೊಂದಿದರು.

ಅಲ್ಲಿಂದ ಮುಂದೆ ಶ್ರೀಗಳ ಪಯಣವು ಮಳಖೇಡಕ್ಕೆ ಆಯಿತು. ಶ್ರೀಟೀಕಾಕೃತ್ಪಾದರ ಸನ್ನಿಧಿಯಲ್ಲಿ ಶ್ರೀಗಳೇ ಸುಧಾಪಾಠವನ್ನು ಹೇಳಿ ಮುಗಿಸಿ ಮಂಗಲವನ್ನು ಮಹೋತ್ಸವದಿಂದ ಮಾಡಿದರು.

ಇಷ್ಟರಲ್ಲಿಯೇ ಶ್ರೀಗಳ ಗುರುಗಳ ಪೂರ್ವಾಶ್ರಮದ ಅಣ್ಣಂದಿರ ಮಕ್ಕಳಾದ **ವ್ಯಾಸಪ್ಪಾಚಾರ್ಯ**ರ ದ್ವಾರವಾಗಿ ಮಹಿಸೂರ ಮಹಾರಾಜರಿಂದ ಶ್ರೀಗಳಿಗೆ ಕರೆವು ಬಂದಿತು. ಆಗಿನ ಮಹಿಸೂರ ಮಹಾರಾಜನಾದ **ನರಸರಾಜ**ನಿಗೆ ಬ್ರಹ್ಮಹತ್ಯಾದೋಷವು ತಟ್ಟಿ, ಅವನಿಗೆ ಉಣ್ಣುವ ಅನ್ನವೆಲ್ಲ ಹುಳದಂತೆ ಕಾಣಿಸುತ್ತಿದ್ದಿತು. ಶ್ರೀಗಳು ಶ್ರೀಮೂಲರಾಮರ ಪೂಜಾತೀರ್ಥಪ್ರಸಾದಗಳನ್ನು ಬಹು ದಿನಗಳ ವರೆಗೆ ಆ ರಾಜನಲ್ಲಿಯೇ ಮಾಡುತ್ತಿದ್ದು ಆತನ ಮೇಲೆ ಅನುಗ್ರಹಿಸಿ ದುದರಿಂದ ಅವನ ಬ್ರಹ್ಮಹತ್ಯಾದೋಷವೇ ಪರಿಹಾರವಾಯಿತು. ಮಹಾರಾಜನು ಇದರಿಂದ ಬಹು ಸಂತುಷ್ಟನಾಗಿ ಶ್ರೀರಂಗಪಟ್ಟಣದ ಲ್ಲಿಯೇ ಪೂಜಾದಿಗಳನ್ನು ಮಾಡುತ್ತ ಇರಲು ಶ್ರೀಗಳಿಗೆ ಅಗ್ರಹ ವನ್ನು ಮಾಡಿದನು. ಅದಕ್ಕೆಂದೇ ಸಂಸ್ಥಾನದ ಪೂಜೆಗಾಗಿ ಶ್ರೀಗಳು ಕಾಲಿನಿಂದ ಅಡ್ಡಾಡಿದಷ್ಟು ಸೀಮೆಯನ್ನು ಉಂಬಳಿಯಾಗಿಕೊಟ್ಟನು. ಶ್ರೀಗಳು ಒಂದು ದಿನ ಪಾದುಕೆಗಳನ್ನು ಹಾಕಿಕೊಂಡು ದಂಡಕಾಷ್ಟ ವನ್ನು ಹಿಡಿದುಕೊಂಡು ೩ ಪ್ರಹರದೊಳಗಾಗಿ **೧ ಚಿಣ್ಯ ೨ ವೃತಿ ೩ ಸಣ್ಣ ಚಿಕ್ಕೂರು** ಈ ಮೂರು ಗ್ರಾಮಗಳನ್ನು ಸುತ್ತಿಕೊಂಡು ಬಂದರು. ಇವೇ ಮಹಾರಾಜನಿಂದ ಸಿಕ್ಕ ಉಂಬಳಿಯ ಗ್ರಾಮ ಗಳು. ಇವರು ಪಾದುಕೆಗಳನ್ನು ಹಾಕಿಕೊಂಡು ತಿರುಗಾಡುವಾಗ ಶ್ರೀಗಳಿಗೆ ಒಮ್ಮೆ ಸ್ವಲ್ಪ ಶಕೆಯು ತಗಲಿತು. ಅದನ್ನು ಆಗ ಗುರುತು ಮಾಡಿಟ್ಟು ಹಿಂದಿನಿಂದ ಶ್ರೀಗಳು ಆ ಸ್ಥಳವನ್ನು ಅಗಿಸಿ ನೋಡಲು ಬುಡದಲ್ಲಿ ೧ ಮೊಳ ಎತ್ತರವಾದ ಒಂದು ಶಿಲೆಯ ಪ್ರಾಣದೇವರು ಅವರಿಗೆ ಸಿಕ್ಕರು. ಆ ಪ್ರತಿಮೆಗೆ ಚರಪ್ರತಿಷ್ಠಾ, ಪಂಚಾಮೃತಾದಿ ಅಭಿಷೇಕ ಮುಂತಾದವನ್ನು ಮಾಡಿಸಿ ಶ್ರೀರಂಗಪಟ್ಟಣದ ಸಮೀಪ ದಲ್ಲಿ ಕಾವೇರೀ ತೀರದ ಮೇಲಿನ ಚಂದಗುರುಗ್ರಾಮಕ್ಕೆ ಆ ಪ್ರತಿಮೆ ಯನ್ನು ಶ್ರೀಗಳು ತಂದರು. ಅಲ್ಲಿ ಆ ಪ್ರತಿಮೆ ಯನ್ನೂ ಶ್ರೀಕರಾರ್ಚಿತ ರಾಮಾದಿ ಮೂರ್ತಿಗಳನ್ನೂ ಸ್ಥಾಪಿಸಿ ಅವುಗಳ ಪೂಜೆಯು

ಶಾಶ್ವತವಾಗಿ ಸಾಗುವದಕ್ಕಾಗಿ ೧೭ ಜನ ಬ್ರಾಹ್ಮಣರನ್ನು ಶ್ರೀಗಳು ನಿಯಮಿಸಿದರು. ಆ ಬ್ರಾಹ್ಮಣರ ಉಪಜೀವನಕ್ಕಾಗಿ ಮಹಾರಾಜರು ಕೊಟ್ಟ ನಾಗಮಂಗಳ ತಾಲೂಕಿನ ಚಿಣ್ಯಗ್ರಾಮದ ಅರ್ಧಭಾಗವನ್ನು ದಾನಮಾಡಿ ಅವರಿಗೆ ವೃತ್ತಿಗಳನ್ನು ನಿಯಮಿಸಿಕೊಟ್ಟರು.

ಅರಸನ ಇಚ್ಛೆಯಂತೆ ಶ್ರೀಗಳು ಆಮೇಲೆ ಕಾವೇರೀ ತೀರದಲ್ಲಿದ್ದುಕೊಂಡರು. ಅಲ್ಲಿ ಅವರು ೧ **ವಿಷ್ಣುತತ್ವನಿರ್ಣಯಕ್ಕೆ ಟಿಪ್ಪಣಿ ೨ ಏಕಾದಶೀ ನಿರ್ಣಯ ೩ ವಿಷ್ಣು ಪಂಚಕದ ಉಪವಾಸ ನಿರ್ಣಯ** ಎಂಬೀ ಗ್ರಂಥಗಳನ್ನು ರಚಿಸಿದರು. ಆ ಕಾಲದಲ್ಲಿಯೇ ಅವರು ತಮ್ಮ ಗುರುವಂಶಜರಾದ ವ್ಯಾಸಪ್ಪಾಚಾರ್ಯರಿಗೆ ಕಟ್ಟಿಯ ಪುರಾಣ ಹೇಳುವದಕ್ಕಾಗಿ ಮಠದ ಮರ್ಯಾದೆಯಿಂದ ಸಹಿತವಾದ ದಾನಪತ್ರವನ್ನು ಅನುಗ್ರಹಿಸಿದರು. ಬಳಿಕ ಶ್ರೀಗಳು ಕಾಶೀಯಾತ್ರೆಗೆಂದು ಪಯಣಮಾಡಿದರು.

ಇವರು ಮುಂದೆ ಸಂಚಾರಕ್ರಮೇಣ ಆದವಾನಿಗೆ ಬಂದರು. ಅಲ್ಲಿ ಅವರಿಗೆ **ಶ್ರೀರಾಘವೇಂದ್ರತೀರ್ಥ** ಶ್ರೀಪಾದಂಗಳವರ ಭೆಟ್ಟಿಯಾಯಿತು. ಶ್ರೀರಾಘವೇಂದ್ರತೀರ್ಥರು ರಚಿಸಿದ **ಸುಧಾಪರಿಮಳ**ವನ್ನು ಓದಿಸಿ ಕೇಳಿ, ಶ್ರೀಗಳು ಪರಮಾನಂದಭರಿತರಾದರು. ಗುಣವನ್ನು ಕಂಡು ಮತ್ಸರಮಾಡದಿರುವದು ಮಹಾತ್ಮರ ಲಕ್ಷಣವೇ ಆಗಿರುತ್ತದೆ. ಶ್ರೀವಿದ್ಯಾಧೀಶರು ಶ್ರೀರಾಘವೇಂದ್ರತೀರ್ಥರ ಧನ್ಯವಾದವನ್ನು ಮಾಡಿದರು. ಶ್ರೀರಾಘವೇಂದ್ರತೀರ್ಥರೂ ಶ್ರೀವಿದ್ಯಾಧೀಶರನ್ನು ಬಹಳವಾಗಿ ಮನ್ನಿಸಿದರು. ಆ ಬಳಿಕ ಶ್ರೀಗಳು ಮುಂದೆ ಪ್ರಯಾಣವನ್ನು ಬೆಳಿಸಿದರು. ಶ್ರೀರಘುವರ್ಯತೀರ್ಥರ ಕಾಲದಲ್ಲಿ ಸಂಪಾದನೆಯಾಗಿ ತಿರುಗಿ ಜಪ್ತಿಯಾಗಿ ಹೋಗಿದ್ದ ಪಂಢರಪುರದ ಸೀಮೆಯ **ದೋಣಜಾ, ಶಿರಡೋಣಜಾ** ಎಂಬೆರಡು ಗ್ರಾಮಗಳಿದ್ದವು. ಇವುಗಳನ್ನು ಶ್ರೀಗಳು ಮತ್ತೆ ಸಾತಾರೆಯ ಛತ್ರಪತಿ ಮಹಾರಾಜರಿಂದ ದೊರಕಿಸಿದರು. ಮುಂದೆ ಅವರು ಪ್ರಯಾಗಕ್ಕೆ ಹೋದರು. ಅಲ್ಲಿ **ಕೊರಟಗಿ ಪ್ರದ್ಯುಮ್ನಾಚಾರ್ಯ**ರೆಂಬ ಮಹಾಪಂಡಿತರು ವಿರಕ್ತಿಯನ್ನು ಹೊಂದಿ ಅಷ್ಟಾಕ್ಷರ ಮಂತ್ರವನ್ನು ಒಂದ್ರ

ಕೋಟಿ ಸಲ ಜಪಿಸಿ ಆಹಾರವನ್ನು ತೊರೆದು ಉಗ್ರವಾದ ತಪಶ್ಚ ರ್ಯೆಯನ್ನು ಮಾಡುತ್ತಿದ್ದರು. ಇವರ ತಪಶ್ಚರ್ಯೆಗೆ ಶ್ರೀಗಳು ಬಹು ಸಂತುಷ್ಟರಾದರು. ಅವರನ್ನು ಆಗಲೇ ಸಂಸ್ಥಾನದ ಸಂಗಡ ಕರೆದುಕೊಂಡು ಮಹಾಯಾತ್ರೆಗೆ ಹೊರಟರು. ಶ್ರೀಗಳು ಗಯೆಗೆ ಬಂದಾಗ ಅಲ್ಲಿಯ ಗಯಾವಾಡರು ಮದಾಂಧರಾಗಿ ಮಠದ ಸಂಗಡ ಬಂದ ಜನರಿಗೆ, ಬಹಳ ಹಣವನ್ನು ಹರಿದುಕೊಳ್ಳದೆ ಪಿಂಡಪ್ರದಾನ ವನ್ನು ಮಾಡಗೊಡಲಿಲ್ಲ. ಆಗ ಶ್ರೀಪಾದರು ತಮ್ಮಲ್ಲಿಯ ದಿಗ್ವಿ ಜಯ ರಾಮದೇವರ ಸನ್ನಿಧಿಯಲ್ಲಿಯೇ " ಅದು ರಾಮಗಯಾ ಎಂಬ ಭಾವನೆಯಿಂದ ಪಿಂಡಪ್ರದಾನವನ್ನು ಮಾಡಿರಿ. ಪರಮಾತ್ಮನು ಪ್ರೀತನಾಗುವನು; '' ಎಂತೆಂದು ತಮ್ಮ ಎಲ್ಲ ಜನರಿಗೆ ಹೇಳಿಬಿಟ್ಟರು. ಆಗ ವಿಷ್ಣುಪಾದದ ಕಡೆಗೆ ಯಾರೂ ಹೋಗದಾದರು. ಈ ಕ್ರಮವು ಫಲ್ಗು ನದಿಯ ತೀರದಲ್ಲಿ ಮೂರು ದಿನಗಳ ವರೆಗೆ ಸಾಗಿತು. ಆಗ ಗಯಾವಾಡರ ಸೊಕ್ಕಿಳಿದು ಅವರು ಶ್ರೀಗಳಿಗೆ ಶರಣುಬಂದರು. ಆ ಮೇಲೆ ಶ್ರೀಗಳು ಮತ್ತೆ ತಮ್ಮ ಶಿಷ್ಯರಿಗೆ ವಿಷ್ಣುಪಾದದಲ್ಲಿಯೇ ಪಿಂಡಪ್ರದಾನವನ್ನು ಮಾಡಲು ಅಪ್ಪಣೆಯನ್ನು ಮಾಡಿದರು. ಮುಂದೊಮ್ಮೆ ಶ್ರೀಗಳ ಕೈಯಲ್ಲಿಯ ತೀರ್ಥವು ಆಕಸ್ಮಿಕವಾಗಿ ಒಂದು ಮೋಟಮರದ ಮೇಲೆ ಬಿದ್ದು ಅದು ಚಿಗಿತ ದೃಶ್ಯವನ್ನು ಗಯಾ ವಾಡರು ತಮ್ಮ ಕಣ್ಮುಟ್ಟ ನೋಡಿ ಶ್ರೀಗಳ ಮಹಿಮೆಗೆ ಬೆರಗಾಗಿ ಅವರ ಶಿಷ್ಯತ್ವವನ್ನೇ ಅವರು ವಹಿಸಿ ಬಿಟ್ಟರು. ಅಂದಿನಿಂದಲೂ ಅವರು ಉತ್ತರಾದಿ ಮಠದ ಶಿಷ್ಯರಾಗಿಯೇ ಇರುತ್ತಾರೆ. ಮಠವು ಅಲ್ಲಿಗೆ ದಯಮಾಡಿಸಿದರೆ ಅವರು ಅದನ್ನು ಬಹುವಾಗಿ ಮನ್ನಿಸು ತ್ತಾರೆ. ಹಣವನ್ನಂತೂ ಮಠಕ್ಕೆ ಹೇರಳವಾಗಿ ಒಪ್ಪಿಸುತ್ತಾರೆ.

ಶ್ರೀಗಳು ಪ್ರದ್ಯುಮ್ನಾಚಾರ್ಯರಿಂದ ಕೂಡಿಕೊಂಡು ಕಾಶಿಯ ಯಾತ್ರೆಯನ್ನು ಮುಗಿಸಿ ಅಲ್ಲಿಂದ ಬ್ರಹ್ಮಾವರ್ತ ಕ್ಷೇತ್ರಕ್ಕೆ ಬಂದು ಮುಟ್ಟಿದರು. ಅಲ್ಲಿ ಅವರು ಬಹು ಜನರಿಗೆ ಮುದ್ರಾಮಂತ್ರಾಕ್ಷತೆ ಗಳನ್ನು ಕೊಟ್ಟು ಅವರನ್ನು ಅನುಗ್ರಹಿಸಿದರು ಆ ಬಳಿಕ ಒಮ್ಮೆ ಅವರು ಗಂಗಾತೀರದ ಮೇಲಿನ ವಾಲ್ಮೀಕಾಶ್ರಮದ ಚಪ್ಪರದಲ್ಲಿ ಮಲ

ಗಿರುತ್ತಿರಲು ಅವರಿಗೆ ಒಂದು ಕನಸು ಬಿದ್ದಿತು. ‘ ಪ್ರದ್ಯುಮ್ನಾಚಾರ್ಯರಿಗೆ ಸಂಸ್ಥಾನಕ್ಕೆ ಪಟ್ಟಗಟ್ಟಿ ಗಂಗೋದಕದ ಕೊಡಗಳೊಂದಿಗೆ ನಾಳೆಗೇ ಅವರನ್ನು ರಾಮೇಶ್ವರಕ್ಕೆ ಕಳಿಸಿರಿ. ಅಲ್ಲಿ ಅವರಿಂದ ಬ್ರಾಹ್ಮಣರ ವಿಷಯವಾಗಿ ಇನ್ನೂ ಅನೇಕ ಕಾರ್ಯಗಳು ಪೂರೈಸಬೇಕಾಗಿದೆ. ’ ಎಂದು ಶ್ರೀಗಳಿಗೆ ದೇವರ ಆಜ್ಞೆಯಾದಂತಾಯಿತು. ಬೆಳಗಾಗುತ್ತಲೇ ಶ್ರೀಗಳು ಆಚಾರ್ಯರಿಗೆ ಸನ್ಯಾಸವನ್ನು ಕೊಟ್ಟು ವೇದನಿಧಿಗಳೆಂದವರನ್ನು ಕರೆದರು. ಈ ಹೊಸ ಶ್ರೀಗಳಾದರೋ ತಡ ಮಾಡದೆ ದೇವರ ಆಜ್ಞೆಯಂತೆ ರಾಮೇಶ್ವರಕ್ಕೆ ಬಂಧರು. ಅಲ್ಲಿ ಧನುಷ್ಕೋಟಿಯಲ್ಲಿ ಸ್ನಾನಮಾಡಿ ಅವರು ಈಶ್ವರನಿಗೆ ಗಂಗೋದಕದಿಂದ ಅಭಿಷೇಕವನ್ನು ಮಾಡಿದರು. ಆ ಮೇಲೆ ಅಲ್ಲಿಯ ಬ್ರಾಹ್ಮಣರಿಗೆ ಅಗ್ರಹಾರಕ್ಕೆ ಬೇಕಾಗಿರುವ ಚೆನ್ನಾದ ಸೌಕರ್ಯಗಳನ್ನೂ ಅವರು ಒದಗಿಸಿಕೊಟ್ಟರು.

ಇತ್ತ ಶ್ರೀವಿದ್ಯಾಧೀಶರು ಹಿಂದಿನಂತೆ ವೇದನಿಧಿಗಳಿಗೆ ಸಂಸ್ಥಾನವನ್ನೊಪ್ಪಿಸಿ ಮೂರು ವರ್ಷಗಳೊಳಗಾಗಿ ಅವರಿಗೆ ಪಂಢರಪುರಕ್ಕೆ ಬರಹೇಳಿ ತಾವು ದಿಗ್ವಿಜಯ ರಾಮಪ್ರತಿಮೆಯನ್ನು ತೆಗೆದುಕೊಂಡು ಬದರಿಗೆ ತೆರಳಿದರು. ಅವರೊಡನೆ ಮಠದ ಕೆಲವು ಜನ ಶಿಷ್ಯರೂ ಪ್ರದ್ಯುಮ್ನಾಚಾರ್ಯರ ಅಣ್ಣಂದಿರ ಮಕ್ಕಳಾದ ರಂಗಾಚಾರ್ಯರೂ ಇದ್ದರು. ಯಾಕಂದರೆ ತಮ್ಮ ಯಾತ್ರೆಯು ಮುಗಿಯುವ ಮೊದಲೇ ತಮಗೆ ನಿರ್ಯಾಣಕಾಲವು ಒದಗಿದರೆ ತಮ್ಮಲ್ಲಿಯ ದಿಗ್ವಿಜಯ ರಾಮಪ್ರತಿಮೆಯನ್ನು ಸಂಸ್ಥಾನಕ್ಕೆ ಒಪ್ಪಿಸಬೇಕೆಂದು ಶ್ರೀಗಳ ಬಯಕೆಯು.

ಶ್ರೀಗಳ ಬದರಿಯ ಯಾತ್ರೆಯು ಮುಗಿಯಿತು. ತಿರುಗಿ ಅವರು ಕಾಶ್ಮೀರದ ಮಾರ್ಗವಾಗಿ ಕೆಳಗೆ ಬರಲು ಹೊರಟರು. ಅದರಂತೆ ಪಯಣಗತಿಯಿಂದ ಏಕಚಕ್ರವೆಂಬದೊಂದು ನಗರಕ್ಕೆ ಅವರು ಬಂದರು. ಇದು ಕಾಶ್ಮೀರದೇಶದಲ್ಲಿದೆ. ಆಗ ಯೋಗಬಲದಿಂದ ಶ್ರೀಗಳು ಸಮೀಪಿಸಿದ ತಮ್ಮ ನಿರ್ಯಾಣವನ್ನು ತಿಳಿದುಕೊಂಡರು. ಆ ಕೂಡಲೇ ಅವರು ರಂಗಾಚಾರ್ಯರನ್ನು ಕರೆದು ಅವರಿಗೆ ವಂಶ

ದಿಗ್ವಿಜಯ ರಾಮದೇವರನ್ನು ಒಪ್ಪಿಸಿದರು. ೨-೩ ದಿವಸಗಳಲ್ಲಿ ತಾವು ನಾರಾಯಣಧ್ಯಾನಪರರಾಗುತ್ತೇವೆಂದು ಅವರಿಗೆ ತಿಳಿಸಿದರು. ರಾಮೇಶ್ವರಕ್ಕೆ ಹೋದ ಶ್ರೀಗಳನ್ನು ಕೂಡಿಕೊಂಡು ಅವರಿಗೆ ದಿಗ್ವಿಜಯ ರಾಮ ಪ್ರತಿಮೆ ಮುಂತಾದವನ್ನು ಒಪ್ಪಿಸಿ ಅವರೊಡನೆ ಆಚಾರ್ಯರಿಗೆ ತೀವ್ರವಾಗಿ ಪಂಢರಪುರಕ್ಕೆ ಹೋಗ ಹೇಳಿದರು. ಶ್ರೀಗಳು ಮುಪ್ಪಿನವರಾದುದರಿಂದ ಅವರಿಗೇ ಸಂಸ್ಥಾನವು ಸಿಗುವದೆಂದು ಆಚಾರ್ಯರನ್ನು ಶ್ರೀಗಳು ಆಶೀರ್ವದಿಸಿದರು. ತಮ್ಮ ನಿರ್ಯಾಣವು ಆದ ಮೇಲೆ ೧೫ ದಿನ ಅಲ್ಲಿಯೇ ಇದ್ದು ವೃಂದಾವನವನ್ನು ಕಟ್ಟಿಸಿ ಸಮಾರಾಧನೆಯನ್ನು ಮುಗಿಸಿಕೊಂಡು ಆ ಮೇಲೆ ಶ್ರೀಗಳೆಡೆಗೆ ಹೊರಡುವದೆಂದು ಶ್ರೀವಿದ್ಯಾಧೀಶರು ರಂಗಾಚಾರ್ಯರಿಗೆ ಹೇಳಿದರು.

೨-೩ ದಿನಗಳಲ್ಲಿ ಅಂದರೆ ೧೫೫೩ನೇ ಪ್ರಜೋತ್ಪತ್ತಿ ಸಂವತ್ಸರದ ಪುಷ್ಯ ಬ. ೧೪ನೇ ದಿವಸ ಶ್ರೀವಿದ್ಯಾಧೀಶರು ಯೋಗಾಸನದಲ್ಲಿ ನಾರಾಯಣನಾಮರತರಾದರು. ಆ ಮೇಲೆ ರಂಗಾಚಾರ್ಯರು ಅಲ್ಲಿಯ ಎಲ್ಲ ಕಾರ್ಯಗಳನ್ನು ಮುಗಿಸಿಕೊಂಡು ದಕ್ಷಿಣಕ್ಕೆ ಹೊರಟು ಬಂದರು. ಇವರು **ಹಾಹಾಗಂಧರ್ವಾಂಶ**ರೆಂದು ಹೇಳಿಕೆಯಿದೆ.

ಶ್ರೀವಿದ್ಯಾಧೀಶರು ಮಾಡಿದ ಬೇರೆ ಗ್ರಂಥಗಳು.

೧ ವಾಕ್ಯಾರ್ಥಚಂದ್ರಿಕಾ ಸುಧಾ ೫ ಅಧಿಕರಣಗಳ ಟಿಪ್ಪಣಿ
೨ ದ್ವಿತ್ತ್ವವಾದಾರ್ಥ
೩ ತಲವಕಾರೋಪನಿಷತ್ ಖಂಡಾರ್ಥ
೪ ಓಂಕಾರ ವಾದಾರ್ಥ
೫ ತಿಥಿತ್ರಯ ನಿರ್ಣಯ

# ೧೭ ಶ್ರೀವೇದನಿಧಿತೀರ್ಥರು.



**ಪಟ್ಟ:- ೨೯-೧೦-೧೫೫೩ನೇ ಪ್ರಜಾಪತಿಯಿಂದ ೧೧-೮-೧೫೫೭ನೇ ಯುವದವರೆಗೆ**

ಇವರ ಪೂರ್ವಾಶ್ರಮದ ಹೆಸರು **ಕೊರಟಗಿ ಪ್ರದ್ಯುಮ್ನಾಚಾರ್ಯ**ರೆಂದೂ ಇವರಿಗೆ ವಾಲ್ಮೀಕಾಶ್ರಮದಲ್ಲಿ ಸಂಸ್ಥಾನಾಭಿಷೇಕವಾಯಿತೆಂದೂ ವಾಚಕರಿಗೆ ಗೊತ್ತಿದೆಯಷ್ಟೇ. ಅಭಿಷೇಕವಾದ ನಂತರ ಗುರುಗಳ ಆಜ್ಞೆಯಂತೆ ಇವರು ಗಂಗೋದಕ ಕಲಶಗಳನ್ನು ತೆಗೆದುಕೊಂಡು ರಾಮೇಶ್ವರಕ್ಕೆ ರಾಮಲಿಂಗನ ಅಭಿಷೇಕಕ್ಕೆಂದು ಬಂದವರು ಅಲ್ಲಿಯ ಕೆಲಸವಾದ ಮೇಲೆ ಮಂಚಾಕೊಪ್ಪವೆಂಬಲ್ಲಿಗೆ ಬಂದರು. ಇಲ್ಲಿಗೆ ಬರುವ ಮೊದಲೇ ದಾರಿಯಲ್ಲಿ ತ್ರಿಚನಾಪಳ್ಳಿಯ ನವಾಬನ ಮೇಲೆ ಇವರ ಪಾಂಡಿತ್ಯ ಮತ್ತು ತಪಸ್ಸಿನ ಪ್ರಭಾವವು ಬಿದ್ದು ಅವನಿಂದ ಇವರಿಗೆ **ಮಂಚಾಕೊಪ್ಪ** ಜಿಲ್ಲೆಯೊಳಗಿನ ಎರಡು ಮೂರು ಹಳ್ಳಿಗಳು ಉಂಬಳಿಯಾಗಿ ಸಿಕ್ಕವು. ಆಗ ಆ ಪ್ರದೇಶದಲ್ಲಿ ಶ್ರೀಗಳು ಬ್ರಾಹ್ಮಣರಿಗೆ ಅಗ್ರಹಾರಾದಿಗಳ ವ್ಯವಸ್ಥೆಯನ್ನು ಚೆನ್ನಾಗಿ ಮಾಡಿಕೊಟ್ಟರು. ಮಂಚಾಕೊಪ್ಪಕ್ಕೆ ಬರುತ್ತಲೇ ಏಕಚಕ್ರನಗರದಲ್ಲಾದ ಇವರ ಗುರುಗಳ ನಿರ್ಯಾಣದ ಸುದ್ದಿಯನ್ನು ತೆಗೆದುಕೊಂಡು ರಂಗಾಚಾರ್ಯರು ವಂಶರಾಮದೇವರ ಮೂರ್ತಿ ಮುಂತಾದವುಗಳೊಡನೆ ಅಲ್ಲಿಗೆ ಬಂದರು. ಆಗ ಶ್ರೀಗಳು ಕುಂಭಘೋಣ, ಶ್ರೀರಂಗ, ಮಧುರೆ ಮೊದಲಾದ ಪಟ್ಟಣಗಳಿಂದ ಹೆಸರಾದ ಸಾತ್ವಿಕ ಬ್ರಾಹ್ಮಣರನ್ನು ಕರೆಕಳುಹಿ ಗುರುಗಳ ಸಮಾರಾಧನೆಯನ್ನು ಬಹು ವಿಜೃಂಭಣೆಯಿಂದ ಮಾಡಿದರು. ಆ ಕಾಲಕ್ಕೆ ಪ್ರತಿಯೊಬ್ಬ ಬ್ರಾಹ್ಮಣರಿಗೆ ಒಂದೊಂದು ಹಿಡಿ ವರಹಗಳನ್ನು ದಕ್ಷಿಣೆಯಾಗಿ ಶ್ರೀಪಾದರು ಕೊಟ್ಟರು.

ಗುರುಗಳ ಸೇವೆಯು ಮುಗಿದ ಮೇಲೆ ಶ್ರೀಗಳು ಮುಂದಕ್ಕೆ ಹೊರಟರು. ಶ್ರೀರಾಯರ ಮಠದ ಶಿಷ್ಯನೊಬ್ಬನಿಗೆ ಮ್ಲೇಂಛರ ಸಂಸರ್ಗವಾಗಿದ್ದುದರಿಂದ ಪ್ರಾಯಶ್ಚಿತ್ತವನ್ನು ತೆಗೆದುಕೊಳ್ಳಲೆಂದು ಅವನು ತವಕಪಡುತ್ತಿರುವಾಗ ಅವನಿಗೆ ಕುಂಭಘೋಣೆಯ ಮಾರ್ಗದಲ್ಲಿ

ಶ್ರೀಮುಷ್ಣದಲ್ಲಿ ಖಂಬಾಳಿ **ರಾಮಚಂದ್ರತೀರ್ಥ**ರೆಂಬ ಯತಿಗಳ ದರ್ಶನವಾಯಿತು. ಅವರನ್ನು ಆತನು ತನ್ನ ಪ್ರಾಯಶ್ಚಿತ್ತಕ್ಕಾಗಿ ಬೇಡಿಕೊಳ್ಳಲು ತೀರ್ಥರು ಕಿವಿಯ ಮೇಲೆ ಕೈಯಿಟ್ಟುಕೊಂಡರು. ಇಂತಹ ಪಾಪಕ್ಕೆ ಪ್ರಾಯಶ್ಚಿತ್ತವೇ ಇಲ್ಲವೆಂದು ಅವನಿಗೆ ಅವರು ಹೇಳಿಬಿಟ್ಟರು. ಆಗ ಆತನು ಅಲ್ಲಿಂದ ಹೊರಟು ಕುಂಭಘೋಣಿಯಲ್ಲಿಯ ಶ್ರೀರಾಘವೇಂದ್ರಸ್ವಾಮಿಗಳಿಂದ ವಿಧಿಪೂರ್ವಕವಾಗಿ ಪ್ರಾಯಶ್ಚಿತ್ತವನ್ನು ಹೊಂದಿ ಅವರಿಂದ ಮುದ್ರಾಧಾರಣೆಯನ್ನು ಪಡೆದು ಪವಿತ್ರನಾದನು. ಶ್ರೀರಾಯರು ಆ ಗೃಹಸ್ಥನ ಪಂಙ್ತಿಯಲ್ಲಿ ಭೋಜನ ಮಾಡಿದುದಕ್ಕೆ ಖಂಬಾಳಿ ರಾಮಚಂದ್ರತೀರ್ಥರು ಅವರಿಗೆ ಬಹಿಷ್ಕಾರವನ್ನು ಹಾಕಿದರು. ಅಲ್ಲದೆ ಈ ಬಹಿಷ್ಕಾರವನ್ನು ತಾವೂ ನಡೆಸಬೇಕೆಂಬಾಶಯದ ಪತ್ರವನ್ನು ಬರೆದು ವಸ್ತ್ರಮನ್ನಣೆಯೊಡನೆ ಅದನ್ನು ಖಂಬಾಳಿತೀರ್ಥರು ಸಂಚಾರದಲ್ಲಿದ್ದ **ಶ್ರೀವೇದನಿಧಿತೀರ್ಥ**ರಿಗೆ ಕಳುಹಿದರು. ಇದನ್ನು ಓದಿಸಿ ಕೇಳುತ್ತಲೇ ಶ್ರೀಗಳು ಬಹು ಕ್ರೋಧಸಂತಪ್ತರಾದರು. ರಾಯರಿಗೆ ಬಹಿಷ್ಕಾರವನ್ನು ಹಾಕಲಿಕ್ಕೆ ಈ ಯತಿಗಳಿಗೇನು ಅಧಿಕಾರವಿದೆಯೆಂದು ತಂದ ವಸ್ತ್ರಮನ್ನಣೆಯನ್ನು ಹಾಗೆಯೇ ಶ್ರೀಪಾದರು ಕಳುಹಿಬಿಟ್ಟರು.

ಈ ಸುದ್ದಿಯು ಶ್ರೀರಾಘವೇಂದ್ರರಿಗೆ ತಿಳಿದು ಅವರು ಬಲು ಸಂತೋಷಪಟ್ಟರು. ತಮ್ಮ ಸಂಸ್ಥಾನವನ್ನು ತೆಗೆದುಕೊಂಡು ಅವರು ಶ್ರೀಗಳಿದ್ದಲ್ಲಿಗೆ ಬಂದರು. ಆಗ ಪರಸ್ಪರರ ಭೆಟ್ಟಿಯು ಇಬ್ಬರನ್ನೂ ಬಲು ಮೋದಬಡಿಸಿತು. ಇಬ್ಬರೂ ಪರಸ್ಪರರಿಗೆ ಬಹಳವಾಗಿ ಆದರಸತ್ಕಾರವನ್ನು ಮಾಡಿದರು. ಆಗ ವ್ಯಾಸಂಭಟ್ಟರ **ಕಣವಿಯ ತೋಟ**ವೆಂಬ ಸ್ಥಳದಲ್ಲಿ ಈರ್ವರು ಶ್ರೀಗಳವರ ದೇವತಾರ್ಚನೆಯು ಉತ್ಸವದಿಂದ ನಡೆಯಿತು. ಆ ಮೇಲೆ ಇಬ್ಬರೂ ಶ್ರೀಗಳು ಒಂದೇ ಕಡೆಯಲ್ಲಿ ಕುಳಿತು ಆನಂದದಿಂದ ಭೋಜನವನ್ನು ಮಾಡಿದರು.

ಆ ಮೇಲೆ ಇಬ್ಬರೂ ಶ್ರೀಪಾದರು ಪ್ರಸನ್ನಚಿತ್ತರಾಗಿ ತಮ್ಮ ಸಂಸ್ಥಾನದೊಂದಿಗೆ ಬೇರೆಬೇರೆ ಕಡೆಗೆ ಸಂಚಾರಕ್ಕೆ ಹೋದರು. ಈ

ಸುದ್ದಿಯು ರಾಮಚಂದ್ರತೀರ್ಥರಿಗೆ ಹತ್ತಲು ಅವರು ಎರಡೂ ಮಠಗಳಿಗೆ ಬಹಿಷ್ಕಾರವನ್ನು ಹಾಕಿರೆಂದು ತಮ್ಮ ಶಿಷ್ಯರಿಗೆ ಹೇಳಿಬಿಟ್ಟರು.

ತಮಗೆ ಸಲ್ಲದ ಕಾರ್ಯವನ್ನು ಮಾಡಿ ಕುಚೇಷ್ಟೆಯನ್ನು ಮಾಡುತ್ತಿರುವ ತೀರ್ಥರ ಸಮಾಚಾರವನ್ನು ಚೆನ್ನಾಗಿ ತೆಗೆದುಕೊಂಡೇ ಬಿಡುವದೆಂದು ನಿಶ್ಚೈಸಿ ಶ್ರೀವೇದನಿಧಿತೀರ್ಥರು ಚಾತುರ್ಮಾಸ್ಯ ಸಂಕಲ್ಪಕ್ಕಾಗಿ ಶ್ರೀಮುಷ್ಣಕ್ಷೇತ್ರಕ್ಕೆ ಬಂದರು. ಅಲ್ಲಿಯ ಶ್ರೀಲಕ್ಷ್ಮೀನಾರಾಯಣ ದೇವಸ್ಥಾನದಲ್ಲಿ ಅವರ ಬಿಡಾರವಾಯಿತು. ಆಗ ರಾಮಚಂದ್ರತೀರ್ಥರು ಅಲ್ಲಿಯೇ ಇದ್ದರು. ಆದ್ದರಿಂದ ಶಿಷ್ಯರ ಮುಖಾಂತರವಾಗಿ ನಡುನಡುವೆ ಅವರೊಡನೆ ಕಲಹಗಳು ನಡೆಯತೊಡಗಿದವು. ಆಗ ಶ್ರೀಗಳು ತೀರ್ಥರಿಗೆ ವಾಕ್ಯಾರ್ಥಕ್ಕೆ ಬರಬೇಕಾಗಿ ಕರೆಕಳುಹಿದರು. ಆದರೆ ತೀರ್ಥರಿಗೆ ವರಹದೇವರ ಗುಡಿಯನ್ನು ಬಿಟ್ಟು ಹೊರಗೆ ಬರಲಿಕ್ಕೇ ಎದೆಯಾಗಲಿಲ್ಲ. ಶ್ರೀಗಳು ಒಂದು ದಿನ ಅವರ ಹಾದಿಯನ್ನು ನೋಡುತ್ತ ಸಂಜೆಯ ವರೆಗೆ ಊಟವಿಲ್ಲದಲೇ ಕುಳಿತರು. ಯತಿಗಳ ಉಪವಾಸವು ಊರಿಗೆ ಕ್ಷೇಮಕರವಲ್ಲವೆಂದು ಬಗೆದು ಊರವರು ಶ್ರೀಗಳನ್ನು ಬೇಡಿಕೊಂಡು ಸಮಾಧಾನಗೊಳಿಸಿ ಅವರ ಕಡೆಯಿಂದ ಪೂಜಾಭೋಜನಾದಿಗಳನ್ನು ಮಾಡಿಸಿದರು.

ಭಾದ್ರಪದ ಶು. ೧೫ನೇ ದಿವಸ ಮತ್ತೆ ಶ್ರೀಗಳು ತೀರ್ಥರನ್ನು ವಾಕ್ಯಾರ್ಥಕ್ಕೆಂದು ಕರೆದರು. ಈವಾಗಲೋ ಅವರು ಬೆಳಗಾಗುವದರೊಳಗಾಗಿಯೇ ತಂಜಾವೂರಿಗೆ ಓಡಿಹೋಗಿಬಿಟ್ಟರು. ಸಿಂಗನು ಆನೆಯನ್ನು ಬೆನ್ನಟ್ಟಿದಂತೆ ಶ್ರೀಗಳು ತೀರ್ಥರನ್ನು ಬೆನ್ನಟ್ಟಿ ತಂಜಾವೂರಿಗೂ ಹೋದರು.

ವಿದ್ಯಾಪರೀಕ್ಷೆಯ ಸ್ಥಾನವೆಂದು ಹೆಸರುಗೊಂಡ ಆ ಊರಲ್ಲಿ ತಮಗೂ ತೀರ್ಥರಿಗೂ ವಾದದ ಪ್ರಸಂಗವನ್ನು ತಂದು ಕೊಡಲೇಬೇಕೆಂದು ಶ್ರೀಗಳು ಅಲ್ಲಿಯ ರಾಜನನ್ನು ಕೇಳಿದರು. ರಾಜನು ಒಪ್ಪಿದನು. ಆದರೆ ತೀರ್ಥರು ಎಂಟು ದಿನಗಳಾದರೂ ಶ್ರೀಗಳ ಕಡೆಗೆ ಒಡೆಹಾಯಲಿಲ್ಲ. ರಾಜನ ಮಂತ್ರಿಯು ಇಬ್ಬರೂ ಸನ್ಯಾಸಿಗಳನ್ನು ವಾದಕ್ಕೆ ಹಚ್ಚಿ ಸಮಯ ಬಂದರೆ ತಮಗೆ ದ್ರೋಹವನ್ನು ಕಟ್ಟಿಕೊಳ್ಳ

ವಂತಾಗಬಹುದೆಂದು ವಿಚಾರಿಸಿ, ಈರ್ವರ ನಡುವೆ ಸಮಾಧಾನ ವನ್ನುಂಟು ಮಾಡುವದೆಂದು ಪ್ರಯತ್ನಿಸಿದನು. ಆದರೆ ಎಲ್ಲವೂ ವ್ಯರ್ಥವಾಯಿತು. ತೀರ್ಥರು ಆ ದಿವಸವೇ ರಾತ್ರಿಯಲ್ಲಿ ಊರನ್ನು ಬಿಟ್ಟು ಹೋದರು.

ಈ ಸುದ್ದಿಯು ತಿಳಿಯಲು, ಅವರನ್ನು ರಾಜನೇ ಊರನ್ನು ಬಿಡಿಸಿ ಕಳುಹಿದನೆಂದು ಶ್ರೀಗಳಿಗೆ ಸ್ವಲ್ಪ ಅಸಮಾಧಾನವಾಯಿತು. ಆದರೆ ರಾಜನು ಶ್ರೀಗಳೇ ಜಯವನ್ನು ಹೊಂದಿದರೆಂದು ಒಪ್ಪಿ ಜಯಪತ್ರ ವನ್ನು ಬರೆಯಿಸಿಕೊಟ್ಟನು. ಆ ಮೇಲೆ ಯಥಾಯೋಗ್ಯವಾಗಿ ಶ್ರೀಪಾ ದರಿಗೆ ರಾಜನಿಂದ ಆದರಾತಿಥ್ಯಗಳೂ ಸಿಕ್ಕವು. ಅಲ್ಲಿಂದ ಶ್ರೀಗಳು ಪಯಣವನ್ನು ಬೆಳಿಸಿ ಮತ್ತೆ ರಾಮೇಶ್ವರಕ್ಕೆ ಹೋಗಿ ಯಾತ್ರೆಯಾದ ಮೇಲೆ ಶ್ರೀರಂಗಪಟ್ಟಣಕ್ಕೆ ಬಂದರು. ಲಿಂಗಾಭಟ್ಟರ ಅಗ್ರಹಾರದಲ್ಲಿ ಶ್ರೀಪಾದರು ಇಳಿದುಕೊಂಡರು. ಅಲ್ಲಿ ಅವರಿಗೆ **ಕೃಷ್ಣದ್ವೈಪಾಯನರ** ಭೆಟ್ಟಿಯಾಯಿತು. ಆಗ **ವಿದ್ಯಾನಾಥತೀರ್ಥರ** ಸಂಗಡ ಶಾಸ್ತ್ರವಿಚಾ ರವೂ ನಡೆಯಿತು. ಶಾಸ್ತ್ರವಿಚಾರವು ಮುಗಿದ ಮೇಲೆ ಅವರಿಗೆ **ರಂಗನಾಥತೀರ್ಥ**ರೆಂಬ ಹೊಸ ಹೆಸರನ್ನು ಶ್ರೀಪಾದರು ಕೊಟ್ಟರು. ಅಲ್ಲಿಂದ ಅವರು ಶ್ರೀಗಳ ಆಜ್ಞೆಯಂತೆ ಸಿಂಗಲಿಯೆಂಬಲ್ಲಿಗೆ ಹೋದರು. ಶ್ರೀಗಳು ಪಂಢರಪುರಕ್ಕೆ ಹೋದರು. ಅಲ್ಲಿ ಅವರಿಗೆ ಮೈಯಲ್ಲಿ ಜಾಡ್ಯ ಉಂಟಾಯಿತು. ಆಗ ಮೊದಲೇ ಆಶ್ರಮವನ್ನು ಹೊಂದಿ ಧರ್ಮಪುರ ವೆಂಬಲ್ಲಿದ್ದ **ಸತ್ಯವ್ರತತೀರ್ಥ**ರಿಗೆ ಸಂಸ್ಥಾನದಿಂದ ಕರೆವು ಹೋಯಿತು. ಅವರು ಬಂದ ಮೇಲೆ ಅವರಿಗೆ ಸಂಸ್ಥಾನವನ್ನೊಪ್ಪಿಸಿ ಅವರ ತರು ವಾಯದಲ್ಲಿ **ಕೌಲಗಿ ರಘುಪತ್ಯಾಚಾರ್ಯ**ರಿಗೇ ಸಂಸ್ಥಾನವನ್ನೊ ಪ್ಪಿಸುವುದೆಂದು ಒತ್ತಿಹೇಳಿ ಶ್ರೀಗಳು ಆ ಊರಲ್ಲಿಯೇ ಯುವ ಸಂವತ್ಸ ರದ ಕಾರ್ತಿಕ ಶುದ್ಧ ೧೧ ದಿನ ವೃಂದಾವನಸ್ಥರಾದರು. ಈ ಸ್ಥಳ ದಲ್ಲಿ ಈಗಲೂ ಮಠದ ಆಶ್ರಯದಿಂದ ಪಾಠಪ್ರವಚನಾದಿಗಳು ನಡೆಯು ತ್ತಿವೆ. ಇವರು **ಹೂಹೂಗಂಧರ್ವಾಂಶ**ರೆಂದು ಹೇಳಿಕೆಯಿದೆ.

# ೧೮ ಶ್ರೀಸತ್ಯವ್ರತತೀರ್ಥರು



**ಪಟ್ಟ:- ೧೧-೮-೧೫೫೭ನೇ ಯುವದಿಂದ ೬-೭-೧೫೬೦ನೇ ಬಹುಧಾನ್ಯದ ವರೆಗೆ**

ಇವರ ಪೂರ್ವಾಶ್ರಮದ ಹೆಸರು **ರಂಗನಾಥಾಚಾರ್ಯ**ರೆಂದು ಈ ಮೊದಲೇ ಗೊತ್ತಾಗಿದೆಯಷ್ಟೇ. ಇವರು ಶ್ರೀವಿದ್ಯಾಧೀಶರ ಆಜ್ಞೆಯಂತೆ ಏಕಚಕ್ರನಗರದಲ್ಲಿ ಅವರ ವೃಂದಾವನವನ್ನು ಕಟ್ಟಿಸಿ ಸಮಾರಾಧನೆಯನ್ನು ತೀರಿಸಿಕೊಂಡು ಪಂಶುರಾಮ ಮುಂತಾದ ಮೂರ್ತಿಗಳನ್ನೂ ಇನ್ನೂ ಬೇರೆ ಎಷ್ಟೋ ವಸ್ತುಗಳನ್ನೂ ತಕ್ಕೊಂಡು ಬಂದು **ಶ್ರೀವೇದನಿಧಿತೀರ್ಥ**ರಿಗೆ ಒಪ್ಪಿಸಿದ ಬಳಿಕ ಕೆಲವು ಕಾಲ ಸಂಸ್ಥಾನದಲ್ಲಿಯೇ ಇದ್ದರು. ಆ ಮೇಲೆ ಇವರಿಗೆ ಶ್ರೀಪಾದರಿಂದ ಆಶ್ರಮವು ಸಿಕ್ಕಿತು. ಆಗ ಗುರುಗಳ ಅಪ್ಪಣೆಯಂತೆ ಹೊಸ ಯತಿಗಳು ಉತ್ತರ ದೇಶಕ್ಕೆ ಮತಪ್ರಸಾರಕ್ಕಾಗಿ ಹೊರಟುಹೋದರು. ಆದರೆ ಗುರುಗಳಿಗೆ ಪಂಢರಪುರದಲ್ಲಿ ಅತಿ ಅಸ್ವಸ್ಥತೆಯುಂಟಾಗಲು ಸಂಸ್ಥಾನಕ್ಕೆ ಬಂದು ಇವರು ಅದನ್ನು ನಡೆಸತೊಡಗಿದರು. ಗುರುಗಳು ನಾರಾಯಣನಾಮರತರಾದ ಮೇಲೆ ಸಂಸ್ಥಾನದೊಡನೆ ಶ್ರೀವ್ರತರು ಸಾಂಗಲಿಗೆ ಬಂದರು.

ಇಷ್ಟರಲ್ಲಿ ಆಶ್ರಮ ಜೇಷ್ಠರಾಗಿದ್ದ **ಕೃಷ್ಣದ್ವೈಪಾಯನಾಚಾರ್ಯ**ರಿಗೆ ಸಂಸ್ಥಾನ ಪಟ್ಟವನ್ನು ಕೊಡಿಸಬೇಕೆಂಬ ಆಲೋಚನೆಯಿಂದ ಅವರನ್ನು ಕರೆದುಕೊಂಡು ಕೆಲವರು ಶ್ರೀಗಳಿದ್ದಲ್ಲಿಗೆ ಬಂದರು. ಆಗ ಶ್ರೀಗಳು ತಮ್ಮ ಪರಮಗುರುಗಳಿಂದ ಆಶ್ರಮವನ್ನು ಹೊಂದಿದ ಕೃಷ್ಣದ್ವೈಪಾಯನರಿಗೆ ನಮಸ್ಕರಿಸಿ ಸಂಸ್ಥಾನಕ್ಕೆ ಅಪ್ಪಣೆಯನ್ನು ಕೇಳಿದರು. ಆಗ ಅವರು ಸಂತೋಷದಿಂದ ತಮ್ಮ ಅನುಮತಿಯನ್ನು ಕೊಟ್ಟುಬಿಟ್ಟರು.

ಈ ನಂತರ ಶ್ರೀಪಾದರು ಕರ್ನಾಟಕದಲ್ಲಿಯೇ ಸಂಚರಿಸುತ್ತಿದ್ದು ಮಂತ್ರೋಪದೇಶ ಮುದ್ರಾಧಾರಣೆಗಳನ್ನು ತಮ್ಮ ಶಿಷ್ಯರಿಗೆ ಕೊಡುತ್ತ ಪಾಠಪ್ರವಚನಾದಿಗಳಲ್ಲಿ ರತರಾಗಿರುತ್ತಿದ್ದರು. ಮುಂದೆ

ಮತ್ತೆ ದೇಹವಲ್ಲಿ ಆಯಾಸವುಂಟಾಗಲು ಜಾಗ್ರತೆಯಿಂದ ಇವರು **ಸಾಂಗಲಿಗೆ** ಬಂದು ಗುರುಗಳ ಆಜ್ಞೆಯಂತೆ **ಕೌಲಗಿ ರಘುಪತ್ಯಾಚಾರ್ಯ**ರಿಗೆ ಆಶ್ರಮವನ್ನನುಗ್ರಹಿಸಿ **ಸತ್ಯನಿಧಿ**ಗಳೆಂದವರಿಗೆ ಹೆಸರಿಟ್ಟು ಅವರಿಗೆ ಸಂಸ್ಥಾನವನ್ನು ಒಪ್ಪಿಸಿದರು. ಮುಂದೆ ೧೫೬೦ನೇ ಬಹುಧಾನ್ಯ ಸಂವತ್ಸರ ಆಶ್ವೀಜ ಶುದ್ಧ ೬ ದಿನದಲ್ಲಿ ಇವರು ವೃಂದಾವನಸ್ಥರಾದರು. ಇವರು **ಲೋಮಾಂಶ**ರೆಂದು ಪ್ರಸಿದ್ಧಿಯಾಗಿದೆ.

## ೧೯ ಶ್ರೀಸತ್ಯನಿಧಿತೀರ್ಥರು



**ಪಟ್ಟ:- ೬-೭-೧೫೬೦ನೇ ಬಹುಧಾನ್ಯದಿಂದ ೧೦-೯-೧೫೮೨ನೇ ಸರ್ವಜಿತುವಿನವರೆಗೆ**

ಇವರ ಪೂರ್ವಾಶ್ರಮದ ಹೆಸರು **ಕೌಲಗಿ ರಘುಪತ್ಯಾಚಾರ್ಯ**ರೆಂದು ಹಿಂದೆ ಹೇಳಿದೆಯಷ್ಟೇ. ಶ್ರೀವೇದನಿಧಿತೀರ್ಥರು ವೃಂದಾವನಸ್ಥರಾಗುವ ಸಮಯದಲ್ಲಿ ಇವರು ತಮ್ಮ ಮಕ್ಕಳ ಮುಂಜಿವೆಗೆಂದು ಕಾಶೀಕ್ಷೇತ್ರಕ್ಕೆ ಹೋಗಿದ್ದುದರಿಂದ ಇವರಿಗೆ ಪಟ್ಟವು **ಶ್ರೀಸತ್ಯವ್ರತ**ರ ತರುವಾಯದಲ್ಲಿ ಸಿಕ್ಕಿತು.

ಸಾಂಗಲಿಯಲ್ಲಿ ಇವರು ತಮ್ಮ ಗುರುಗಳ ವೃಂದಾವನವನ್ನು ಕಟ್ಟಿಸಿ ಬಹು ಉತ್ಸವದಿಂದ ಸಮಾರಾಧನೆಯನ್ನು ಜರುಗಿಸಿದರು. ಆಗ ಅನೇಕ ವಿದ್ವಾಂಸರೂ ಸಜ್ಜನರೂ ದಕ್ಷಿಣೆ-ದಾನಮನ್ನಣೆಗಳಿಂದ ಸಂತಸಬಟ್ಟರು.

ಆ ಮೇಲೆ ಶ್ರೀಗಳು ಸಂಚಾರಕ್ಕೆಂದು ಹೊರಟರು. ಹೋದ ಹೋದಲ್ಲಿ ಮತಪ್ರಸಾರ ಮುದ್ರಾಧಾರಣಾದಿಗಳಂತೂ ನಡೆದೇ ಇದ್ದವು. ಇವರು ಮುಂದೆ ಅನೇಕ ಯಾತ್ರೆಗಳನ್ನು ಮುಗಿಸಿಕೊಂಡು ಕಂಚಿ, ತಂಜಾವರ, ಮಧುರೆ ಮುಂತಾದ ಪ್ರದೇಶಗಳಲ್ಲಿದ್ದ ಪರವಾದಿಗಳನ್ನು ಗೆದ್ದು **ಕುಂಭಘೋಣೆ**ಗೆ ಬಂದರು. ಆಗ **ಶ್ರೀರಾಘವೇಂದ್ರ** ಸ್ವಾಮಿಗಳು ಇವರನ್ನು ತಮ್ಮಲ್ಲಿಗೆ ಬರಮಾಡಿಕೊಂಡು ಬಹುವಾಗಿ ಆದರಿಸಿದರು. ತಮ್ಮ ಶಿಷ್ಯರೊಬ್ಬರಿಂದ ತೊಂದರೆಗೊಂಡು ಶ್ರೀಗಳು ಸಿಟ್ಟಾಗಿ ಹೋಗುತ್ತಿರಲು ಶ್ರೀರಾಘವೇಂದ್ರರು ಅವರನ್ನು ಸಮಾಧಾನ

ಗೊಳಿಸಿ ಊಟಉಪಚಾರಾದಿಗಳನ್ನು ಮಾಡಿಸಿ ಕಳುಹಿಕೊಟ್ಟರು. ಶ್ರೀಗಳು ಸಂತೋಷದಿಂದ ತಮ್ಮ ಬಿಡಾರಕ್ಕೆ ಹೊರಟುಹೋದರು.

ಇವರು ಬಂದ ಮೇಲೆ ಶ್ರೀರಾಘವೇಂದ್ರರು ತಮ್ಮ ಶಿಷ್ಯರಿಗೆಲ್ಲ ಇನ್ನು ಮೇಲೆ ಮೂಲರಾಮರ ವಿಷಯವಾಗಿ ಕಲಹವನ್ನು ಮಾಡ ಬಾರದೆಂದು ನಿರ್ಬಂಧ ಮಾಡಿ ಹೇಳಿದರು.

ಮುಂದೆ ಶ್ರೀಗಳು ಈರ್ವರಿಗೆ ಆಶ್ರಮಕೊಟ್ಟರು. ಅವರು **ಶ್ರೀಸತ್ಯಾನಂದತೀರ್ಥ**ರು ಮತ್ತು **ಶ್ರೀಗುಣನಿಧಿತೀರ್ಥ**ರು. ಇವರಿಗೆ ಕೆಲವು ಪ್ರತಿಮೆಗಳನ್ನು ಕೊಟ್ಟು ಇವರನ್ನು ಶ್ರೀಪಾದರು ದಿಗ್ವಿಜಯಕ್ಕಾಗಿ ಕಳುಹಿಕೊಟ್ಟರು. ಆ ಮೇಲೆ ತಾವೂ ಸಂಚಾರಕ್ಕೆ ಹೊರಟು ಸ್ವಾಮಿಗಳು **ತಿಂಡಿವನಕ್ಕೆ** ಬಂದರು. ಅಲ್ಲಿ ಒಂದು ದೊಡ್ಡ ಸಭೆಯಾಯಿತು. ದೊಡ್ಡ ದೊಡ್ಡ ಪಂಡಿತರು ಅಲ್ಲಿಗೆ ದಯಮಾಡಿಸಿದ್ದರು. **ಶ್ರೀವ್ಯಾಸತೀರ್ಥ**ರು, **ಶ್ರೀರಂಗನಾಥತೀರ್ಥ**ರು, **ಶ್ರೀ ಮುನೀಂದ್ರತೀರ್ಥ**ರು, **ಶ್ರೀಲಕ್ಷ್ಮೀಕಾಂತತೀರ್ಥ**ರು, ಎಂಬ ತಪೋನಿಧಿಗಳು ಅಲ್ಲಿಗೆ ಬಂದಿದ್ದರು. ಎಂಟು ದಿನ ಶಾಸ್ತ್ರಾರ್ಥ ವಿಚಾರವಾಯಿತು. ಆಗ ಶ್ರೀರಂಗನಾಥತೀರ್ಥರೆಂಬವರ ಅಗಾಧವಾದ ಪಾಂಡಿತ್ಯವು ಪ್ರಕಟವಾಯಿತು.

ಅಲ್ಲಿಂದ ಶ್ರೀಗಳು ಕೃಷ್ಣವೇಣಿಯ ಮೇಲಿಂದ **ಪಾಂಡುರಂಗ** ಕ್ಷೇತ್ರಕ್ಕೆ ಬಂದರು. ಆ ಮೇಲೆ ಅವರಿಗೆ ಶ್ರೀಸತ್ಯವ್ರತರು, ಶ್ರೀವೇದನಿಧಿಗಳು, ಶ್ರೀರಾಮಚಂದ್ರತೀರ್ಥರು, ಶ್ರೀವಿದ್ಯಾನಿಧಿಗಳು, ಶ್ರೀಅಕ್ಷೋಭ್ಯತೀರ್ಥರು, ಶ್ರೀಜಯತೀರ್ಥರು, ಈ ಮಹಾಸ್ವಾಮಿಗಳ ವೃಂದಾವನಸ್ಥಾನಗಳ ಯಾತ್ರೆಯಾಯಿತು.

ಬಳಿಕ **ಧರ್ಮಪುರಿ** ಮುಂತಾದ ಕ್ಷೇತ್ರಗಳಲ್ಲಿ ಗೋದಾಸ್ನಾನ ಮಾಡಿಕೊಂಡು ಚಾತುರ್ಮಾಸ್ಯದ ನಂತರದಲ್ಲಿ **ಶ್ರೀಕೃಷ್ಣ ದ್ವೈಪಾಯನ** ಸ್ವಾಮಿಗಳಿದ್ದಲ್ಲಿಗೆ ಶ್ರೀಗಳು ಬಂದರು. ಅಲ್ಲಿ ಅವರ ಸಖ್ಯದಲ್ಲಿ ಸಚ್ಛಾಸ್ತ್ರಶ್ರವಣಾದಿಗಳನ್ನು ಮಾಡಿಸುತ್ತ ಶ್ರೀಪಾದರು ಅನೇಕ ವರ್ಷಗಳ ವರೆಗೆ ಸಂಸ್ಥಾನ ಪೂಜೆಯನ್ನು ಮಾಡುತ್ತಿದ್ದರು.

ಇಲ್ಲಿಂದ ಮುಂದೆ ಶ್ರೀಗಳು **ನಿವೃತ್ತಿಸಂಗಮ**ವೆಂಬ ಕೃಷ್ಣಾ ತೀರದ ಸ್ಥಳಕ್ಕೆ ಬಂದರು. ಅಲ್ಲಿ ಅವರಿಗೆ ದೇಹಾಯಾಸವಾಯಿತು. ಆಗ ಅವರು ರಂಗನಾಥತೀರ್ಥರನ್ನು ಕರೆಯಿಸಿಕೊಂಡರು. ಅವರಿಗೆ **ಶ್ರೀಸತ್ಯನಾಥತೀರ್ಥ**ರೆಂದು ಹೆಸರಿಟ್ಟು ಸಂಸ್ಥಾನಕ್ಕೆ ಅವರನ್ನು ಪಟ್ಟ ಗಟ್ಟಿದರು. ಮುಂದೆ ೧೫೮೨ನೇ ಶಾರ್ವರಿ ಸಂವತ್ಸರ ಮಾರ್ಗಶಿರ ಶುದ್ಧ ದಶಮಿಯ ದಿನ ತಮ್ಮ ಇಹಲೋಕದ ಯಾತ್ರೆಯನ್ನು ಮುಗಿಸಿದರು. ಇವರು **ಜಾಬಾಲಿ ಋಷಿಗಳ** ಅಂಶದವರೆಂಬ ಪ್ರಸಿದ್ಧಿಯಿದೆ.

## ೨೦ ಶ್ರೀಸತ್ಯನಾಥತೀರ್ಥರು



ಪಟ್ಟ:-೧೦-೯-೧೫೮೨ನೇ ಸರ್ವಜಿತುವಿನಿಂದ ೧೧-೯-೧೫೯೫ನೇ ಪ್ರಮಾಥಿಯವರೆಗೆ

ಇವರ ಪೂರ್ವಾಶ್ರಮದ ಹೆಸರು **ರಘುನಾಥಾಚಾರ್ಯ**ರು. ಇವರು ಕೊರ್ಲಹಳ್ಳಿಯವರ ಆಪ್ತರೆಂದು ತಿಳಿಯುತ್ತದೆ. ಮೊದಲೊಮ್ಮೆ ಉತ್ತರಾದಿ ಚಿಕ್ಕ ಸಂಸ್ಥಾನದಿಂದ ಇವರು ಆಶ್ರಮವನ್ನು ತೆಗೆದುಕೊಂಡು **ವಿದ್ಯಾನಾಥ**ರೆಂದು ಕರೆಯಿಸಿಕೊಂಡಿದ್ದರು. ಆದರೆ ಮುಂದೆ ದಂಡವ್ಯತ್ಯಾಸದಿಂದ **ಶ್ರೀವೇದನಿಧಿತೀರ್ಥ**ರು ಇವರನ್ನು **ರಂಗನಾಥತೀರ್ಥ**ರೆಂದು ಕರೆದರು. ಆ ಮೇಲೆಯೇ ಇವರಿಗೆ ಶ್ರೀಸತ್ಯನಿಧಿಗಳಿಂದ ಪಟ್ಟವು ದೊರೆಯಿತಷ್ಟೇ.

ಪಟ್ಟಕ್ಕೆ ಬಂದ ಮೇಲೆ ಶ್ರೀಗಳು **ಶ್ರೀವ್ಯಾಸತೀರ್ಥ**ರನ್ನು ಕರೆಯಿಸಿಕೊಂಡು ಅವರಲ್ಲಿಯ ದೇವತಾಪ್ರತಿಮೆಗಳನ್ನು ತಾವೇ ಪೂಜಿಸಿ ಅನೇಕ ಆಭರಣಪುಸ್ತಕಾದಿಗಳೊಡನೆ ಅವನ್ನು ಅವರಿಗೆ ತಿರುಗಿ ಕೊಟ್ಟರು. ಬಳಿಕ ಶ್ರೀವ್ಯಾಸತೀರ್ಥರು **ಸಂಗಳಿ**ಗೆಗೆ ಹೋದರು. ಶ್ರೀಗಳು ತಂಜಾವರ ಶ್ರೀರಂಗ ಮುಂತಾದೆಡೆಗಳಲ್ಲೆಲ್ಲ ಮತಪ್ರಸಾರವನ್ನು ಮಾಡುತ್ತ ಹೊರಟರು. ಒಮ್ಮೆ **ಚಂದಿ**ಯೆಂಬ ಗ್ರಾಮದಲ್ಲಿ ಶ್ರೀವ್ಯಾಸರಾಯರ ಮಠದ **ಶ್ರೀಲಕ್ಷ್ಮೀನಾರಾಣತೀರ್ಥ**ರೆಂಬವರೊಡನೆ ಶ್ರೀಪಾದರು ಶಾಸ್ತ್ರಾರ್ಥವಿಚಾರವನ್ನು ಮಾಡಿ ಅವರ ಮಠದಲ್ಲಿ

ಶ್ರೀಮೂಲರಾಮ ವೇದವ್ಯಾಸರ ಪ್ರತಿಮೆಗಳಿಲ್ಲವೆಂತಲೂ ಅವರಿಗೆ ಮುದ್ರಾಧಾರಣವನ್ನು ಕೊಡುವ ಅಧಿಕಾರವಿಲ್ಲವೆಂತಲೂ ಅವರಿಂದ ಪತ್ರವನ್ನು ಬರೆಯಿಸಿಕೊಂಡರು. ಆ ಪತ್ರವು ಉತ್ತರಾದಿ ಮಠದಲ್ಲಿ ಇನ್ನೂ ಭದ್ರವಾಗಿದೆ.

ಇಷ್ಟರಲ್ಲಿ **ಶ್ರೀಕೃಷ್ಣದ್ವೈಪಾಯನತೀರ್ಥ**ರು "೪೮ ದಿನಗಳಲ್ಲಿ ಶ್ರೀಗಳು ತಮ್ಮಲ್ಲಿಗೆ ಬಂದರೆ ಅವರಿಗೆ ತಮ್ಮ ಎಲ್ಲ ಪೂಜಾಪ್ರತಿಮೆ-ಸಾಹಿತ್ಯಗಳನ್ನು ಕೊಟ್ಟುಬಿಡುವೆ''ವೆಂದು ವಿಜಾಪುರದಿಂದ ಬರೆದು ಕಳಿಸಿದರು. ಆ ಕೂಡಲೇ ಶ್ರೀಗಳು ವಿಜಾಪುರಕ್ಕೆ ಹೊರಟವರೇ ೪೩ ದಿನಗಳಲ್ಲಿಯೇ ಅಲ್ಲಿಗೆ ಮುಟ್ಟಿದರು. ಆಗ ಶ್ರೀದ್ವೈಪಾಯನರು ತಾವು ಹೇಳಿದಂತೆ ಶ್ರೀಗಳಿಗೆ ಎಲ್ಲವನ್ನೂ ಕೊಟ್ಟುಬಿಟ್ಟು ಅವರಿಂದಲೇ ಸುದರ್ಶನ ಚಕ್ರಾಂಕಿತಗಳನ್ನು ತೆಗೆದುಕೊಂಡು ಶ್ರೀಸತ್ಯನಾಥರ ಮಹಾತ್ಮೆಯನ್ನು ತಮ್ಮ ಶಿಷ್ಯರಿಗೆ ತಿಳುಹಿ ಸಂಸ್ಥಾನವನ್ನು ಅಭಿಮಾನದಿಂದ ಕಾಯುವುದೆಂದು ಒತ್ತಿ ಹೇಳಿ **ಕುಸುಮಾವತಿ**ಗೆ ಹೋಗಿ ಜೇಷ್ಠ ಶು. ೧೫ ದಿನ ದೇವಯಾತ್ರೆಯನ್ನು ಮಾಡಿದರು.

ಬಳಿಕ ಸಂಗಳಿಗೆಗೆ ಬಂದು ಶ್ರೀಗಳು (೧) **ಕರ್ಮನಿರ್ಣಯ ಟಿಪ್ಪಣಿ** (೨) **ವಿಜಯಮಾಲಾ** (೩) **ಅಭಿನವಚಂದ್ರಿಕಾ** (೪) **ಅಭಿನವಾಮೃತ** (೫) **ಅಭಿನವಗದಾ** (೬) **ಪರಶು** ಎಂಬ ಗ್ರಂಥಗಳನ್ನು ರಚಿಸಿದರು. ಅಲ್ಲಿಯೇ ಉತ್ತರ ಕನ್ನಡಿಗರಾದ **ಕೇಶವಾಚಾರ್ಯ**ರಿಗೆ ಆಶ್ರಮವನ್ನು ಅನುಗ್ರಹಿಸಿ **ಸತ್ಯಾಭಿನವತೀರ್ಥ**ರೆಂದು ಕರೆದು ಅವರಿಗೆ ಪಟ್ಟಗಟ್ಟಿದರು. ಆ ಮೇಲೆ ಮಳಲಮುಟ್ಟಿಗೆಯ ವೇದವ್ಯಾಸ ದೇವರನ್ನು ಅವರಿಗೆ ಪೂಜೆಗಾಗಿ ಕೊಟ್ಟು ಅವರನ್ನು ಮತ ಪ್ರಚಾರಕ್ಕೆಂದು ಪೂರ್ವದೇಶಕ್ಕೆ ಕಳುಹಿಕೊಟ್ಟರು.

ಮುಂದೆ ಒಮ್ಮೆ ಸಿಂಹರಾಸಿಗೆ ಗುರುವು ಬಂದ ಸುಯೋಗವು ಪ್ರಾಪ್ತವಾಯಿತು. ಆಗ ಶ್ರೀಗಳು ಧರ್ಮಪುರಿ ಕ್ಷೇತ್ರದಲ್ಲಿ ಶಿಷ್ಯ ಸಮೂಹಕ್ಕೆ ಎಂದೂ ಕೇಳದಂತಹ ಭಾಷ್ಯಪಾಠವನ್ನು ಹೇಳಿದರು. ಅಲ್ಲಿ **ಛಲಾರಿ ನರಸಿಂಹಾಚಾರ್ಯ**ರೆಂಬ ಹೆಸರಾದ ವಿದ್ವಾಂಸರು ಇದ್ದರು. ಅವರೊಡನೆ ಪಾಠವನ್ನು ಮಾಡಿ ಶ್ರೀಗಳು ಅವರನ್ನು

ನಿರುತ್ತರರನ್ನಾಗಿ ಮಾಡಿದರು. ಮುಂದೆ ಗುರುಗಳ ಆರಾಧನೆಯ ಕಾಲಕ್ಕೆ ಹಾವಿನ ಕಡಿತದಿಂದ ಸತ್ತುಹೋದ ಥಲಾರಿಯ ಆಚಾರ್ಯ ರನ್ನು ತಿರುಗಿ ಜೀವಿಸಿಕೊಂಡು ಅವರನ್ನು ಶ್ರೀಪಾದರು ತಮ್ಮ ಸಂಸ್ಥಾನದಲ್ಲಿಯೇ ಇಟ್ಟುಕೊಂಡರು. ಆಚಾರ್ಯರೂ ಕಡೆಯವರೆಗೆ ಸಂಸ್ಥಾನವನ್ನು ಬಿಡುವದಿಲ್ಲವೆಂದು ವಚನವನ್ನು ಕೊಟ್ಟರು. ಬಳಿಕ ಶ್ರೀಗಳು ತಿರುಪತಿಗೆ ಹೋಗಿ ಚಾತುರ್ಮಾಸ್ಯಗಾಗಿ ಅಲ್ಲಿಂದ **ಅರುಣಾಚಲ**ಕ್ಕೆ ಬಂದರು. ಆಗವರಿಗೆ ದೇಹದಲ್ಲಿ ಆಯಾಸವಾಯಿತು. ಆ ಕೂಡಲೇ ಶ್ರೀಗಳು ಶ್ರೀಸತ್ಯಾಭಿನವತೀರ್ಥರನ್ನು ಕರೆಯಿಸಿ ಕೊಂಡರು. ಅವರಿಗೆ ಸಂಸ್ಥಾನವನ್ನೊಪ್ಪಿಸಿ ಶ್ರೀಪಾದರು ೧೫೯೫ನೇ ಪ್ರಮಾಥಿ ಸಂವತ್ಸರ ಮಾರ್ಗಶಿರ ಶುದ್ಧ ೧೧ ದಿವಸ ಅರುಣಾಚಲ ಕ್ಷೇತ್ರದಲ್ಲಿಯೇ ವೃಂದಾವನಸ್ಥರಾದರು. ಇವರು **ವಿಶ್ವಾಮಿತ್ರಾಂಶ** ರೆಂದು ಹೆಸರಾಗಿದೆ.

## ೨೧ ಶ್ರೀಸತ್ಯಾಭಿನವತೀರ್ಥರು



**ಪಟ್ಟ:- ೧೧-೯-೧೫೯೫ನೇ ಪ್ರಮಾಥಿಯಿಂದ ೧೪-೩-೧೬೨೮ನೇ ವ್ಯಯದವರೆಗೆ**

ಇವರು ಗುರುಗಳ ತೆರುವಾಯದಲ್ಲಿ ಸಂಸ್ಥಾನ ಪೂಜೆಯನ್ನು ಮಾಡುತ್ತ ಸಂಚಾರಕ್ರಮದಿಂದ **ವೇಣಾಸಾಗ**ರವೆಂಬ ಹಳ್ಳಿಗೆ ಬಂದರು. ಅಲ್ಲಿ ಸ್ನಾನಮಾಡುವಕಾಲಕ್ಕೆ ಅವರಿಗೆ ಸಂಕಲ್ಪವನ್ನು ಹೇಳಲಿಕ್ಕೆ ಹೊರಗಿನ ಯಾವ ಬ್ರಾಹ್ಮಣರೂ ಸಿಕ್ಕಲಿಲ್ಲ. ಇದಕ್ಕೆ ಶ್ರೀಗಳು ಚಿಂತೆಗೊಳಗಾದರು. ಆದರೆ ಅಷ್ಟರಲ್ಲಿ ಅಲ್ಲಿಗೆ ಒಬ್ಬ ಮುದುಕ ಬ್ರಾಹ್ಮಣನು ಬಂದನು. ಸಂಕಲ್ಪವು ಮುಗಿದ ಮೇಲೆ ಆತನು ಅಲ್ಲಿಂದ ಎತ್ತಲೋ ಕಾಣದಂತಾದನು. ಸ್ವಾಮಿಗಳು ಆತ ನನ್ನು ಎಷ್ಟು ಹುಡುಕಿಸಿದರೂ ಆತನು ಸಿಗಲಿಲ್ಲ. ಆಗ ಶ್ರೀಗಳ ಭಕ್ತಿಯ ಮಹಿಮೆಯು ಗೊತ್ತಾಗಿ ಎಲ್ಲರಿಗೂ ಆಶ್ಚರ್ಯವಾಯಿತು.

ಈ ಶ್ರೀಗಳ ಕಾಲದಿಂದಲೇ ಮಠದಲ್ಲಿಯ ನಿತ್ಯಕ್ರಮ ಪದ್ಧ

ತಿಯು ವ್ಯವಸ್ಥೆಯಿಂದ ನಡೆಯಲಾರಂಭವಾಗಿ ಈ ವರೆಗೂ ಅದು ನಡೆಯುತ್ತಲಿದೆ. ವಿವಿಧ ಸೇವೆಗಳಿಗೆಂದು ೬೪ ಬ್ರಾಹ್ಮಣರು ನಿಯಮಿಸಲ್ಪಟ್ಟರು. ಇವರೆಲ್ಲರ ಮೇಲೆ ಒಬ್ಬ ಮುಖ್ಯ ಪಾರುಪತ್ಯಗಾರನನ್ನು ಇಡಲಾಯಿತು. ಎಡಬಲ ಸೇವಕರು, ಇಬ್ಬರು ಸೇನಾಪತಿಗಳು, ದ್ವಾರಪಾಲಕರು ಮುಂತಾದವರ ವ್ಯವಸ್ಥೆಯಾಯಿತು. ರೂಪಾಲಂಕಾರಗಳೂ ಬೆಳ್ಳಿಬಂಗಾರದ ಉಪಕರಣಗಳೂ ಸುವರ್ಣ ಹಾಗೂ ರತ್ನಖಚಿತ ಛತ್ರಚಾಮರಗಳೂ ತುಪ್ಪದ ದೀಪಗಳೂ ಕುದುರೆಗಳೂ ಗಜಗಳೂ ಆಕಳುಗಳೂ ಮುಂತಾದವುಗಳನ್ನು ಸಂಸ್ಥಾನದಲ್ಲಿ ಇಡಲಾಯಿತು.

ಕೆಳಗೆ ಬರೆದಂತೆ ನಿತ್ಯ ಕ್ರಮಗಳೂ ನಡೆಯತೊಡಗಿದವು. ೧] ಆಮಂತ್ರಣೋತ್ಸವ ೨] ಶ್ರೀಗುರುಪಾದುಕಾರ್ಚನ ೩] ಪಂಚಾಂಗ ಶ್ರವಣ ೪] ಕಾಲಕಾಲಕ್ಕೆ ಸ್ನಾನ ೫] ಜಪ ೬] ವ್ಯಾಖ್ಯಾನ ೭] ನಿರ್ಮಾಲ್ಯವಿಸರ್ಜನೆ ೮] ವ್ಯಾಸರಿಗೆ ನವರತ್ನಾಭಿಷೇಕ ೯] ಕೂರ್ಮಕ್ಷೀರಾಭಿಷೇಕ ೧೦] ದೇವತಾರ್ಚನೆಯ ಕಾಲಕ್ಕೆ ವೇದ ಪಾರಾಯಣ ೧೧] ಸಪ್ತಮಾಲಾರ್ಪಣ ೧೨] ಚಿಕ್ಕ ಅಲಂಕಾರ ಮತ್ತು ಮಹಾನೈವೇದ್ಯಗಳು ೧೩] ನೈವೇದ್ಯ ಜವನಿಕಾ ಹಿಡಿಯುವದು ೧೪] ಬಂಗಾರಬಟ್ಟಲಲ್ಲಿಯ ಸಕ್ಕರೆಯ ನೈವೇದ್ಯ ೧೫] ಪಾನೀಯ ತಾಂಬೂಲಾದಿಗಳ ಸಮರ್ಪಣೆ ೧೬] ವ್ಯಾಸಪೂರ್ವರಿಗೆ ಕನಕಾಭಿಷೇಕ ಆ ಮೇಲೆ ಮೂಲರಾಮವೇದವ್ಯಾಸರನ್ನು ಜನರಿಗೆ ತೋರಿಸುವದು, ತೀರ್ಥವಾದ ಬಳಿಕ ಮುಖ್ಯರಾದವರೊಡನೆ ಶ್ರೀಗಳ ಭೋಜನ, ಇದಲ್ಲದೆ ಸೇರಿದ ಜನಗಳಿಗೆಲ್ಲ ಮಹಾಭೋಜನ, ಮಧ್ಯಾನ್ಹದಲ್ಲಿ ಶಾಸ್ತ್ರವಿಚಾರ ಮುಂತಾದ್ದು, ಸಾಯಂಕಾಲಕ್ಕೆ ನರ್ತನ ಗೀತವಾದ್ಯ ವೇಣುನಾದಗಳೊಡನೆ ಶ್ರೀಹರಿಯನ್ನು ರತ್ನಖಚಿತವಾದ ತೊಟ್ಟಿಲಲ್ಲಿರಿಸಿ ಸೇವೆಮಾಡುವದು, ಬಳಿಕ ಜನರಿಗೆ ಮಂತ್ರಾಕ್ಷತೆ ಮಾಲಾದಿಗಳ ಸಮರ್ಪಣ, ಆ ಮೇಲೆ ದಿನದ ಆಯವ್ಯಯದ ವಿಚಾರ, ಈ ಏರ್ಪಾಡಿನಿಂದ ಆಗ ಸಂಸ್ಥಾನಕ್ಕೆ ರಾಜನೋಲಗದ ಶೋಭೆಯು ಬಂದಿತು.

ಒಮ್ಮೆ ಶ್ರೀಗಳು ಪಾಂಡುರಂಗ ಕ್ಷೇತ್ರದಿಂದ ಸಂಚಾರಕ್ರಮ ದಿಂದ ತುಂಗಭದ್ರೆ ಕೃಷ್ಣವೇಣಿಗಳ ಮಧ್ಯದೇಶದಲ್ಲಿ ತಿರುಗುತ್ತಿರಲು ಸಂಸ್ಥಾನದ ಸಮೀಪದಲ್ಲಿಯೇ ದಿಲ್ಲಿಯ ಚಕ್ರವರ್ತಿಯಾದ ಔರಂಗ ಜೇಬನು ಪರಿವಾರ ವೈಭವದೊಡನೆ ಬಂದಿರುವನೆಂಬುದು ಅವರಿಗೆ ತಿಳಿಯಿತು. ಆಗ ಚಕ್ರವರ್ತಿಯ ಸೇವೆಯಲ್ಲಿರುವ ಅವರ ಶಿಷ್ಯರು ಗಳಿಗೆ ಶ್ರೀಪಾದರ ರಾಯಸಗಳು ಹೋದವು. ರಾಜಸೈನ್ಯದೊಡನೆ ಇದ್ದ **ನಾರೋಭಾಸ್ಕರ**ನಿಗೆ ರಾಯಸವನ್ನು ನೋಡಿ ಬಲು ಸಂತಸ ವಾಯಿತು. ಅವನು ಗುರುಗಳ ರಾಯಸವನ್ನು ತಲೆಯಮೇಲಿಟ್ಟು ಕೊಂಡೇ ಬಾದಶಹನ ಕಡೆಗೆ ಹೋದನು. ಮಠದ ಮಹಿಮೆಯನ್ನು ಬಹು ಭಕ್ತಿಯಿಂದ ಆತನು ಔರಂಗಜೇಬನೆದುರಿನಲ್ಲಿ ಬಣ್ಣಿಸಿ ಹೇಳಿ ದನು. ಇವನ ವರ್ಣನೆಯಲ್ಲಿಯ 'ಶ್ರೀಗಳ ಅಭಿಷೇಕದ ಕಾಲಕ್ಕೆ **ಕೂರ್ಮಮೂರ್ತಿಯು ಸರಿದಾಡುವದು** ' ಎಂಬುದನ್ನು ಕೇಳಿ **ನಾರೋಶಂಕರ**ನೆಂಬವನು ಗಹಗಹಿಸಿ ನಕ್ಕುಬಿಟ್ಟನು. ಇದನ್ನು ನೋಡಿ ನಾರೋಭಾಸ್ಕರನು ತಾನು ಹೇಳಿದುದನ್ನು ಜನರಿಗೆ ಪ್ರತ್ಯಕ್ಷ ವಾಗಿ ತೋರಿಸಬೇಕೆಂದು ಆ ದಿನವೇ ಶ್ರೀಗಳಿಗೆ ಆತಿಥ್ಯಕ್ಕಾಗಿ ಔತಣ ವನ್ನು ಕೊಟ್ಟನು. ಅಭಿಷೇಕದ ಕಾಲಕ್ಕೆ ಕೂರ್ಮವು ಸರಿದಾಡಿದು ದನ್ನು ಕಣ್ಣಾರೆ ಕಂಡು ನಾರೋಶಂಕರನು ಬೆರಗಾದನು. ತಾನು ಸಹವಾಸಿ ಬ್ರಾಹ್ಮಣನಾದರೂ ಮಠಕ್ಕೆ ಬಹು ಮನ್ನಣೆಯನ್ನು ಮಾಡಿ ತನ್ನನ್ನು ಎಲ್ಲರ ಪಂಕ್ತಿಯಲ್ಲಿ ಸೇರಿಸಿಕೊಳ್ಳುವುದೆಂದು ಆತನು ಶ್ರೀಗ ಳನ್ನು ಬೇಡಿಕೊಂಡನು. ಇದು ಸಂಪ್ರದಾಯವಿರುದ್ಧವಾದುದರಿಂದ ಆಗ್ರಹತೊಡಬಾರದೆಂದು ಶಂಕರನಿಗೆ ಬಹು ಬಗೆಯಿಂದ ಹೇಳಲಾ ಯಿತು. ಆದರೂ ಆತನು ಎಲ್ಲರ ಪಙ್ಕ್ತಿಯಲ್ಲಿ ಬಲುಮೆಯಿಂದ ಕುಳಿತೇ ಬಿಟ್ಟನು. ಆಗ ಮಾತ್ರ ಆತನಿಗೆ ದ್ವಾರಪಾಲಕರಿಂದ ಅರ್ಧ ಚಂದ್ರವು ಸಿಕ್ಕಿತು. ಇದರಿಂದ ಆತನು ಸಿಟ್ಟಾಗಿ ರಾಜಾರಾಮನ ಗುರುಗಳು ಜನರ ಮೈಯನ್ನು ಮುದ್ರೆಗಳನ್ನು ಹಾಕಿ ಸುಡುತ್ತಿರುವ ರೆಂದೂ ನನ್ನನ್ನು ಅವರು ಊಟಕ್ಕೆ ಕುಳಿತಾಗ ದಬ್ಬಿಸಿಕೊಟ್ಟರೆಂದೂ ಬಾದಶಹನೆದುರಿನಲ್ಲಿ ದೂರಿದನು. ಶ್ರೀಗಳು ತಮ್ಮಲ್ಲಿದ್ದ ಬೆಲೆಯುಳ್ಳ ಒಡವೆಗಳೊಡನೆ ಬಾದಶಹನ ಬಳಿಗೆ ದಯಮಾಡಿಸಬೇಕೆಂಬ ಔರಂಗ

ಜೇಬನಿಂದ ಆಗಲೇ ಶ್ರೀಗಳಿಗೆ ಬರೆದು ಹೋಯಿತು. ಸೈನಿಕರ ಒಂದು ತಂಡವೇ ಶ್ರೀಗಳ ಶೋಧನೆಗಾಗಿ ಬಂದಿತು. ಆದರೆ ನಾರೋಭಾಸ್ಕರನ ಸಾಧ್ವಿಯಾದ ಹೆಂಡತಿ **ಸಾವಿತ್ರಿಬಾಯಿಯು** ಶ್ರೀಗಳನ್ನು ಅವರ ಒಡವೆಗಳೊಡನೆ ಅಡಗಿಸಿಟ್ಟು ಭಿಕ್ಷುಕರಲ್ಲಿ ಬೆಲೆಯುಳ್ಳ ಒಡವೆಗಳೆಲ್ಲಿಂದ ಬಂದಾವು ? ಎಂದು ಸೈನಿಕರನ್ನು ಬೆದರಿಸಿ ಕಳುಹಿಬಿಟ್ಟಳು. ಆಗ ಸೈನಿಕರು ತಿರುಗಿ ಹೋದರು. ಮರುದಿನ ಓಲಗದಲ್ಲಿ ತನ್ನ ವೈರಿಯ ಗುರುವನ್ನು ಮನ್ನಿಸಿ ನಾರೋಶಂಕರನನ್ನು ಅವರಿಂದ ಅಪಮಾನಗೊಳಿಸಿದುದಕ್ಕೆ ಕಾರಣವೇನೆಂದು ಬಾದಶಹನು ನಾರೋಭಾಸ್ಕರನನ್ನು ಗದ್ದರಿಸಿ ಕೇಳಿದನು. ಆಗ ನಾರೋಭಾಸ್ಕರನು ಶ್ರೀಗಳು ರಾಜಾರಾಮನಿಗಲ್ಲದೆ ವೈಷ್ಣವರೆಲ್ಲರಿಗೂ ಮುಖ್ಯ ಗುರುಗಳೆಂದೂ ಮಠದ ಮಹಿಮೆಯು ಅಗಾಧವಾಗಿದೆಯೆಂದೂ ಕಡಿಮೆಯ ಕುಲದ ನಾರೋಶಂಕರನು ಶ್ರೇಷ್ಠರ ಪಂಙ್ತಿಯಲ್ಲಿ ಕೂಡಲು ಆಗ್ರಹತೊಟ್ಟದ್ದಕ್ಕೆ ಅವನನ್ನು ದಬ್ಬಿಸಲಾಯಿತೆಂದೂ ಎಲ್ಲ ಸವಿಸ್ತರವಾದ ವಿಷಯವನ್ನು ಬಾದಶಹನಿಗೆ ತಿಳಿಹೇಳಿ ಎಲ್ಲರಿಗೂ ಅವರವರ ಧರ್ಮದಂತೆ ನಡೆಯಗೊಡುವ ಸಮದೃಷ್ಟಿಯನ್ನು ತಂದುಕೊಳ್ಳಿರೆಂದು ಆತನನ್ನು ಬೇಡಿಕೊಂಡನು. ಆಗ ಬಾದಶಹನು ಇದಕ್ಕೆ ಒಪ್ಪಿ ಶ್ರೀಗಳ ದರ್ಶನವನ್ನು ತನಗೆ ಮಾಡಿಸೆಂದು ನಾರೋಬಾಸ್ಕರನಿಗೆ ಹೇಳಿದನು. ಪಾದಚಾರಿಗಳಾಗಿ ಶ್ರೀಗಳು ರಾಜನ ಬಿಡಾರಕ್ಕೆ ಹೊರಟರು. ಆಗ ನೋಡುವವರೆಲ್ಲ ಬೀದಿಯಲ್ಲಿ ಅವರಿಗೆ ಕೈಜೋಡಿಸುತ್ತಿದ್ದರು. ಯತಿಗಳು ಔರಂಗಜೇಬನು ಸಿಂಹಾಸನದಲ್ಲಿರುವಾಗ ಆತನಿಗೆ ಕಾಣಿಸಿಕೊಳ್ಳುವುದು ಅನಿಷ್ಟವೆಂದು ಗಾಬರಿಯಾಗಿ ನಡುವೇ ಶ್ರೀಗಳನ್ನು ತಡೆದು ಅವರ ಭಾವಚಿತ್ರವನ್ನು ಮಾತ್ರ ನಾರೋಭಾಸ್ಕರನು ಬಾದಶಹನಿಗೆ ತೋರಿಸಿದನು. ಆಗ ಶ್ರೀರಾಮನು ಧನುರ್ಧಾರಿಯಾಗಿ ಸೈನ್ಯ ಸಮೇತನಾಗಿ ಶ್ರೀಗಳನ್ನು ಸಲಹುತ್ತ ನಿಂತಿದ್ದುದು ಔರಂಗಜೇಬನಿಗೆ ಕಾಣಿಸಿತು. ಆಗಲೇ ಆತನು ಬೆದರಿ ಅವರನ್ನು ಮರಳಿ ಅವರ ಮನೆಗೆ ಕಳುಹಿಸುವುದಾಗಿ ನಾರೋಭಾಸ್ಕರನಿಗೆ ಅಪ್ಪಣೆ ಮಾಡಿದನು. ಚಕ್ರವರ್ತಿಯ ಮುದ್ರೆಯುಳ್ಳ ತಾಮ್ರಶಾಸನವನ್ನು ಕೊಟ್ಟು ವಾದ್ಯವೈಭವಗಳೊಡನೆ ಶ್ರೀಗಳನ್ನು ತಿರುಗಿ ಕಳಿಸುವುದು

ಯೋಗ್ಯವೆಂದು ನಾರೋಭಾಸ್ಕರನು ಬಾದಶಹನಿಗೆ ತಿಳಿಹೇಳಿ ಆತ ನಪ್ಪಣೆಯಂತೆ ಶ್ರೀಗಳನ್ನು ಕರಿಯ ಮೇಲಂಬಾರಿಯಲ್ಲಿ ಸಕ್ಕರೆಯನ್ನು ಹಂಚುತ್ತ ಮೆರೆವಣಿಗೆಯಿಂದ ತನ್ನ ಮನೆಗೆ ಕರೆದೊಯ್ದನು. ಶ್ರೀಪಾದರ ಆ ದಿನದ ಆತಿಥ್ಯವು ಆತನಲ್ಲಿಯೇ ಆಯಿತು.

ಒಂದೆರಡು ದಿನ ಅಲ್ಲಿಯೇ ಇದ್ದು ಶ್ರೀಗಳು ಮುಂದೆ ಪಯಣ ವನ್ನು ಬೆಳೆಸಿದರು. ಅನೇಕ ಕಡೆಗೆ ಮಾರ್ಗದಲ್ಲಿ ದ್ವೈತಮತ ಪ್ರಸಾರಕಾರ್ಯವೂ ಅವರಿಂದ ಆಯಿತು. ಮುಂದೆ ದೇಹಾಯಾಸ ವಾಗಿರಲು ಶ್ರೀಗಳು **ಕೊಲ್ಹಾಪುರ ಕೃಷ್ಣಾಚಾರ್ಯ**ರೆಂಬವರನ್ನು ಕರೆಯಿಸಿಕೊಂಡು ಅವರಿಗೆ ಆಶ್ರಮಕೊಟ್ಟರು. **ಶ್ರೀಸತ್ಯಪೂರ್ಣ** ರೆಂಬ ಹೆಸರನ್ನಿಟ್ಟು ಸಂಸ್ಥಾನವನ್ನು ಅವರಿಗೆ ಒಪ್ಪಿಸಿ ತಾವು ಕಾವೇರೀ ತೀರದ **ನಾಚಾರಗುಡಿ**ಯೆಂಬಲ್ಲಿ ಶಕೆ ೧೬೨೮ನೇ ವ್ಯಯ ಸಂವತ್ಸ ರದ ಜೇಷ್ಠ ಶುದ್ಧ ೧೪ಕ್ಕೆ ವೃಂದಾವನಸ್ಥರಾದರು. **ಮೇಧಾವೀ** ಅಂಶರೆಂದಿವರ ಖ್ಯಾತಿ.

## ೨೨ ಶ್ರೀಸತ್ಯಪೂರ್ಣತೀರ್ಥರು.



ಪಟ್ಟ:- ೧೪-೩-೧೬೨೮ನೇ ವ್ಯಯದಿಂದ ೧೭-೩-೧೬೪೮ನೇ ಪರಾಭವದವರೆಗೆ

ಇವರ ಪೂರ್ವಾಶ್ರಮದ ಹೆಸರು ಕೃಷ್ಣಾಚಾರ್ಯರಷ್ಟೇ ಇವರು ವ್ಯಾಸಮನೆತನದವರೆಂದು ಹೇಳಿಕೆಯಿದೆ. ಗುರುಗಳಿಂದ ಸಂಸ್ಥಾನವನ್ನು ತಕ್ಕೊಂಡು ಇವರು ಶ್ರೀರಾಮರ ಪೂಜಾದಿಗಳಿಂದ ನೋಡುವವರ ಕಣ್ಮನಗಳನ್ನು ತಣಿಸುತ್ತ ಸಂಚಾರಕ್ಕೆಂದು ಹೊರ ಟರು. ಒಮ್ಮೆ ಒಂದೂರಲ್ಲಿ **ಕೃಷ್ಣಾಜಿಪಂತ**ನೆಂಬ ದರಿದ್ರ ಕುಂಟನು ಭಕ್ತಿಯಿಂದ ಪಾದಪೂಜೆ ಮಾಡಿ, ಕೊಟ್ಟ ಬೆಳ್ಳಿಯ ಪ್ರಣತಿಯಿಂದ ಶ್ರೀಗಳು ಸಂತುಷ್ಟರಾಗಿ ಅವನ ಮೇಲೆ ಮಂತ್ರಾಕ್ಷತೆಯ ಮಳೆಯನ್ನೇ ಕರೆದರು. ಈ ಅನುಗ್ರಹದಿಂದ ಅವನು ಎದುತ್ತೇರುತ್ತ ಮಂತ್ರಿಯ ಪದವನ್ನು ಪಡೆದನು. ಮುಂದೆ ಇವನ ಮನೆಗೆ ಮತ್ತೊಮ್ಮೆ ಶ್ರೀಗಳು

ದಯಮಾಡಿಸಿದಾಗ ಅನೇಕ ಬಂಗಾರದ ಆಭರಣಗಳೂ ಪಚ್ಚಗಳೂ ಮುತ್ತುರತ್ನಗಳೂ ೧ ಮಣ ಭಾರದ ಬಂಗಾರದ ಸರಪಳಿಯೂ ಮಠಕ್ಕೆ ಇವನಿಂದ ಅರ್ಪಿಸಲಾಯಿತು. ಅವೆಲ್ಲವುಗಳನ್ನು ಈಗಲೂ ಅವನ ಹೆಸರಿನಿಂದ ನಾವು ಮಠದಲ್ಲಿ ನೋಡಬಹುದು.

ಮುಂದೆ ಶ್ರೀಗಳು ವೇಂಕಟಾಚಲಕ್ಕೆ ಪಯಣವನ್ನು ಬೆಳೆಸಿದರು. ಅಲ್ಲಿಗೆ ತಲುಪಿ ಶಿಷ್ಯಸಮುದಾಯದ ನಿಷ್ಠೆಯನ್ನು ಪರಿಕಿಸಲೆಂದು ಶ್ರೀಪಾದರು:- "ನಿಷೇಕಪ್ರಸ್ಥದ ವರೆಗೆ ಬ್ರಹ್ಮಚರ್ಯೆಯಿಂದಿದ್ದು ಮುಂದೆ ಈ ವರೆಗೂ ದಿನತ್ರಯವನ್ನು ಬಿಡದಲೇ ಪಾಲಿಸಿದವರಾರಾದರೂ ಇಲ್ಲಿದ್ದರೆ ಮುಂದೆ ಬನ್ನಿ; ಪರ್ವತದ ಬುಡದಲ್ಲಿ ಆಣೆಯನ್ನಿಟ್ಟುಕೊಂಡು ಸಾಷ್ಟಾಂಗವೆರಗಿ ನನಗೆ ಕೈಕೊಡಿ. ಅವರ ಕೈಹಿಡಿದುಕೊಂಡು ನಾನು ಪರ್ವತಾರೋಹಣ ಮಾಡಲೆಂದಿರುವೆನು" ಎಂದಂದರು. ಈ ಮಾತಿಗೆ ಅವರೆಲ್ಲ ಶಿಷ್ಯರೊಳಗಿಂದ **ಗಾರ್ಲವಾಡ ರಾಮಾಚಾರ್ಯ**ರೆಂಬೊಬ್ಬರೇ ಮುಂದಾದರು. ಅವರ ಕೈಹಿಡಿದುಕೊಂಡು ಶ್ರೀಗಳು ಬೆಟ್ಟವನ್ನೇರುವಾಗ ಆಚಾರ್ಯರು ಏನೊಂದು ಗ್ರಂಥವನ್ನು ಪಠಿಸುತ್ತ ಹೋಗಬೇಕೆಂದು ಬಯಸಿದರು. ಆ ಕೂಡಲೇ ಅಚಾರ್ಯರ ಸುಧಾಪಠಣಕ್ಕೆ ಆರಂಭವಾಯಿತು. ಏಳುತ್ತ ಕೂಡುತ್ತ ಸಾಯಂಕಾಲಕ್ಕೆ ಶ್ರೀನಿವಾಸದೇವರ ಗುಡಿಯ ಮಹಾದ್ವಾರಕ್ಕೆ ಶ್ರೀಗಳೂ ಆಚಾರ್ಯರೂ ಬಂದರು. ಇಷ್ಟು ಹೊತ್ತಿಗೆ ಆಚಾರ್ಯರ ೨೪೦೦೦ ಸುಧೆಯು ಮುಗಿದು ಹೋಗಿತ್ತು. ಪುಸ್ತಕವನ್ನು ಹಿಡಿದುಕೊಂಡು ನೋಡುತ್ತಿದ್ದ ಶಿಷ್ಯ ಸಮೂಹವೆಲ್ಲ ಆಚಾರ್ಯರ ಪಾಠಕ್ಕೆ ಬೆರಗಾಗಿ ಅವರಿಗೆ ಸಾಷ್ಟಾಂಗವೆರಗಿದರು; ಮತ್ತು ಇಂತಹ ವಿದ್ವನ್ಮಣಿಯನ್ನು ಸಂಸ್ಥಾನದ ಮಹಾಕೂಟದಲ್ಲಿ ಸೇರಿಸಿಕೊಳ್ಳಬೇಕೆಂದು ಶ್ರೀಪಾದರನ್ನು ಆಗ್ರಹದಿಂದ ಬೇಡಿದರು.

ಇದಕ್ಕೆ ಶ್ರೀಗಳು ದೇವರ ಒಲಿಮೆಯಿದ್ದ ಹಾಗೆಯೇ ಆಗಿತೀರುವುದೆಂದು ನುಡಿದು ಮುಂದೆ ಹೊರಟರು. ಅಷ್ಟರಲ್ಲಿ ಒಂದು ಗಿಳಿಯು ಹಾರಿ ಬಂದು ಮಹಾದ್ವಾರದ ಮೇಲೆ ಕುಳಿತು. " ಇದೇ ಸತ್ಯ, ಸತ್ಯ, ಸತ್ಯ'ವೆಂದು ಮೂರು ಸಲ ನುಡಿಯಿತು. ಶುಕಾಚಾರ್ಯರು

ನುಡಿಯುತ್ತಾರೆಂದು **ರಾಮಾಚಾರ್ಯ**ರು ಆ ಗಿಳಿಗೆ ಸಾಷ್ಟಾಂಗವನ್ನು ಹಾಕಿದರು. ಗಿಳಿಯು ಅಲ್ಲಿಯೇ ಮಾಯವಾಯಿತು.

ಮುಂದೆ ನಾಲ್ಕಾರು ದಿನ ಮಹಾಂತನ ಪೂಜೆಯನ್ನು ಸ್ವೀಕರಿಸುತ್ತಿದ್ದ ಶ್ರೀಗಳು ತಿರುಗಿ ಸಂಚಾರಕ್ಕೆ ಹೊರಟರು. ಶ್ರೀಗಳ ಮುದ್ರಾಧಾರಣೆಮಂತ್ರಾಕ್ಷತೆಗಳೂ ಸಂಚಾರದಲ್ಲಿ ಚೆನ್ನಾಗಿ ಸಾಗಿದ್ದವು. ಒಮ್ಮೆ ಅವರಿಗೆ ಮೈಯಲ್ಲಿ ಅಸ್ವಸ್ಥನಾಯಿತು. ಆಗಲೇ ರಾಮಾಚಾರ್ಯಗೆ ಆಶ್ರಮವು ಬಂದಿತು. **ಸತ್ಯಪ್ರಿಯ**ರೆಂದು ಹೆಸರಿಟ್ಟು ಶ್ರೀಗಳು ಅವರಿಗೆ ಸಂಸ್ಥಾನವನ್ನು ಒಪ್ಪಿಸಿದರು. ಆದರೆ ಮುಂದೆ ಅವರಿಗೆ ದೇಹದಲ್ಲಿ ಆರೋಗ್ಯವುಂಟಾಗಲು ಶ್ರೀಪಾದರು ಸತ್ಯಪ್ರಿಯರಿಗೆ ಚಿಕ್ಕ ಸಂಸ್ಥಾನವನ್ನು ಕೊಟ್ಟು ಅವರನ್ನು ಉತ್ತರಕ್ಕೆ ಕಳುಹಿದರು.

ಮತ್ತೊಮ್ಮೆ ದೇಹಾಯಾಸವುಂಟಾದಾಗ ಶ್ರೀಗಳು ಹತ್ತಿರಿದ್ದ **ಬಾಳಾಚಾರ್ಯ**ರೆಂಬವರಿಗೆ ಆಶ್ರಮವನ್ನು ಕೊಟ್ಟು ಅವರಿಗೆ ಸಂಸ್ಥಾನಕ್ಕೆ ಪಟ್ಟಗಟ್ಟಿದರು. ಆ ಮೇಲೆ ಅವರು **ಕೃಷ್ಣಾತೀರದ ಕೋಲಪುರ**ವೆಂಬಲ್ಲಿ ೧೬೪೮ನೇ ಪರಾಭವ ಕೃಷ್ಣ ೨ ದಿನ ನಾರಾಯಣಧ್ಯಾನರತರಾದರು. ಇವರು **ಪರಾಶರಾಂಶ**ರೆಂದು ಜನರಲ್ಲಿ ಪ್ರಸಿದ್ಧಿ.

## ೨೩ ಶ್ರೀ ಸತ್ಯವಿಜಯ ತೀರ್ಥರು.



**ಪಟ್ಟ:-೧೭-೩-೧೬೪೮ನೇ ಪರಾಭವದಿಂದ ೨೬-೧-೧೬೫೯ನೇ ಪಿಂಗಳದ ವರೆಗೆ**

ಇವರ ಪೂರ್ವಾಶ್ರಮದ ಹೆಸರು **ಬಾಳಾಚಾರ್ಯ**ರು. ಇವರಿಗೆ ಮೊದಲು, ಪೀಠಕ್ಕೆ ಆಶ್ರಮವನ್ನು ಹೊಂದಿದ **ಶ್ರೀಸತ್ಯಪ್ರಿಯ**ರು, **ಶ್ರೀಸತ್ಯಪೂರ್ಣ**ರು ವೃಂದಾವನಸ್ಥರಾಗುವ ಕಾಲಕ್ಕೆ ದೂರದಲ್ಲಿದ್ದುದರಿಂದ ಪಟ್ಟವು ಇವರಿಗೆ ಬಂದಿತು. ಆದರೆ ಹಿಂದಿನಿಂದ ಶ್ರೀಸತ್ಯಪ್ರಿಯರು ಬಂದು ಈ ಸಂಗತಿಯನ್ನು ಕಂಡು ಬೆರಗಾದರು. ಮಠದ ಸಚ್ಛಿಷ್ಯರೆಲ್ಲರೂ ಕೂಡಿ ದಂಡವ್ಯತ್ಯಾಸದಿಂದ, ವಯದಿಂದ ಜೇಷ್ಠರಾದ **ಶ್ರೀಸತ್ಯವಿಜಯ**ರ ತರುವಾಯದಲ್ಲಿ ಶ್ರೀರಾಮರ ಪೂಜೆಯನ್ನು ಶ್ರೀಸತ್ಯಪ್ರಿಯರು ಮಾಡುವುದೆಂದು ಬೇಡಿಕೊಂಡರು. ಅದಕ್ಕವರು

ಒಪ್ಪಿ ಚಿಕ್ಕ ಸಂಸ್ಥಾನದೊಂದಿಗೆ ಸಂಚಾರಕ್ಕೆಂದು ಹೊರಟುಹೋದರು. ಇತ್ತ ಶ್ರೀಸತ್ಯವಿಜಯರೂ ದುರ್ವಾದಿಗಳ ಖಂಡನೆಯನ್ನು ಮಾಡುತ್ತ ಸಂಚಾರಕ್ರಮದಿಂದ ಆರಣಿಗೆ ಬರಲು ಅಲ್ಲಿಯ ರಾಜನು ಕೆಲವು ಗ್ರಾಮಗಳನ್ನು ಉಂಬಳಿಯಾಗಿ ಕೊಟ್ಟು ಶ್ರೀಗಳಿಗೆ ತನ್ನ ರಾಜ್ಯದಲ್ಲಿಯೇ ಶ್ರೀರಾಮರ ಪೂಜೆ ಮಾಡುತ್ತಿರುವುದೆಂದು **ಬೇಡಿಕೊಂಡನು.** ಶ್ರೀಗಳು ಸಮ್ಮತಿಸಿ ಅಲ್ಲಿಯೇ ಕೆಲ ದಿನಗಳಿದ್ದರು. ಆ ಮೇಲೆ ಅವರಿಗೆ ದೇಹಾಯಾಸವಾಗಲು ಶ್ರೀಸತ್ಯಪ್ರಿಯರು ಬರುವತನಕ ಶ್ರೀರಾಮರನ್ನು ಮುಟ್ಟದಿರೆಂದು ಬಿಗಿಯಾಗಿ ಹೇಳಿ ಶ್ರೀಗಳು ಅವರನ್ನು ರಾಜನಿಗೆ ಒಪ್ಪಿಸಿದರು. ಮತ್ತು ತಮಗಾಗಿ ವೃಂದಾವನವನ್ನು **ಕೌಂಡಿಣ್ಯ** ನದೀ ತೀರದಲ್ಲಿಯೇ ಸಿದ್ಧಪಡಿಸುವುದೆಂದು ಹೇಳಿದರು. ಅಡವಿಯಾದುದರಿಂದ ಪೂಜೆಗೆ ಅನನುಕೂಲವಾಗಬಹುದೆಂದು ರಾಜನು ಸಂಶಯಗೊಂಡನು. ಶ್ರೀಗಳು ಅಲ್ಲಿಯೇ ನಗರವಾದೀತೆಂದರು. ಶ್ರೀಗಳು ಅಲ್ಲಿಯೇ ನಾರಾಯಣಧ್ಯಾನಪರರಾದರು. ಈ ಸ್ಥಳದಲ್ಲಿಯೇ ಈಗ **ಸತ್ಯವಿಜಯವೆಂಬ ನಗರವು** ಶೋಭಿಸುತ್ತಿದೆ. ಇವರು **ಜಮದಗ್ನಿಯ** ಅಂಶರು ಎಂದು ಹೇಳುತ್ತಾರೆ.

## ೨೪ ಶ್ರೀಸತ್ಯಪ್ರಿಯತೀರ್ಥರು



ಪಟ್ಟ:- ೨೬-೧-೧೬೫೯ನೇ ಪಿಂಗಳದಿಂದ ೧೩-೧-೧೬೬೬ನೇ ರಕ್ತಾಕ್ಷಿಯವರೆಗೆ

ಇವರ ಪೂರ್ವಾಶ್ರಮದ ಹೆಸರು **ಗಾರ್ಲವಾಡದ ರಾಮಾಚಾರ್ಯ**ರು. ಇವರು ಪಟ್ಟಕ್ಕೆ ಬಂದು ಸಂಚಾರಕ್ಕೆ ಆರಂಭಿಸಿದರು. ಒಮ್ಮೆ ಸಂಚಾರದಲ್ಲಿ ದಕ್ಷಿಣಾಧೀಶನು ಮಹಾ ಸೈನ್ಯದೊಡನೆ ಬರುವುದನ್ನು ಶ್ರೀಗಳು ಕಂಡರು. ಆ ದಂಡಿನಲ್ಲಿಯ ಪ್ರಮುಖರಾದ ವಿಸಾಜಿಪಂತರೂ ನಾರೋಪಂತರೂ ಶ್ರೀಗಳನ್ನು ಬಹುವಾಗಿ ಮನ್ನಿಸಿದರು. ಆಗ ಬಂದಿದ್ದ ಮೊದಲನೇ ಬಾಜೀರಾಯನು ರಾಮನಗರವೆಂಬ ಗ್ರಾಮವನ್ನು ಉಂಬಳಿ ಹಾಕಿಕೊಟ್ಟು ಎಲ್ಲ ಅರಸರೂ ಶ್ರೀಗಳನ್ನು ಮನ್ನಿಸುವುದೆಂದು ಶಾಸನವನ್ನು ಬರೆದುಕೊಟ್ಟನು

ಮುಂದೆ ಶ್ರೀಗಳು ರಾಯಚೂರಿಗೆ ಬಂದರು. ಕರ್ನಾಟಕದಲ್ಲಿ ದಿಗ್ವಿಜಯಕ್ಕಾಗಿ ಹೊರಟ **ಫತ್ತೇಸಿಂಗ**ನೆಂಬ ಸರದಾರನು ಇವರನ್ನು ಭಯಭಕ್ತಿಯಿಂದ ಅನುಗ್ರಹಿಸಬೇಕೆಂದು ಬೇಡಿಕೊಳ್ಳಲು ಶ್ರೀಗಳು ಆತನನ್ನು ಜಯಶಾಲಿಯಾಗುವಂತೆ ಆಶೀರ್ವದಿಸಿದರು.

ಆ ಮೇಲೆ ಮಠವು **ಮೇಲುಕೋಟೆ**ಗೆ ಬಂದಿತು. ಅಲ್ಲಿಯ ಅರಸನು ಇವರನ್ನು ಬಹು ವೈಭವದಿಂದ ಬರಮಾಡಿಕೊಂಡನು. ಅಲ್ಲಿ ಶ್ರೀರಾಮರ ಪೂಜೆಯಾಗಿ ನೈವೇದ್ಯಾದಿಗಳು ಮುಗಿದ ಮೇಲೆ ಶ್ರೀಗಳು ಊಟ ಮುಗಿಸಿಕೊಂಡು ಶ್ರೀನೃಸಿಂಹನ ದರ್ಶನಕ್ಕೆಂದು ಪರ್ವತವನ್ನು ಏರಿದರು. ಆದರೆ ಅಷ್ಟರಲ್ಲಿ ದೇಗುಲದ ಬಾಗಿಲಕ್ಕೆ ಬೀಗವು ಬಿದ್ದಿತ್ತು. ಆದರೆ ಶ್ರೀಗಳ ಕರಸ್ಪರ್ಶದಿಂದ ಆ ಬೀಗವು ಕಳಚಿಬಿತ್ತು. ಈ ಸಂಗತಿಯನ್ನು ಸಂಗಡಲೇ ಇದ್ದ ಅರಸನು ಕಂಡು ಅವರ ಮಹಿಮೆಗೆ ಬೆರಗಾಗಿ ಅವರನ್ನು ಬಹು ದ್ರವ್ಯದಿಂದ ಮನ್ನಿಸಿದನು.

ಇಲ್ಲಿಂದ ಶ್ರೀಗಳು **ಶ್ರೀರಂಗ**ಕ್ಕೆ ಬಂದರು. ಅಲ್ಲಿಯ ಅರಸನು ಇವರನ್ನು ಆದರದಿಂದ ಬರಮಾಡಿಕೊಂಡನು. ಶ್ರೀರಾಮರ ಪೂಜೆಯು ಕೆಲ ದಿನ ನಡೆದು ಶ್ವೇತಛತ್ರ, ರತ್ನಸಂಪುಟ, ಬಂಗಾರ ಬೆಳ್ಳಿಯ ಬೆತ್ತಗಳು ರಾಜನಿಂದ ಮಠಕ್ಕೆ ಆಗ ದೊರೆತವು.

ಮುಂದೆ ಗ**ಡ್ವಾಲಿಯ** ಮೇಲಿಂದ ಶ್ರೀಗಳು **ಪಡರಣ್ಯ**ಕ್ಕೆ ಬಂದರು. ಅಲ್ಲಿದ್ದ ಅರ್ಕಾಟ ನವಾಬರ ಮಂತ್ರಿಯಾದ **ಕೃಷ್ಣಾಜಿಪಂತ**ನು ಇವರಿಗೆ ಸ್ವರ್ಣಾಭಿಷೇಕವನ್ನು ಮಾಡಿಸಿ ಬಂಗಾರದ ಮಣಿಯನ್ನೂ ರತ್ನವಜ್ರಖಚಿತವಾದ ಸಂಪುಟವನ್ನೂ ಅನೇಕ ವಸ್ತ್ರಾಭರಣಗಳನ್ನೂ ಸಮರ್ಪಿಸಿದನು. ಬಳಿಕ ಶ್ರೀಪಾದರು ಕಡಪೆಯ ಕಡೆಯಿಂದ ಬಂಕಾಪುರದ ಪ್ರದೇಶಕ್ಕೆ ಬಂದು ಅಲ್ಲಿಂದ ಮತ್ತೆ ಕೆಳಗೆ ನಡೆದರು. ದಾರಿಯಲ್ಲಿ ಮುರಾರಿರಾಯನೆಂಬವನಿಂದ ಪೂಜಿತರಾದರು. ಮುಂದೆ ಶ್ರೀರಂಗಕ್ಕೆ ಬಂದು ಅಲ್ಲಿಯೇ ಕೆಲವು ದಿನ ನಿಂತರು. ಫತ್ತೇಸಿಂಗ ಸರದಾರನಿಗೆ ಜಯ ದೊರೆತಿದ್ದುದರಿಂದ ಆತನ ಸೈನ್ಯದವರೆಲ್ಲರೂ ಶ್ರೀಗಳನ್ನು

ಪೂಜಿಸಿದರು. ರಾಜನು ೬ ಗ್ರಾಮಗಳನ್ನೇ ಉಂಬಳಿಯಾಗಿ ಕೊಟ್ಟು ಬಿಟ್ಟನು. ಅಲ್ಲದೆ ಛತ್ರೇಸಿಂಗನು ಎರಡೂರುಗಳನ್ನು ಅರ್ಪಿಸಿದನು. ಅದೇ ಊರಲ್ಲಿ ಒಬ್ಬ ರಾಮಾನುಜೀಯ ಪಂಡಿತನನ್ನು ವ್ಯಾಕರಣ ದಲ್ಲಿ ಶ್ರೀಗಳು ಗೆದ್ದರು.

ನಡುವೆ ಸಂಚಾರದಲ್ಲೊಮ್ಮೆ **ರಾಯಚೂರ ಹರಿಯಾಚಾರ್ಯ**ರೆಂಬವರು ಬಡತನದಿಂದ ಬೆಂದು ಕುಟುಂಬ ಸಹಿತವಾಗಿ ಶ್ರೀಗಳನ್ನು ಕಾಣಿಸಿಕೊಂಡರು. ಅವರ ಮಕ್ಕಳಲ್ಲಿಯ **ರಾಮಾಚಾರ್ಯ**ರೆಂಬ ವರ ಬುದ್ಧಿಗೆ ಶ್ರೀಗಳು ಬೆರಗಾದರು. ಆದ್ದರಿಂದ ಅವರನ್ನು ಶ್ರೀ ಪಾದರು ತಮ್ಮ ಸನ್ನಿಧಿಯಲ್ಲಿರಿಸಿಕೊಂಡು ಅವರಿಗೆ ಶಾಸ್ತ್ರವನ್ನು ಪಠಣ ಮಾಡಿಸಿದರು. ಅವರ ವಿವಾಹವಾಯಿತು. ಶ್ರೀಗಳ ಅನು ಗ್ರಹದಿಂದ ಅವರಿಗೆ ಎರಡು ಮಕ್ಕಳಾದವು. ಇಷ್ಟರಲ್ಲಿ ಶ್ರೀಗಳಿಗೆ ದೇಹಾಯಾಸವುಂಟಾಯಿತು.

ಆಗೊಂದು ಸೋಜಿಗದ ಸಂಗತಿಯು ಜರುಗಿತು. ಆಗ ಮಠದಲ್ಲಿ **ಪಾಂಡುರಂಗೀ ಆಚಾರ್ಯ**ರು ಘನವಿದ್ವಾಂಸರಾಗಿದ್ದರು. ಒಂದು ದಿನ ಅವರು ತಮ್ಮ ವೈಭವದೊಡನೆ ಪೂಜೆಯನ್ನು ನಡೆಸಿದ್ದರು. ಅವರ ಹತ್ತರದಲ್ಲಿಯೇ ಬಡ ರಾಮಾಚಾರ್ಯರು ಶಾಲಗ್ರಾಮವನ್ನೂ ಸಣ್ಣದೊಂದು ಶಂಖವನ್ನೂ ಇಟ್ಟುಕೊಂಡು ಪೂಜೆಗೆ ಕುಳಿತು ಮುಸುಕಿ ನಲ್ಲಿ ಜಪವನ್ನು ಮಾಡುತ್ತಿದ್ದರು. ಈ ಬಡ ಆಚಾರ್ಯನು ಏನು ಮಾಡುತ್ತಾನೋ ನೋಡುವುದೆಂಬ ಕುತೂಹಲದಿಂದ ಪಾಂಡುರಂಗೀ ಆಚಾರ್ಯರು ರಾಮಾಚಾರ್ಯರ ಶಾಲಗ್ರಾಮದ ಕಡೆಗೆ ಕಣ್ಣುತಿರು ಗಿಸಿದರು. ಆಗವರಿಗೆ ಒಂದು ಭಯಂಕರವಾದ **ಶ್ವೇತ ವರಾಹ**ವು ಅಲ್ಲಿ ಕಾಣಿಸಿಕೊಂಡಿತು. ಆಗ ಆಚಾರ್ಯರು ಬೆದರಿ ಬೇರೆಯವರನ್ನು ಕೂಗಿ ಕರೆಯಲಾರಂಭಿಸಿದರು. ಆಗ ರಾಮಾಚಾರ್ಯರು ಮುಸುಕು ತೆರೆಯಲು ವರಾಹವು ಅದೃಶ್ಯವಾಯಿತು.

ಕೂಡಲೇ ರಾಮಾಚಾರ್ಯರು ಯಾರೊಡನೆಯೂ ಮಾತನಾಡ ದಲೇ ಶ್ರೀಗಳಿದ್ದೆಡೆಗೆ ಬಂದರು. ಆಗ ಶ್ರೀಗಳು ಅಂತ್ಯಾವಸ್ಥೆಯಲ್ಲಿ ದ್ದರು. ಬಡ ರಾಮಾಚಾರ್ಯನು ಬಂದಿರುವನೆಂದು ಶಿಷ್ಯರು ಶ್ರೀಗಳಿಗೆ

ತಿಳಿಸಿದರು. ಶಯ್ಯಾಸನದಲ್ಲಿಯೇ ಶ್ರೀಪಾದರು ಕಂದೆರದು ನೋಡಿ ಆಚಾರ್ಯರಿಗೆ ಫಲಮಂತ್ರಾಕ್ಷತೆಗಳನ್ನು ಕೊಟ್ಟು "ಮಠದ ಮಹಾತ್ಮೆಯನ್ನು ಬೆಳೆಸಿ ಜ್ಞಾನಿಯಾಗಿ ಮಠದ ಏಳ್ಗೆಯನ್ನು ಹೆಚ್ಚಿಸು" ಎನ್ನುತ್ತ ಎರಡೂ ಕೈಗಳನ್ನು ರಾಮಾಚಾರ್ಯರ ತಲೆಯ ಮೇಲಿಟ್ಟು "**ಸತ್ಯ ಬೋಧ**'' ಎಂದು ಉಚ್ಚರಿಸಿ ನಾರಾಯಣಧ್ಯಾನಪರರಾದರು. ಇವರು ವೃಂದಾವನಸ್ಥರಾದದ್ದು ೧೬೬೬ನೇ ಚೈತ್ರ ಶುದ್ಧ ೧೩ ದಿನ **ವೇದವತೀ ನದೀ ತೀರದ ಮಾನಾಮಧು**ರಿಯಲ್ಲಿ. **ಶೇಷಾಂಶ**ರೆಂದು ಇವರ ಪ್ರಸಿದ್ಧಿಯಿದೆ.

## ೨೫ ಶ್ರೀ ಸತ್ಯಬೋಧತೀರ್ಥರು



ಪಟ್ಟ:- ೧೩-೧-೧೬೬೬ನೇ ರಕ್ತಾಕ್ಷಿಯಿಂದ ೧೬-೧೨-೧೭೦೫ನೇ ಶೋಭನದವರೆಗೆ

ಹಿಂದಿನಂತೆ **ರಾಮಾಚಾರ್ಯ**ರು ಪಟ್ಟವನ್ನು ಪಡೆದ ಕೂಡಲೇ ವಾದ್ಯವೈಭವಾದಿಗಳ ಗಡನೆಯಿಂದ '**ಶ್ರೀಸತ್ಯಬೋಧ**'ರೆಂಬ ಘೋಷಣೆಯು ಎಲ್ಲೆಡೆಯಲ್ಲಿಯೂ ನಡೆಯಿತು. ಆದರೆ ಪಾಂಡುರಂಗಿಯ ಆಚಾರ್ಯರು ಸಂಸ್ಥಾನವು ತಮಗೆ ಸಿಗಲಿಲ್ಲವೆಂದು ಮನದಲ್ಲಿಯೇ ಮರುಗಿದರು. ಈ ಲಕ್ಷಣವನ್ನರಿದು ಶ್ರೀಗಳು ಆಚಾರ್ಯರನ್ನು ಸನ್ನಿಧಿಗೆ ಕರೆಯಿಸಿಕೊಂಡು " ವರಾಹ ಮೂರ್ತಿಯನ್ನು ಕಣ್ಣಿಲಿ ಕಂಡದ್ದೇನು ಸಾಮಾನ್ಯವಲ್ಲ; ಅದರಿಂದಲೇ ನಿಮಗೆ ಸಕಲವೂ ಸೌಖ್ಯವಾಗುವದು; " ಎಂದು ಅವರನ್ನು ಸಮಾಧಾನಗೊಳಿಸಿ ಶಿಷ್ಯರನ್ನೂ ಪಲ್ಲಕ್ಕಿಯನ್ನೂ ಬಹು ಧನವನ್ನೂ ಅವರಿಗೆ ಕೊಟ್ಟು ಕಳುಹಿದರು. ಆಮೇಲೆ **ಮಾನಾಮಧುರಿಯಲ್ಲಿ** ಗುರುಗಳ ವೃಂದಾವನವು ಕಟ್ಟಿ ಮುಗಿಯಿತು. ಮಹಾಸಮಾರಾಧನೆಯಂತೂ ಬಹು ವಿಜೃಂಭಣೆಯಿಂದ ಜರುಗಿತು. ಬಳಿಕ ಶ್ರೀಗಳು ಸಂಚಾರಕ್ಕೆಂದು ಮುಂದೆ ಸಾಗಿದರು.

ಆದರೆ ಆ ಪ್ರಾಂತದ ಜನಗಳು ' ಶ್ರೀಗಳಲ್ಲಿ ಹಿಂದಿನವರಂತೆ ಪಾಠಪ್ರವಚನಾದಿಗಳ ಬಲವಿಲ್ಲ'ವೆಂದು ಆಡಿಕೊಳ್ಳುತ್ತ ಸಂಸ್ಥಾನ

ವನ್ನು ಉಪೇಕ್ಷಿಸತೊಡಗಿದರು. ಈ ಸುದ್ದಿಯು ಶ್ರೀಗಳಿಗೆ ಶಿಷ್ಯ ಮುಖದಿಂದ ತಿಳಿದು ಬರಲು "ಸ್ವಲ್ಪ ದಿನಗಳಲ್ಲಿಯೇ ದಿಗ್ವಿಜಯ ರಾಮ ದೇವರ ಪ್ರಭಾವವು ತಿಳಿದು ಬಂದೀತು;' ಎಂತೆಂದು ಅವರು ಎಲ್ಲ ರನ್ನು ಸಮಾಧಾನಗೊಳಿಸಿದರು.

ಮುಂದೆ ಸಂಸ್ಥಾನವು ತಿರುಪತಿಯ ಕಡೆಗೆ ಸಾಗಿತು. ಗೋವಿಂದ ರಾಜ ಪಟ್ಟಣವು ಬಂದಿತು. ಅಲ್ಲಿ ಉತ್ತರಾದಿ ಮಠದ ಶಿಷ್ಯನಾದ **ವೈಷ್ಣವ ಜೊಯಿಸನೊಬ್ಬನು 'ವೆಂಕಟೇಶಾಯ'** ಎಂಬ ಅಪ ಶಬ್ದದ ಪುನಶ್ಚರಣೆಯಿಂದ ವೇತಾಳವನ್ನು ವಶಮಾಡಿಕೊಂಡಿದ್ದನು. ಅದರಿಂದ ಭೂತ- ಭವಿಷತ್- ವರ್ತಮಾನದ ಫಲಗಳನ್ನು ಕಿವಿಯಲ್ಲಿ ಕೇಳಿ ತಿಳಿಯುತ್ತ ಜನರಿಂದ ಲಕ್ಷಾಂತವಾಗಿ ಧನವನ್ನು ಗಳಿಸಿ ಅವನು ಯಾರನ್ನೂ ಲೆಕ್ಕಿಸದೆ ಬಲು ಸೊಕ್ಕಿನಿಂದ ಉಕ್ಕಿದ್ದನು.

ನಿಜವನ್ನು ತಿಳಿಯಲೆಂದು ಶ್ರೀಗಳು, ಮಠದ ಮುಂದಿನ ಕಾರ ಭಾರವು ಹೇಗೆ ನಡೆಯುತ್ತದೆಂಬ ಪ್ರಶ್ನೆಯನ್ನು ಕೇಳಿ ತಿಳಿದುಬರಲು ತಮ್ಮ ಶಿಷ್ಯರನ್ನು ಆತನ ಕಡೆಗೆ ಕಳುಹಿಸಿಕೊಟ್ಟರು. "ರಾಜಾಧಿ ರಾಜರೇ ನನ್ನೆಡೆಗೆ ತಾವಾಗಿಯೇ ನಡೆದುಬರುತ್ತಿರಲು ಈ ಶಾಟಿಯ ಸ್ವಾಮಿಯದೇನು ಮೇಲ್ಮೆ"ಯೆಂದು ಅವನು ಬಂದ ಶ್ರೀಗಳ ಶಿಷ್ಯ ರನ್ನು ಜರಿದು ಕಳಿಸಿದನು. ಇದನ್ನು ತಿಳಿದು ಶ್ರೀಗಳು ತಾವೇ ಆ ಜೊಯಿಸನಿದ್ದೆಡೆಗೆ ದಯಮಾಡಿಸಿದರು. ಅನಾಹುತ ಕಾರ್ಯಗಳೇನು ಸಂಭವಿಸುವವೋ ಎಂತೆಂಬ ಹೆದರಿಕೆಯಿಂದ ಸಾಸಿರಾರು ಜನರು ಶ್ರೀಗ ಳನ್ನು ಹಿಂಬಾಲಿಸಿದರು. ಆ ಬಿಂಕದ ಜೊಯಿಸನಿಂದ ಆಗ ಶ್ರೀಗ ಳಿಗೆ ಯೋಗ್ಯವಾದ ಮರ್ಯಾದೆಯು ದೊರೆಯಲಿಲ್ಲ. ತನ್ನಾಸನ ದಿಂದ ಅವನು ಏಳಲಿಲ್ಲ ಕೂಡ. ಇದಾವುದನ್ನೂ ಗಣನೆಗೆ ತಾರದೆ ಶ್ರೀಗಳು ಹೋದವರೇ ತಮ್ಮ ಪ್ರಶ್ನೆಗೆ ಉತ್ತರವನ್ನು ಹೇಳುವು ದೆಂದು ಆ ಜೊಯಿಸನನ್ನು ಕೇಳಿದರು. ಆಗವನು ತನ್ನ ನಡುಮನೆ ಯಲ್ಲಿಯ ದೇವರ ಪ್ರತಿಮೆಯ ಕಡೆಗೆ ಸಾಗಿಹೋಗಿ ಅದನ್ನು ಕೇಳಿ ತಿಳಿದು ಹೇಳುತ್ತೇನೆಂದು ನುಡಿದನು. 'ಇದೆಯೋ ನಿನ್ನ ದೇವರು!' ಎಂತೆಂದು ಶ್ರೀಗಳು ಆ ಮೂರ್ತಿಯ ಎದೆಗೆ ಕೈಹಚ್ಚಿದರು. ಜೊಯಿ

ಸನು ಆಮೇಲೆ ಉತ್ತರವನ್ನು ಪಡೆಯಲು ಆ ಮೂರ್ತಿಗೆ ಕಿವಿಹಚ್ಚಿ ನಿಂತನು. ಆದರೇನು ವ್ಯರ್ಥ! ಇಷ್ಟರಲ್ಲಿ ಒಬ್ಬ ಹುಡುಗನ ಮೈಮೇಲೆ ಪಿಶಾಚಿಯು ಬಂದು "ಈ ವರೆಗೆ ಆದದ್ದಾಯಿತು; ಶ್ರೀಗಳ ಕರಸ್ಪರ್ಶ ದಿಂದ ನನ್ನ ಮೈಯೆಲ್ಲ ಬೇಯುತ್ತಿದೆ, ಅವರಿಗೇ ನೀನು ಶರಣು ಹೋಗು; ಇಲ್ಲವಾದರೆ ಇದುವರೆಗಿನ ನಿನ್ನ ಬ್ರಹ್ಮದ್ರೋಹಕ್ಕಾಗಿ ನಾನು ನಿನ್ನ ಸಂಹಾರವನ್ನೇ ಮಾಡುತ್ತೇನೆ;" ಎಂತಾಗಿ ಅದು ನುಡಿಯ ತೊಡಗಿತು. ಇದನ್ನು ಕೇಳಿ ಆಗ ಕೂಡಿದವರೆಲ್ಲರೂ ಬೆಗಡುಗೊಂಡರು. ಜೊಯಿಸನಂತೂ ಗದಗದನೆ ನಡುಗುತ್ತ ಶ್ರೀಗಳ ಪಾದಕ್ಕೇ ಬಿದ್ದನು. "ಈವರೆಗೆ ನನ್ನ ದೇವರ ಬಲದಿಂದ ಮಾಡಿದ ಅಪರಾಧಗಳನ್ನು ಕ್ಷಮಿಸಿ ನನಗೆ ಜೀವದಾನವನ್ನು ಕೊಡುವುದು;" ಎಂದು ಕೂಗಿ ಕೊಳ್ಳತೊಡಗಿದನು. ಇದೀಗ **ವೆಂಕಟೇಶ** ವೆಂಬ ಮಧುರ ಶಬ್ದ ವನ್ನುಳಿದು 'ವೆಂಕಟೇಸ' ವೆಂಬ ಅಪಶಬ್ದದ ಪುನಶ್ಚರಣೆಯಿಂದ ವೇತಾ ಳವನ್ನು ವಶಮಾಡಿಕೊಂಡು ಬ್ರಹ್ಮದ್ರೋಹವನ್ನು ಕಟ್ಟಿಕೊಂಡಿದು ದರ ಫಲವು! ಸತ್ಕರ್ಮವಲ್ಲದ್ದಕ್ಕೆ ಸಾವಲ್ಲದೆ ಸೌಖ್ಯವೆಂತು ಸಿಕ್ಕು ವದೋ ಮೂರ್ಖಾ!" ಎಂದು ಶ್ರೀಗಳು ನುಡಿದರು. ಇಷ್ಟರಲ್ಲಿಯೇ ಜೊಯಿಸನ ಹೆಂಡತಿಯು ಮನೆಯಲ್ಲಿಯ ದ್ರವ್ಯರಾಶಿಯನ್ನೇ ಶ್ರೀಗ ಳೆದುರಿನಲ್ಲಿ ತಂದು ಸುರವಿಸಿ ಕೈಮುಗಿದು ಪತಿಭಿಕ್ಷೆಯನ್ನು ಕೊಡು ವುದೆಂದು ಶ್ರೀಗಳನ್ನು ಅಂಗಲಾಚಿ ಬೇಡಿಕೊಳ್ಳಲಾರಂಭಿಸಿದಳು. ನೆರೆದವರೂ ಕನಿಕರದಿಂದ ಜೊಯಿಸನನ್ನು ಬದುಕಿಸಿಕೊಳ್ಳಬೇಕೆಂದು ಶ್ರೀಗಳನ್ನು ಪ್ರಾರ್ಥಿಸಿದರು. ಆಗ ವೇತಾಳದ ಉಚ್ಚಾಟನೆಯನ್ನು ಮಾಡಿ ಅವರು ಎಲ್ಲ ಅನರ್ಥವನ್ನು ನಿಲ್ಲಿಸಿದರು. ಈ ಮಹಾತ್ಮೆಯೇ ಶ್ರೀಗಳ ವಿಷಯವಾಗಿ ಜನರಲ್ಲಿ ಅಂದಿನಿಂದ ಭಯಭಕ್ತಿಗಳನ್ನು ಹುಟ್ಟಿಸಲು ಕಾರಣವಾಯಿತು.

ಬಳಿಕ ಶ್ರೀಪಾದರು ಬೆಟ್ಟವನ್ನೇರಿ ತಿರುಪತೇಶನ ದರ್ಶನವನ್ನು ತೆಗೆದುಕೊಂಡು ೩-೪ದಿನ ಶ್ರೀಮೂಲರಾಮರ ಪೂಜೆಯನ್ನು ಗೈದು ಕೆಳಗೆ ಇಳಿದು ಬಂದರು.

ಮುಂದೆ ರಾಮೇಶ್ವರದ ಯಾತ್ರೆಗಾಗಿ ಸಂಸ್ಥಾನವು ನಡೆಯಿತು.

ರಾಮೇಶ್ವರವು ಸಮೀಪಿಸುತ್ತಲೇ ಅಲ್ಲಿಯರಸನು ಅವರನ್ನು ನಡುವೇ ತಡೆದುಬಿಟ್ಟನು. ಆದರೆ ಶ್ರೀಗಳನ್ನು ಸನ್ಮಾನದಿಂದ ಕರೆತರಲೆಂದು ತ್ರಿಚನಾಪಳ್ಳಿಯಿಂದ ಕಳುಹಿಕೊಟ್ಟ **ಜಾನೋಜಿ ನಿಂಬಾಳಕರ**ನೆಂಬ ಸರದಾರನ ಸೈನ್ಯವು ಆ ಅರಸನನ್ನು ದಂಡಿಸಿ ಅಲ್ಲಿಂದ ಸಂಸ್ಥಾನ ವನ್ನು ಬಹು ಮನ್ನಣೆಯೊಡನೆ ತ್ರಿಚನಾಪಳ್ಳಿಗೆ ತಂದುಬಿಟ್ಟಿತು. ಆದರೆ ಅಲ್ಲಿದ್ದ ದಕ್ಷಿಣಾಧೀಶನಾದ ಮ್ಲೇಂಛರಾಜನೂ ಶ್ರೀಗಳನ್ನು ತಡೆದನು. ಆಗ ಶ್ರೀಗಳು ತಮ್ಮ ದೇವರನ್ನು ಸಮೀಪದ **ಚಿಕ್ಕಾಕಿ** ಪಲ್ಲಿಯೆಂಬಲ್ಲಿಗೆ ಸಾಗಿಸಿ ಉಳಿದ ಪದಾರ್ಥಗಳನ್ನಿಟ್ಟುಕೊಂಡು ಉಪೋಷಣೆಯನ್ನು ಮಾಡತೊಡಗಿದರು. ಇದನ್ನು ಕೇಳಿ ನಿಂಬಾಳ ಕರನು ಚಿಂತೆಯಿಂದ ತನ್ನ ಮೈಯಲ್ಲಿ ಹೊರಬೀಳಲು ಶಕ್ತಿಯು ಸಾಲದಂತಿದ್ದರೂ ತಾನೇ ಮ್ಲೇಂಛರಾಜನೆಡೆಗೆ ಹೋದನು. ಸಂಸ್ಥಾ ನದ ಮತ್ತು ಶ್ರೀಗಳ ಮಹಿಮೆಯನ್ನು ಬಣ್ಣಿಸಿ ಹೇಳಿ, ತಡೆದದ್ದು ಉಚಿತವಲ್ಲೆಂದು ರಾಜನಿಗೆ ಒತ್ತಿ ಹೇಳಿದನು. ಆದರೆ ಇದನ್ನು ಲೆಕ್ಕಿಸದಲೆ ರಾಜನು "ಶ್ರೀಗಳಲ್ಲಿ ವಿಪುಲಸಂಪತ್ತಿಯಿದೆಯೆಂದು ವಾರ್ತೆ ಯಿದೆ. ಅದಕ್ಕಾಗಿ ಅವರನ್ನು ನಾನು ತಡೆದರೆ ಅವರು ಉಪೋಷಣೆ ಯನ್ನು ಮಾಡುವುದೇಕೆ? '' ಎಂದು ಜರಿದು ನುಡಿದು ಸಂಸ್ಥಾನವಿದ್ದೆ ಡೆಗೆ ಶೋಧನಕಾರ್ಯಕ್ಕೆಂದು ತನ್ನ ಮಂತ್ರಿಗಳನ್ನು ಕಳುಹಿಕೊಟ್ಟನು. ಮಂತ್ರಿಗಳು ಸಂಸ್ಥಾನಕ್ಕೆ ಬಂದರು. ಅಲ್ಲಿದ್ದ ಅನರ್ಘ್ಯವಾದ ರತ್ನ ವೈಢೂರ್ಯಾದಿಗಳ ಆಭರಣಗಳನ್ನೂ ಇನ್ನೂ ಅನೇಕ ಬೆಲೆಯುಳ್ಳ ವಸ್ತುಗಳನ್ನೂ ಕಂಡು ಅವರಿಗೆ ಆಶ್ಚರ್ಯವಾಯಿತು. ಎಲ್ಲಿ ನೋಡಿ ದಲ್ಲಿ ಎಲ್ಲ ಒಡವೆಗಳ ಮೇಲೆ, ಎಲ್ಲಿ ಆ ಅರಸು, ಈ ಅರಸು, ೧ನೇ ಬಾಜಿರಾಯ ಮುಂತಾದೆಷ್ಟೋ ರಾಜರ ಮತ್ತು ಅನೇಕ ಧನವಂತರ ಹೆಸರುಗಳು ಅವರಿಗೆ ಕಂಡುಬಂದವು. ಅಲ್ಲದೆ ಅವರೆಲ್ಲರೂ ಈ ಒಡವೆಗಳನ್ನು ದಾನಪೂರ್ವಕನಾಗಿ ಕೊಟ್ಟರುವೆವೆಂದು ಬರೆದುಕೊಟ್ಟ ರುವ ತಾಮ್ರಶಾಸನಗಳನ್ನೂ ಅವರು ನೋಡಿದರು. ಇದನ್ನೆಲ್ಲ ರಾಜನಿಗೆ ಅವರು ತಿಳಿಹೇಳಲು ಅವನು ತಾನು ಮಾಡಿದ ನಿಂದ್ಯ ಕರ್ಮಕ್ಕಾಗಿ ಪಶ್ಚಾತ್ತಾಪಬಟ್ಟು ನಿಂಬಾಳಕರನ ಮುಖಾಂತರವಾಗಿ ಶ್ರೀಗಳ ಕ್ಷಮಾಪಣೆಯನ್ನು ಬೇಡಿಕೊಂಡನು. ಅಲ್ಲದೆ ಸಂಸ್ಥಾನ

ವನ್ನು ಯಥಾಯೋಗ್ಯವಾಗಿ ಮನ್ನಿಸಲೆಂದು ಆತನಿಗೆ ಹೇಳಿದನು. ಆಗವನು ಬಹು ವಿಜೃಂಭಣೆಯಿಂದ ಮೆರೆವಣಿಗೆಯನ್ನು ಹೊರಡಿಸಿ ಚಿಕ್ಕಾಪಿಪಲ್ಲಿಯಲ್ಲಿಯ ದೇವರ ಪೆಟ್ಟಿಗೆಯನ್ನು ತರಿಸಿಕೊಟ್ಟು ತಾನೇ ನಿಂತು ಸೇವಾದಿಗಳನ್ನು ಮಾಡಿದನು. ಅಲ್ಲಿ ಕೆಲಕಾಲ ಪೂಜಾದಿಗಳು ನಡೆದು ಸಂಸ್ಥಾನವು ಅಲ್ಲಿಂದ ತಳಬಿಟ್ಟಿತು.

ಮುಂದೆ ಸಂಚಾರಕ್ರಮದಿಂದ ಶ್ರೀಗಳು **ತಂಜಾವೂರಿಗೆ** ಬಂದರು. ಅಲ್ಲಿಯರಸನು ಬಹುವಾಗಿ ಇವರನ್ನು ಮನ್ನಿಸಿದನು. ರಾಜಚಿನ್ಹಯುಕ್ತವಾದ ಶಾಸನವೊಂದು ಸಂಸ್ಥಾನಕ್ಕೆ ಆಗ ದೊರೆಯಿತು. ಈ ವೇಳೆಯಲ್ಲಿಯೇ ಆ ಊರಲ್ಲಿಯ **ಸೇತುಗೋಸಾವಿ**ಯೆಂಬವರೊಡನೆ ಶ್ರೀಗಳ ಶಾಸ್ತ್ರಾರ್ಥವಾದವು ನಡೆಯಿತು. ಅದರಲ್ಲಿ ಗೋಸಾವಿಯವರು ಪೂರ್ಣ ಸೋತು ಜಯಪತ್ರವನ್ನೇ ಕೊಡಬೇಕಾಯಿತು.

ಅಲ್ಲಿಂದ ಮುಂದೆ ಸಂಸ್ಥಾನವು **ಕುಂಭಘೋಣ**ದ ಕಡೆಗೆ ನಡೆಯಿತು. ಇಲ್ಲಿ ಕೆಲ ಕಾಲ ನಿಂತು ಶ್ರೀಗಳು ಒಂದು ವಿಶಾಲವಾದ ಮಂಟಪವನ್ನು ಕಟ್ಟಿಸಿದರು. ಆ ಮೇಲೆ ಅವರು **ಷಡರಣ್ಯಕ್ಕೆ** ಸಾಗಿದರು. ಮುಂದೆ **ಕರ್ನೂಲ** ಮಾರ್ಗವಾಗಿ ಗದ್ವಾಲಿಯ ಕಡೆಗೆ ಹೋಗಿ ಕೃಷ್ಣಾಜಿಪಂತನಿಂದ ಪೂಜಿಸಲ್ಪಟ್ಟು ಶ್ರೀಗಳು **ಹೈದರಾಬಾದಕ್ಕೆ** ತೆರಳಿದರು. ಭಾಗ್ಯನಗರದಲ್ಲಿ ಆಗ ಮಂತ್ರೋಪದೇಶ ಮುದ್ರಾಧಾರಣಾದಿಗಳು ಬಹು ವಿಜೃಂಭಣೆಯಿಂದ ಸಾಗಿದವು. ಈ ನಂತರ ಗೋದಾವರೀ ತೀರದ ಕಡೆಯಿಂದ **ರಾಯಚೂರ** ಮಾರ್ಗವಾಗಿ ಹೊರಟು **ಹರಿಹರ** ಕ್ಷೇತ್ರವನ್ನು ಸಂದರ್ಶಿಸಿ ಸಂಸ್ಥಾನವು **ಸವಣೂರ** ಪ್ರಾಂತಕ್ಕೆ ಬಂದಿತು. ಆಗಿದ್ದ ದಿವಾನ **ಖಂಡೇರಾಯ**ರು ಶ್ರೀಗಳನ್ನು ಭಕ್ತಿಯಿಂದ ಸವಣೂರಿಗೆ ಬರಮಾಡಿಕೊಂಡು ಅಲ್ಲಿ ಕೆಲವು ದಿವಸ ಪೂಜಾದಿಗಳನ್ನು ಮಾಡಿಸಿ ಅವರಿಗೆ ಅನೇಕ ಕಾಣಿಕೆಗಳನ್ನು ಅರ್ಪಿಸಿದರು.

ಚಾತುರ್ಮಾಸ್ಯವನ್ನು ತೀರಿಸಿಕೊಂಡು ಶ್ರೀಗಳು ಕಾಶೀಯಾತ್ರೆಗಾಗಿ ಹೊರಟು ಗಯಾಕ್ಷೇತ್ರಕ್ಕೆ ಬಂದರು. ಅಲ್ಲಿಯ ಗಯಾವಾಡರು

ಹತ್ತು ಸಾವಿರ ರೂಪಾಯಿಗಳನ್ನಿತ್ತರೆ ವಿಷ್ಣುಪಾದ ಗುಡಿಯ ಬಾಗಿಲ ತೆಗೆಯುತ್ತೇವೆಂದು ಶ್ರೀಗಳಿಗೆ ಹೇಳಿದರು. ಆಗ ಶ್ರೀಗಳು ವಿಷ್ಣು ಪಾದದ ಸಮೀಪದಲ್ಲಿಯೇ ಒಂದು ಸ್ಥಾನವನ್ನು ರಚಿಸಿ ಅದಕ್ಕೆ "**ರಾಮಗಯಾ**" ಎಂದು ಹೆಸರಿಟ್ಟು ಅಲ್ಲಿಯೇ ಪಿಂಡಪ್ರದಾನವನ್ನು ಮಾಡಲಿಕ್ಕೆ ಎಲ್ಲರಿಗೂ ಹೇಳಿದರು. ಈ ವಿಧಾನವು ಒಂದು ತಿಂಗಳ ವರೆಗೆ ಸಾಗಿತು. ಆ ಮೇಲೆ ಗಯಾವಾಡರು ಕಣ್ಣು ತೆರೆದು ಶ್ರೀಗಳಿಗೆ ಶರಣುಬಂದರು. ಆಗ ಶ್ರೀಗಳು ಪ್ರತಿಯೊಬ್ಬ ಗಯಾ ವಾಡನು ಮುದ್ರೆಯನ್ನು ಸ್ವೀಕರಿಸಿ ತನ್ನ ಗಳಿಕೆಯ ಹತ್ತರಲ್ಲೊಂದು ಭಾಗವನ್ನು ಕೊಡಬೇಕೆಂತಲೂ ವಿಷ್ಣುಪಾದದ ತುಂಬ ವರಹಗಳನ್ನು ಮಠಕ್ಕೆ ಅರ್ಪಿಸಬೇಕೆಂತಲೂ ಅಪ್ಪಣೆಯನ್ನು ಕೊಡಿಸಿದರು. ಆ ಪ್ರಕಾರಕ್ಕೆ ಗಯಾವಾಡರು ಒಡಂಬಟ್ಟರು.

ಇಲ್ಲಿಂದ ಶ್ರೀಗಳು **ಕಾಶಿಗೆ** ಬಂದರು. ಅಲ್ಲಿಯ **ದುರ್ಗಾಘಟ್ಟ** ದಲ್ಲಿ ಒಂದು ಮಠಸ್ಥಾಪನೆಯಾಯಿತು. ಒಂದು ಲಕ್ಷ ಬ್ರಾಹ್ಮಣರ ಭೋಜನವೂ ಅಲ್ಲಿ ಆಯಿತು. ಆ ಮೇಲೆ ಉತ್ತರದ ಎಲ್ಲ ಯಾತ್ರೆ ಗಳನ್ನು ಮುಗಿಸಿಕೊಂಡು ಶ್ರೀಗಳು ಮತ್ತೆ ಸವಣೂರಲ್ಲಿ ಬಂದು ನಿಂತರು.

ಅಲ್ಲಿ ಅವರು ಒಂದು ದೊಡ್ಡ ಮಠವನ್ನು ಕಟ್ಟಿಸಿಕೊಂಡು ಅಲ್ಲಿಯೇ ಬಹು ದಿವಸ ಸಂಸ್ಥಾನಪೂಜೆಯನ್ನು ಮಾಡುತ್ತ ಇರುತ್ತಿದ್ದರು. ಒಮ್ಮೆ ಕೆಲಜನ ನೀಚರು ಸಂಸ್ಥಾನವು ಇನ್ನೊಬ್ಬರಿಗಾಗ ಬೇಕೆಂದು ದುರಾಲೋಚನೆಯನ್ನು ಮಾಡಿ ಚಿಕ್ಕ ನೈವೇದ್ಯದ ಅಡಿಗೆ ಯಲ್ಲಿ ವಿಷವನ್ನು ಬೆರಸಿದರು. ನೈವೇದ್ಯ ಸಮರ್ಪಣೆಯಾದ ಕಾಲಕ್ಕೆ ಶ್ರೀರಾಮರ ಕಂಠದಲ್ಲಿ ಹಸರು ರೇಖೆಯು ಶ್ರೀಗಳಿಗೆ ಕಾಣಿ ಸಿತು. ಆ ಕೂಡಲೇ ಪರೀಕ್ಷಕರು ಅಡಿಗೆಯನ್ನು ಪರಿಶೋಧಿಸಿದರು. ಆಗ ಪರಮಾನ್ನದಲ್ಲಿ ವಿಷಹಾಕಿದ್ದು ಕಂಡುಬಂದಿತು. ಪರಮಾನ್ನ ವನ್ನುಳಿದು ಉಳಿದುದನ್ನಷ್ಟೇ ಸ್ವೀಕರಿಸಬೇಕೆಂದು ಅವರು ಶ್ರೀಗಳಿಗೆ ಪರಿಪರಿಯಿಂದ ಬೇಡಿಕೊಂಡರು. ಆದರೆ ಶ್ರೀರಾಮರಿಗೆ ಸಮರ್ಪಣ ವಾದುದನ್ನು ಬಿಟ್ಟುಕೊಡುವದು ಆಗದೆಂದು ಶ್ರೀಗಳು ಅದನ್ನು

ಭುಜಿಸಿಯೇ ಬಿಟ್ಟರು. ಹಿಂದಿನಿಂದ ವೈದ್ಯರು ಇದರ ಪ್ರತಿಕಾರೋ ಪಾಯವೆಂದು ನಿದ್ರಾವರ್ಜನೆಯನ್ನು ಶ್ರೀಗಳಿಗೆ ಹೇಳಿದರು. ಇದ ಕ್ಕಾಗಿಯೇ ಮೂಲರಾಮರ ಪೂಜಾದಿಗಳು ಅಂದಿನಿಂದ ಅಪರಾತ್ರಿಯ ಕಾಲಕ್ಕೆ ನಡೆಯಲಾರಂಭಿಸಿದುವು.

ಇದನ್ನು ಕಂಡು ಅಲ್ಲಿಯ ಪರಮತದ **ರಾಮಶಾಸ್ತ್ರಿ** ಮುಂತಾ ದವರು ಶ್ರೀಗಳು ಅಪರಾತ್ರಿಯಲ್ಲಿ ಭೋಜನವನ್ನು ಮಾಡುತ್ತಾರೆಂದು ಆಡಿಕೊಳ್ಳಲಾರಂಭಿಸಿದರು. ಈ ಸುದ್ದಿಯು ಹೇಗೋ ಶ್ರೀಗಳಿಗೆ ತಿಳಿಯಿತು. ಆಗವರು ಒಮ್ಮೆ ಅಮಾವಾಸ್ಯೆಯ ಕಾಲಕ್ಕೆ ೨ ಪ್ರಹರ ರಾತ್ರಿಯಾಗಿರಲು ಪೂಜಾದಿಗಳನ್ನು ಮಾಡುತ್ತಿರುವಾಗ ರಾಮಶಾಸ್ತ್ರಿ ಮುಂತಾದವರನ್ನು ಕರೆಯಿಸಿಕೊಂಡರು. ಪೂಜೆಯು ಮುಗಿದ ಬಳಿಕ ಶ್ರೀಗಳು ಶ್ರೀರಾಮರಿಗೆ ದೊಡ್ಡ ತೆಂಗಿನಕಾಯಿಯಷ್ಟು ಕಪ್ಪು ರದಿಂದ ಮಂಗಳಾರತಿಯನ್ನು ಮಾಡಿ ಒಬ್ಬನ ಶಿಷ್ಯನ ಕೈಯಲ್ಲಿ ಅದನ್ನು ಕೊಟ್ಟು 'ಅವನೊಡನೆ ಸ್ವಲ್ಪ ಹೊರಗೆ ಹೋಗಿ ಬನ್ನಿರಿ;' ಎಂತೆಂದು ರಾಮಶಾಸ್ತ್ರಿ ಮುಂತಾದವರನ್ನು ಹೊರಗೆ ಕಳುಹಿದರು. ಅವರು ಮಠವನ್ನು ಬಿಟ್ಟು ಹೊರಗೆ ಬರುತ್ತಲೇ ಅವರೆಲ್ಲರಿಗೂ ಮಧ್ಯಾಹ್ನದ ಸೂರ್ಯನ ದರ್ಶನವಾಯಿತು. ಎಲ್ಲರೂ ಬೆರಳು ಕಚ್ಚಿ ದರು. ಶ್ರೀಗಳ ಮಹಿಮೆಯನ್ನು ಕೊಂಡಾಡತೊಡಗಿದರು. ರಾಮ ಶಾಸ್ತ್ರಿಯು ಮಾತ್ರ 'ಏನೋ ಇದೊಂದು ಇಂದ್ರಜಾಲವಿದ್ಯೆ'ಯೆಂದು ಅಲ್ಲಗಳೆದನು. ಇದನ್ನು ತಿಳಿಯುತ್ತಲೇ ಶ್ರೀಗಳು "ಶ್ರೀರಾಮನೇ" ಎಂದು ಆರ್ತಸ್ವರದಲ್ಲಿ ಕೂಗಿ ಕರೆದರು. ಆಗಲೇ ರಾಮಶಾಸ್ತ್ರಿಗಳ ಕಣ್ಣುಗಳಿಗೆ ಕತ್ತಲೆಗವಿಯಿತು. ಮುಂದೆ ಅವರಿಗೆ ದೃಷ್ಟಿಯೇ ಬರ ಲಿಲ್ಲ. ಆಗ ತಾನೆ ಶ್ರೀಗಳ ಮಹಿಮೆಯು ಅರಿಕೆಯಾಗಿ ರಾಮಶಾಸ್ತ್ರಿಯು ಅವರನ್ನು ಕ್ಷಮಿಸಬೇಕೆಂದು ಮೊರೆಹೊಕ್ಕನು. "ಪರಮಾತ್ಮನ ಹೇಲನೆ ಯನ್ನು ಮಾಡಿರುವೆಯಾದ್ದರಿಂದ ನೀನು ಕಡೆಗೂ ಅಂಧನಾಗಿಯೇ ಉಳಿಯುವಿ''ಯೆಂದು ಶ್ರೀಗಳಿಂದ ಅವನಿಗೆ ಉತ್ತರವು ದೊರೆಯಿತು. ಬಿಸಿಲು ಮಾತ್ರ ಮೂರು ಯೋಜನದ ತನಕ ಮೂರು ಗಳಿಗೆಯ ವರೆ

ಗಿದ್ದು ಮುಂದೆ ಕಾಣದಾಯಿತು. ಈ ಸಂಗತಿಯಾದ ಮೇಲೆ ಶ್ರೀಗಳ ರಾತ್ರಿ ಭೋಜನದ ಮೇಲಿನ ಅಡಿಕೆಯು ನಿಂತುಹೋಯಿತು. ಅಂದಿನಿಂದ ಸವಣೂರ ನವಾಬನೂ ಶ್ರೀಗಳೊಡನೆ ಭಯಭಕ್ತಿಯಿಂದ ನಡೆದುಕೊಳ್ಳತೊಡಗಿದನು.

ಮತ್ತೊಮ್ಮೆ **ಭಾಗೀರಥಿಯ ಸ್ನಾನಕ್ಕೆ** ಹೋಗಬೇಕೆಂದು ಶ್ರೀಗಳಿಗೆ ಮನಸಾಗಿದ್ದಿತು. ಆಗವರಿಗೆ ಕನಸಿನಲ್ಲಿ **ಶ್ರೀ ಬಾದರಾಯಣ** ದೇವರು "ನಿಮ್ಮ ಮಠವಿದ್ದಲ್ಲಿಯೇ ಎಲ್ಲ ತೀರ್ಥಗಳು ನೆಲೆಯಾಗಿರುತ್ತವೆ; ಭಾಗೀರಥಿಗಾಗಿ ಕಾಶಿಗೆ ಹೋಗಬೇಕೆ? ಇಂತಹ ದಿನ ನಿಮ್ಮೂರ ತೋಟದೊಳಗಿನ ಇಂತಹ ಅತ್ತಿಯಗಿಡದ ಬುಡದಲ್ಲಿಯೇ ನಿಮಗೆ ಆಕೆಯು ಕಾಣಿಸಿಕೊಳ್ಳುವಳು" ; ಎಂದು ಹೇಳಿದಂತಾಯಿತು. ಏಳುತ್ತಲೇ ಈ ಸುದ್ದಿಯನ್ನು ಶ್ರೀಗಳು ದಿವಾಣ ಖಂಡೇರಾಯ, ನವಾಬ ಮುಂತಾದವರಿಗೆ ಕರೆಕಳುಹಿ ತಿಳಿಸಿದರು. ಆಗ ಎಲ್ಲ ಪರಿವಾರವೂ ವಾದ್ಯನಿನಾದೊಡನೆ ಶ್ರೀಗಳು ತೋರಿಸಿದ ಸ್ಥಳಕ್ಕೆ ಬಂದು ನಿಯಮಿತವಾದ ದಿನ ಭಾಗೀರಥಿಯ ಬರವನ್ನು ಎದುರು ನೋಡುತ್ತ ನಿಂತುಕೊಂಡರು. ಕನಸಿನಲ್ಲಿ ಹೇಳಿದ ವೇಳೆಗೆ ಸರಿಯಾಗಿ ಅತ್ತಿಯಗಿಡದ ಬುಡದಲ್ಲಿಂದ ಒಂದು ಶುಭ್ರವಾದ ಜಲಪ್ರವಾಹವು ಕಾಣಿಸಿಕೊಂಡಿತು. ಆಗ ನಿಂತವರೆಲ್ಲರೂ ನಲಿದಾಡಿದರು. ಗಂಗೆಯಲ್ಲಿ ಮಿಂದು ಎಲ್ಲರೂ ಅನೇಕ ದಾನಾದಿಗಳನ್ನು ಮಾಡಿದರು. ಎಷ್ಟೋ ಉತ್ಸವಗಳೂ ಆಗಲ್ಲಿ ನಡೆದುವು. ಅಂದಿನಿಂದ **'ವಿಷ್ಣುತೀರ್ಥ'**ವೆಂದು ಆ ತೀರ್ಥವು ಪ್ರಸಿದ್ಧಿಯನ್ನು ಪಡೆಯಿತು. ಈಗಲೂ ಅಲ್ಲಿ ಭಾಗೀರಥಿಯ ಸಾನ್ನಿಧ್ಯವಿದೆ.

ಮುಂದೊಮ್ಮೆ ಶ್ರೀಗಳಿಂದ ಸಹಿತರಾಗಿ ಊರವರು ವಿಷ್ಣುತೀರ್ಥದಲ್ಲಿ ಸ್ನಾನಮಾಡಿ ಎಲ್ಲರೂ ತಮ್ಮ ತಮ್ಮ ಆಹ್ನಿಕಕ್ಕೆ ಕುಳಿತಿದ್ದರು. ಆಗಲ್ಲಿಗೆ **ಭಯಂಕರಾಕಾರದ ಕಪಿ**ಯೊಂದು ಜಿಗಿಯುತ್ತ ಬಂದಿತು. ಕೂಡಲೇ ಅಲ್ಲಿರುವ ಕೆಲವರು ಕಾಲಿಗೆ ಬುದ್ಧೀ ಹೇಳಿದರು. ಹಲವರು ಸಿಕ್ಕಲ್ಲಿ ಹುದುಗಿಕೊಂಡು ಕುಳಿತರು. ಕಪಿಯು ತೀರ್ಥಲ್ಲಿ ಸ್ನಾನ ಮಾಡಿದ್ದೇ ಶ್ರೀಗಳ ಸಮುಖದಲ್ಲಿ ಬಂದು ಕುಳಿ

ತಿತು. ಆಗ ಶ್ರೀಗಳು ಅದಕ್ಕೆ ತೀರ್ಥಪ್ರೋಕ್ಷಣೆಯನ್ನು ಮಾಡಿದರು. ಈ ಕ್ರಮವು ಏಳು ದಿನಗಳ ವರೆಗೆ ನಡೆಯಿತು. ಕಡೆಯ ದಿನ ಶ್ರೀಗಳು ಕಪಿಯ ಅಂತ್ಯಕಾಲವು ಸಮೀಪಿಸಿದ್ದನ್ನು ತಿಳಿದು ಅದಕ್ಕೆ ತೀರ್ಥದಲ್ಲಿ ಸ್ನಾನ ಮಾಡಿಸಿ ನಾಮಧಾರಣೆಯನ್ನು ಮಾಡಿಸಿ ನಿರ್ಮಾಲ್ಯವನ್ನು ಕೊಟ್ಟರು. ಆಗಳೇ ಅದು ದೇಹವನ್ನು ಬಿಟ್ಟಿತು. ಇದನ್ನು ನೋಡಿ ಎಲ್ಲರೂ ಬೆರಗಾದರು. ನಿಜವನ್ನು ಕೇಳಿ ತಿಳಿದುಕೊಳ್ಳಲು ತವಕ ಪಡತೊಡಗಿದರು. 'ವಿಧಿವಶಾತ್ ಕಪಿಯ ಜನ್ಮವು ಬಂದ **ಸೊನ್ನೀಕೊನ್ಹೀರಾಚಾರ್ಯ**ರಿವರು;' ಎಂದು ಅವರಿಗೆ ಶ್ರೀಗಳು ಹೇಳಿದರು. ಆಗ ಎಲ್ಲರೂ ಶ್ರೀಗಳನ್ನು ಕೊಂಡಾಡಿದರು.

ಶ್ರೀಗಳ ಇಂತಹ ಅಗಾಧ ಮಹಿಮೆಗಳನ್ನು ತಿಳಿದು ನವಾಬನು ಭಯಭಕ್ತಿಯಿಂದ ಅವರಿಗೆ ಊರ ಮಧ್ಯದಲ್ಲಿಯೇ ಒಂದು ವಿಸ್ತಾರವಾದ ಸ್ಥಳವನ್ನೇ ಕೊಟ್ಟು ವರದಾತೀರದ ಮೆಳ್ಳೀಗಟ್ಟಿಯೆಂಬ ಗ್ರಾಮವನ್ನು ಉಂಬಳಿಯಾಗಿ ಹಾಕಿಕೊಟ್ಟನು. ದಿವಾಣ ಖಂಡೇರಾಯನೂ ಮಠಕ್ಕೆ ಬಹು ಮೋಲ್ಯದ ಒಡವೆಗಳನ್ನು ಉಚಿತವಾಗಿ ಕೊಟ್ಟನು.

ಹೀಗೆ ಬಹುಕಾಲ ಶ್ರೀಗಳು ಅಲ್ಲಿಯೇ ಮಠದ ಮಹಿಮೆಯನ್ನು ಬೀರುತ್ತ ಇರುತ್ತಿದ್ದರು. ಅವರ ಸಂಸ್ಥಾನ ಪೂಜೆಯ ನಾಲ್ವತ್ತು ವರ್ಷಗಳಾದವು. ಕಡೆಗವರಿಗೆ ದೇಹದಲ್ಲಿ ಆಯಾಸವುಂಟಾಯಿತು. ಆಗ ಮಹಾ ತಪಸ್ವಿಗಳಾಗಿದ್ದ **ಹಾವೇರಿ ರಾಮಚಂದ್ರಾಚಾರ್ಯ**ರೆಂಬವರನ್ನು ಕರೆಯಿಸಿ ಆಶ್ರಮವನ್ನು ಕೊಟ್ಟು **ಸತ್ಯಸಂಧ**ರೆಂದವರನ್ನು ಕರೆದು ಅವರಿಗೆ ಸಂಸ್ಥಾನಕ್ಕೆ ಪಟ್ಟಗಟ್ಟುತ್ತಿದ್ದರು. ಆದರೆ ಅವರಿಗೆ ಇಷ್ಟರಲ್ಲಿಯೇ ಈ ಸತ್ಯಸಂಧರು ಮರಣವನ್ನು ಸಮೀಪಿಸಿರುವರೆಂದು ತಿಳಿದು ಬಂದಿತು. ಆಗವರು ಹನ್ನೆರಡು ಬೆಳ್ಳಿಯ ಬಟ್ಟಲುಗಳಲ್ಲಿ ನೀರು ತುಂಬಿಸಿಡಿಸಿ ರಕ್ಷಾಸ್ತೋತ್ರದಿಂದ ಹೊಸ ಶ್ರೀಗಳಿಗಾಗಿ ಹನ್ನೆರಡು ವರ್ಷಗಳ ಆಯುಷ್ಯವನ್ನು ಅಭಿಮಂತ್ರಿಸಿ ಆ ಬಳಿಕ ಆ ಬಟ್ಟಲುಗಳಲ್ಲಿಯ ನೀರನ್ನು ಅವರಿಗೆ ಕುಡಿಯಲು ಹೇಳಿದರು. ಅವರು ಹತ್ತೇ ಬಟ್ಟಲುಗಳಲ್ಲಿಯ ನೀರನ್ನು ಕುಡಿದರು. "ಶ್ರೀರಾಮರ ಚಿತ್ತಕ್ಕೆ ಬಂದಂತೆಯೇ ಆಗಲಿ; ನಿಮಗೆ ಹತ್ತೇ ವರ್ಷದ ಆಯುಷ್ಯವು

ಬಂದಿತು. ಸಂಸ್ಥಾನದ ಪೂಜೆಗಾಗಿಯೇ ನೀವು ಜನ್ಮವನ್ನು ತಾಳಿರು ವಿರಿ. ಆ ನಿಮ್ಮ ಬಯಕೆಯು ಕೈಗೂಡಲಿ; **ಇನ್ನು ಮುಂದೆ ಮಂತ್ರಾ ಲಯ ಸ್ವಾಮಿಗಳ ಮಹಿಮೆಯು ಹೆಚ್ಚುವುದು**' ಎಂತಾಗಿ ಹೇಳಿ ಶ್ರೀ ಸತ್ಯಬೋಧರು ಸತ್ಯಸಂಧರಿಗೆ ಪ್ರಣವೋಪದೇಶವನ್ನು ಅನುಗ್ರ ಹಿಸಿ ಶ್ರೀವೇದವ್ಯಾಸರ ಸಂಪುಟವನ್ನು ಅವರ ಶಿರದಲ್ಲಿಟ್ಟು ಮಹಾ ಸಂಸ್ಥಾನಾಭಿಷೇಕವನ್ನು ಪೂರ್ತಿಗೊಳಿಸಿದರು.

ಆ ಮೇಲೆ ಶ್ರೀಗಳು ಶಾಂತಚಿತ್ತರಾಗಿ ಶಕೆ ೧೭೦೫ನೇ ಶೋಭನ ಸಂವತ್ಸರದ ಫಾಲ್ಗುಣ ವದ್ಯ ಪ್ರತಿಪದೆಯ ದಿನ ಶ್ರೀರಾಮಧ್ಯಾನಪರ ರಾದರು. ಇವರ ವೃಂದಾವನವು **ಸವಣೂರಲ್ಲಿ** ಕಟ್ಟಿಸಿದ ಮಠದ ಲ್ಲಿಯೇ ಇದೆ. ಈ ಪ್ರಾಂತದ ಕಡೆಗೆ ಉತ್ತರಾದಿ ಮಠವು ಶ್ರೀಸತ್ಯ ಬೋಧಸ್ವಾಮಿಗಳ ಮಠವೆಂದು ಪ್ರಸಿದ್ಧವಾಗಿದೆ. ಇವರ ವೃಂದಾವ ನಕ್ಕೆ ಸಾವಿರಾರು ಜನರು ಬಹು ಭಕ್ತಿಯಿಂದ ಈಗಲೂ ನಡೆದುಕೊಳ್ಳು ತ್ತಾರೆ. ಮಹಾಸಮಾರಾಧನೆಯೂ ಸವಣೂರಲ್ಲಿ ಬಹು ವಿಜೃಂಭಣೆ ಯಿಂದ ಜರುಗುತ್ತದೆ. ಇವರು **ಮಾರ್ಕಾಂಡೆಯರ ಅಂಶ**ದವರೆಂದು ಹೆಸರಾಗಿದೆ.

## ೨೬ ಶ್ರೀಸತ್ಯಸಂಧತೀರ್ಥರು.



**ಪಟ್ಟ:- ೧೬-೧೨-೧೭೦೫ನೇ ಶೋಭನದಿಂದ ೩-೧-೧೭೧೬ನೇ ಆನಂದದ ವರೆಗೆ**

ಗುರುಗಳು ಬಹು ದಿನ ಊರಲ್ಲಿಯೇ ನಿಂತಿದ್ದರಾದುದರಿಂದ ಹೊಸ ಯತಿಗಳು ಸಂಚಾರಾರ್ಥವಾಗಿ ಹೊರಗೆ ಹೊರಟರು. ಪಂಢರ ಪುರಕ್ಕೆ ಇವರು ದಯಮಾಡಿಸಿದ್ದಾಗ ಶ್ರೀಪಾಂಡುರಂಗನು ಬ್ರಹ್ಮ ಚಾರಿಯ ರೂಪದಿಂದ ಇವರಿಗೆ ದರ್ಶನವನ್ನಿತ್ತು ಕಾಣದಾದನು. ಜನರು ಆಗ ಶ್ರೀಗಳ ಮಹಿಮೆಯನ್ನು ಬಲು ಹೊಗಳಿದರು.

ಮುಂದೊಮ್ಮೆ ಸಂಸ್ಥಾನವು ಗಯೆಗೆ ಸಾಗುತ್ತಿರಲು ಮಧ್ಯಾನ್ಹ ಸಮಯಕ್ಕೆ ಒಂದು ನಿರ್ಜನವಾದ ಪ್ರದೇಶಕ್ಕೆ ಬಂದು ಮುಟ್ಟಿತು. ಅಲ್ಲಿಯೇ ಶ್ರೀಗಳ ಪೂಜೆ ಅರ್ಚನೆಗಳು ನಡೆದುವು. ಆದರೆ ಪೂಜಾ

ದ್ರವ್ಯಗಳಲ್ಲಿ ಹೂವೊಂದಿಲ್ಲದ್ದರಿಂದ ಅವರು ಖಿನ್ನರಾಗಿದ್ದು ಪೂಜೆ ಯನ್ನು ನಡೆಸಿದ್ದರು. ಇಷ್ಟರಲ್ಲಿಯೇ ಒಬ್ಬ ಬ್ರಾಹ್ಮಣನು ಸಹಸ್ರ ಪತ್ರಯುತವಾದುದೊಂದು ಕಮಲವನ್ನು ತಂದು ಶ್ರೀಗಳ ಕೈಯ ಲ್ಲಿತ್ತು ಹೊರಟುಹೋದನು. ಆಗಲೇ ಶ್ರೀಪಾದರು ಹರುಷಿತರಾಗಿ ಶ್ರೀರಾಮರಿಗೆ ಆ ಪುಷ್ಪವನ್ನು ಅರ್ಪಿಸಿದರು. ಆಗ ಆ ಪುಷ್ಪವು ವಿಲಕ್ಷಣವಾಗಿ ತೋರಿದುದರಿಂದ ಆ ಬ್ರಾಹ್ಮಣನನ್ನು ಆ ವಿಷಯವಾಗಿ ಕೇಳುವುದೆಂದು ತಿರುಗಿ ನೋಡುತ್ತಾರೆ; ಅಷ್ಟರಲ್ಲಿಯೇ ಆ ಬ್ರಾಹ್ಮ ಣನು ಮಾಯವಾಗಿದ್ದನು. ಪುಷ್ಪವನ್ನಿತ್ತುಹೋದವನು ದೇವರೇ ಯೆಂದು ಎಲ್ಲರಿಗೆ ಮನವರಿಕೆಯಾಯಿತು. ಈ ಸಂಗತಿಯಿಂದ ಶ್ರೀಗಳ ತಪೋಮಹಿಮೆಯು ಎಲ್ಲ ಮಠಗಳಲ್ಲಿ ಕೊಂಡಾಡುವಂತಾಯಿತು.

ಮಠವು ಗಯೆಗೆ ಸಾಗಿಬಂದಿತು. ಆಗ ಅಲ್ಲಿಯ ಗಯಾವಾಡರು ವಿಪುಲ ಸಂಪತ್ತನ್ನು ಮಠದಿಂದ ಎತ್ತಿಹಾಕುವ ಆಲೋಚನೆ ಯನ್ನು ಮಾಡಿ ೧೫೦೦೦ ರೂಪಾಯಿಗಳಿಲ್ಲದೆ ವಿಷ್ಣುಪಾದ ಗುಡಿಯ ಬಾಗಿಲಗಳನ್ನು ತೆಗೆಯಲಾಗುವದಿಲ್ಲವೆಂದು ನಿಷ್ಠುರವಾಗಿ ನುಡಿದರು. ಬಾಗಿಲಗಳಿಗೆ ಆಗಲೇ ಬೀಗಗಳು ಬಿದ್ದುವು. ಆದರೆ ಗಯಾವಾಡ ರಿಂದಲೇ ೧೫೦೦೦ರೂಪಾಯಿಗಳ ಕಾಣಿಕೆಯನ್ನು ಕೈಕೊಳ್ಳುವುದೆಂದು ಶ್ರೀಗಳ ಸಂಕಲ್ಪ. ಶ್ರೀಪಾದರು ಅರಗಳಿಗೆ ಧ್ಯಾನದಲ್ಲಿ ಕಣ್ಣು ಮುಚ್ಚಿದರು. ಕೂಡಲೆ ಬೀಗಗಳು ಕಳಚಿ ಬಿದ್ದುವು. ಆಬಳಿಕ ಶ್ರೀಗಳು ದೇವರ ದರ್ಶನವನ್ನು ತೆಗೆದುಕೊಂಡು ಬೇರೊತ್ತಟ್ಟಿಗೆ ಶ್ರೀ ಮೂಲರಾಮರ ಪೂಜೆಯನ್ನು ಪ್ರಾರಂಭಿಸಿದರು. ದಿನವೂ ಈ ಕ್ರಮವೇ ಸಾಗಿತು. ದರ್ಶನಕ್ಕೆ ಗಯಾವಾಡರಿಗೆ ಬರಲಪ್ಪಣೆಯಿರಲಿಲ್ಲ. ಪಿಂಡ ಪ್ರದಾನಾದಿಗಳು ಶ್ರೀಮೂಲರಾಮರ ಸನ್ನಿಧಿಯಲ್ಲಿಯೇ ನಡೆದುವು. ಈ ಮಾತಿಗೆ ಏಳು ದಿನಗಳಾದುವು. ಆಗ ಗಯಾವಾಡರು ಗಾಬರಿ ಗೊಂಡರು. ಶ್ರೀಗಳಿಗೆ ಬಹು ಧನವನ್ನು ಅರ್ಪಿಸಿ ಶರಣುಬಂದರು. ಆಗವರಿಗೆ ಶ್ರೀಮೂಲರಾಮರ ದರ್ಶನವಾಗಿ ಮುದ್ರಾಧಾರಣಾದಿ ಗಳು ದೊರೆತವು.

ಗಯೆಯಿಂದ ಮಠವು ಕಾಶಿಗೆ ಸಾಗಿತು. ಮೊದಲೇ ಶ್ರೀಗಳ

ಮಹಿಮೆಯು ಗಯಾವಾಡರಿಂದ ಕಾಶಿಯ ಜನರಿಗೆ ತಿಳಿದಿತ್ತಾದುದ ರಿಂದ ಅಲ್ಲಿಯ ಎಲ್ಲ ವಿದ್ವಾಂಸರೂ ಅವರ ಆಗಮನವನ್ನು ಆತುರರಾಗಿ ಕಾದುಕೊಂಡಿದ್ದರು. ಶ್ರೀಗಳು ಹೋಗುತ್ತಲೇ ಅವರನ್ನು ಬಲು ವೈಭವದಿಂದ ಊರಲ್ಲಿ ಕರೆದೊಯ್ದರು. ಮುಂದೆ ಭಾಗೀರಥಿಯ ಸ್ನಾನದ ಕಾಲಕ್ಕೆ ಶ್ರೀಗಳು ಅರ್ಪಣಮಾಡಿದ ವಸ್ತ್ರಾದಿಗಳನ್ನು ಭಾಗೀ ರಥಿಯು ಪ್ರತ್ಯಕ್ಷಳಾಗಿ ಸ್ವೀಕರಿಸಿದ್ದನ್ನು ನೋಡಿಯಂತೂ ಕಾಶಿಯ ಪಂಡಿತರು ಅವರ ಕಾಲಿಗೇ ಬಿದ್ದರು. ಅವರ ಸೇವೆಯನ್ನು ಭಕ್ತಿ ಯಿಂದ ಮಾಡಲೊಪ್ಪಿದರು. ಶ್ರೀಗಳು ಕಾಶಿಯಲ್ಲಿ ಕೆಲ ದಿನ ಪೂಜೆ ಯನ್ನು ಮಾಡುತ್ತಲಿದ್ದು ಆ ಮೇಲೆ ದಕ್ಷಿಣದ ಕಡೆಗೆ ಹೊರಟು ಮದ್ರಾಸಿಗೆ ಬಂದರು. ಅಲ್ಲಿ ತಿರುವಣಿಕೇಣಿ ಬೀದಿಯಲ್ಲಿ ಒಂದು ಪ್ರಾಣದೇವರ ಪ್ರತಿಷ್ಠಾಪನೆಯಾಯಿತು. ಮಂತ್ರೋಪದೇಶವನ್ನು ಮಾಡುತ್ತ ಅಲ್ಲಿಯೇ ಶ್ರೀಪಾದರು ಕೆಲವು ದಿನ ಇದ್ದು ಮುಂದೆ ರಾಮೇಶ್ವರದ ಯಾತ್ರೆಗೆ ಹೊರಟರು. ರಾಮೇಶ್ವರದಲ್ಲಿ ಕಾಶಿಯ ಗಂಗೋದಕದಿಂದ ರಾಮಲಿಂಗದ ಅಭಿಷೇಕವು ಯಥಾಸಾಂಗವಾಗಿ ಸಾಗಿತು. ಅಲ್ಲಿಯೂ ಶ್ರೀಗಳ ತಪೋಮಹಿಮೆಯು ಜನರಿಗೆ ಚೆನ್ನಾಗಿ ತಿಳಿಯಬಂದಿತು. ಇಲ್ಲಿಂದ ಮಠವು ಉಡಪಿಯ ಕ್ಷೇತ್ರಕ್ಕೆ ಸಾಗಿ ಬಂದಿತು.

ಆಗಲ್ಲಿ ಪರ್ಯಾಯ ಮಹೋತ್ಸವವು ಜರುಗುತ್ತಲಿದ್ದಿತು. ಎಂಟು ಮಠದ ಯತಿಗಳೂ ಕಲೆತಿದ್ದರು. ಅವರು ಶ್ರೀಗಳನ್ನು ಕಾಣು ತ್ತಲೇ ಅವರಿಂದ ತಮಗೆ ಬರಲಿರುವ **೧೨೦೦೦ ರೂಪಾಯಿಗಳ ಕಾಣಿ ಕೆಯ ಸಂಪ್ರದಾಯ**ವನ್ನು ಅವರಿಗೆ ಸೂಚಿಸಿದರು. ಇದಕ್ಕೆ ಶ್ರೀ ಗಳು ಒಪ್ಪಿದರು. ಪುರಪ್ರವೇಶವನ್ನು ಮಾಡುತ್ತಲೇ ಶ್ರೀಮೂಲ ರಾಮದೇವರ ವೇದವ್ಯಾಸದೇವರ ಹಸಿಬಿಯನ್ನು ಒಂದು ರಥದಲ್ಲಿರಿಸಿ ತಾವು ನಡೆಯುತ್ತ ನಡೆದರು. ಆದರೆ ಇದು ಸಂಪ್ರದಾಯವಿರುದ್ಧ ವೆಂದು ಎಂಟೂ ಯತಿಗಳು ಆಕ್ಷೇಪಿಸಿದರು. ಇದಕ್ಕೆ ಶ್ರೀಗಳು ತಮ್ಮೊ ಡನೆ ವಾಕ್ಯಾರ್ಥವನ್ನು ಮಾಡಿ ಜಯಿಸಿದರೆ ದೇವರ ಹಸಿಬೆಯು ಕೆಳ ಗಿಳಿಯುವುದೆಂದು ಅಂದರು. ವಾದಕ್ಕೆ ಮೊದಲಾಯಿತು. ಸಂಜೆಯ ಹೊತ್ತಿಗೆ ಎಲ್ಲರ ಬಾಯಿಯೂ ನಿಂತುಹೋಯಿತು. ಆದರೆ ಸೋದೆಯ

ಮಠದ ಸ್ವಾಮಿಗಳೊಬ್ಬರು ರಾತ್ರಿಯ ಒಂದು ಪ್ರಹರದ ವರೆಗೆ ಬಾಯಿ ಹಿಡಿದರು. ಅವರಿಗೂ ಮುಂದೆ ಸೋಲು ಬರಲು 'ಇವರು ಸತ್ಯಸಂಧರೋ ಅಥವಾ ಶಾಸ್ತ್ರದಲ್ಲಿ ಜರಾಸಂಧರೋ!' ಎಂದು ಅವರು ಉದ್ಗಾರವನ್ನು ತೆಗೆದರು, ಮತ್ತು ಶಿಟ್ಟಿಗೆದ್ದು ಶ್ರೀಗಳಿಗೆ ಶಾಪವನ್ನೇ ಕೊಡುತ್ತೇವೆಂದರು. ಇದರಿಂಗಿತವನ್ನು ದಿವ್ಯದೃಷ್ಟಿಯಿಂದ ತಿಳಿದು ಶ್ರೀಗಳು ಶಾಂತರಾಗಿ 'ನಿಮ್ಮ ಶಾಪದಂತೆ ನಿಜವಾಗಿಯೂ ನನ್ನ ವೃಂದಾವನವಾಗುವುದಕ್ಕೆ ಇನ್ನು ಹದಿನೈದೇ ದಿನಗಳುಳಿದದ್ದು ನನಗೆ ಈ ಮೊದಲೇ ಗೊತ್ತಿದೆ. ಆದರೆ ನಿಮ್ಮ ಇಹಲೋಕಯಾತ್ರೆಯ ಪರಿಸಮಾಪ್ತಿಯೂ ಇನ್ನು ಹದಿನೈದೇ ದಿನಗಳಿಗಿದೆ. ಆದ್ದರಿಂದ ನೀವೂ ಮಾಡಿಕೊಳ್ಳತಕ್ಕ ಸಾಧನೆಯನ್ನು ಮಾಡಿಕೊಳ್ಳಿರಿ' ಎಂದು ನುಡಿದರು. ಇದನ್ನು ಕೇಳಿ ಉಳಿದ ಯತಿಗಳೂ ಬೆರಗಾದರು. ಶ್ರೀಗಳ ಕ್ಷಮಾಶೀಲತೆಯನ್ನು ಹೊಗಳಿದರು.

ಆಗ ಎಲ್ಲರೂ ಶ್ರೀಮೂಲರಾಮ ವೇದವ್ಯಾಸರ ರಥವನ್ನು ಮುಂದೆ ಸಾಗಿಸಿದರು. ಶ್ರೀಗಳು ವೈಭವದಿಂದ ಬಿಡಾರಕ್ಕೆ ಬಂದು ಮುಟ್ಟಿದರು. ಮರುದಿನದಿಂದ ಯಥಾಕ್ರಮದಿಂದ ಎಂಟೂ ಮಠಗಳಲ್ಲಿ ಶ್ರೀಗಳ ಮೂಲರಾಮರ ಪೂಜೆಯು ನಡೆಯಿತು. ಎಂಟೂ ಯತಿಗಳಿಗೂ ಆಗ ಯೋಗ್ಯವಾದ ಮನ್ನಣೆಯು ದೊರೆಯಿತು. ಅಲ್ಲದೆ ಉಡುಪಿಯ ಶ್ರೀಕೃಷ್ಣನ ಪೂಜೆಯನ್ನು ಶ್ರೀಪಾದರು ದಿನವೂ ಮಾಡುತ್ತಲಿದ್ದು ಕಡೆಗೆ ೧೨೦೦೦ ರೂಪಾಯಿಗಳನ್ನು ದೇವರಿಗೆ ಸಮರ್ಪಿಸಿದರು. ಇದಕ್ಕೆ ಪ್ರತಿಯಾಗಿ ಎಂಟು ಯತಿಗಳಿಂದಲೂ ಶ್ರೀಗಳಿಗೆ ಯೋಗ್ಯವಾದ ಸತ್ಕಾರವು ದೊರೆಯಿತು.

ಈ ಹೊತ್ತಿಗೆ ಶ್ರೀಗಳ ಉಳಿದಿರುವ ಆಯುವಿನಲ್ಲಿಯ ೧೨ ದಿನಗಳು ಕಳೆದುಹೋದುವು. ಆಗ ಅವಸರದಿಂದ ಅವರು ತೀರ್ಥಹಳ್ಳಿಗೆ ಬರಲು ನಡೆದರು. ನಡುವೆ ಸೀತಾನದಿಯಲ್ಲಿ ಸ್ನಾನಮಾಡಿಕೊಂಡು ಶ್ರೀಗಳು ದೇವತಾರ್ಚನೆಯನ್ನು ಮುಗಿಸಿದರು. ಆ ಬಳಿಕ ಅವರು ತಮ್ಮ ಪರಿವಾರದವರನ್ನು ಹತ್ತಿರಕ್ಕೆ ಕರೆದು ಹೇಳಿದರು. "ನಮ್ಮ ಯಾತ್ರೆಯ ಸಮಯವು ಸಮೀಪಿಸಿದೆ. ಆದ್ದರಿಂದ ನಾವಿನ್ನು ಧ್ಯಾನ

ಸ್ಥರಾಗುವೆವು. ಬ್ರಾಹ್ಮಣಶಿಷ್ಯರೇ ನಮ್ಮನ್ನು ಪಲ್ಲಕ್ಕಿಯಲ್ಲಿರಿಸಿ ಮಹಿಷಿಯ ಕಡೆಗೆ ಅದನ್ನು ತೆಗೆದುಕೊಂಡು ನಡೆಯಲಿ. **ಝುಲಿಷಿ ಕೃಷ್ಣಾಚಾರ್ಯ**ರೂ **ಬಾಳಾಚಾರ್ಯ**ರೂ ಹತ್ತಿರಿದ್ದು ನಮ್ಮ ಧ್ಯಾನಸ್ಥ ಶರೀರವು ಮೇಲಕ್ಕೆ ಹಾರಿಹೋಗದಂತೆ ಹಿಡಿದಿರಲಿ. ನಾವು ಸಂಜ್ಞೆ ಮಾಡಿದ ಕೂಡಲೇ ನಮ್ಮ ಪೂರ್ವಾಶ್ರಮದ ತಮ್ಮಂದಿರಾದ **ಕೃಷ್ಣಾಚಾರ್ಯ**ರನ್ನು ನಮ್ಮ ಮುಂದೆ ತಂದು ನಮ್ಮಿಂದ ಅವರಿಗೆ ಆಶ್ರಮವನ್ನು ಕೊಡಿಸಿ ಸಂಸ್ಥಾನಕ್ಕೆ ಪಟ್ಟಗಟ್ಟಿರಿ. ಆಗಿನ ಅವರ ಹೆಸರು **ಸತ್ಯವರ**ರು. ಮುಂದೆ ಬ್ರಹ್ಮರಂಧ್ರ ಸ್ಫೋಟವಾಗಿ ಶರೀರವು ಕೆಳಗೆ ಕುಳಿತ ಮೇಲೆ ಆಗ ಮಾಡಬೇಕಾದ ವಿಧಿಗಳನ್ನು ಯಥಾಕ್ರಮವಾಗಿ ಮಾಡಿ ತೀರಿಸಿರಿ. ಆ ಮೇಲೆ ನಮ್ಮ ಶರೀರವನ್ನು ಬ್ರಾಹ್ಮಣಶಿಷ್ಯರೇ ಪಲ್ಲಕ್ಕಿಯಲ್ಲಿ ಹೊತ್ತುಕೊಂಡು ಹೋಗಿ ತುಂಗಾತೀರದ ಮಹಿಷಿಯ ಕ್ಷೇತ್ರದಲ್ಲಿ ನಮ್ಮ ವೃಂದಾವನವನ್ನು ಮಾಡಿಸಿರಿ. ಮೂರೂ ಮಠದ ಶಿಷ್ಯರು ಪರಸ್ಪರವಾಗಿ ವಿರೋಧವನ್ನು ಮಾಡಬಾರದೆಂತಲೇ ಪ್ರಲ್ಹಾದರ ಅಂಶದವರಾದ ನಾವು ವ್ಯಾಸರಾಯರು, ರಾಘವೇಂದ್ರತೀರ್ಥರು, ಸತ್ಯಸಂಧರು ಎಂದು ಮೂರು ಮಠಗಳಲ್ಲಿಯ ಅವತಾರಗಳಿಂದ ನಮ್ಮ ಆಚರಣೆಯಲ್ಲಿ ತೋರಿಸಿಕೊಟ್ಟಿದ್ದೇವೆ. ಅದೇ ಪ್ರಕಾರಕ್ಕೆ ನೀವೆಲ್ಲರೂ ಆಚರಿಸುತ್ತಿದ್ದು ಶ್ರೀಮದಾಚಾರ್ಯರ ಮತಕ್ಕೆ ಬೆಂಬಲವನ್ನು ಕೊಡಿರಿ. ಅದರಿಂದಲೇ ನಿಮ್ಮೆಲ್ಲರ ಜನ್ಮವು ಸಾರ್ಥಕವಾಗುವುದು'' ಇಷ್ಟು ಹೇಳಿ ಶ್ರೀಪಾದರು ಪದ್ಮಾಸನದಲ್ಲಿ ಧ್ಯಾನಸ್ಥರಾದರು. ಬ್ರಾಹ್ಮಣಶಿಷ್ಯರು ಅವರನ್ನು ಪಲ್ಲಕ್ಕಿಯಲ್ಲಿರಿಸಿಕೊಂಡು ಮಹಿಷಿಯತ್ತ ಕಡೆಗೆ ಸಾಗಿದರು. ಆದರೆ ಗಿಡಗಳಿಲ್ಲದ್ದರಿಂದ ಹಾದಿಯಲ್ಲಿ ಆ ಶಿಷ್ಯರಿಗೆ ಬಿಸಿಲತಾಪವು ಬಲವಾಯಿತು. ಆಗ ಶ್ರೀಗಳು ದಂಡಕಾಷ್ಟವನ್ನು ಅಭಿಮಂತ್ರಿಸಿ ಅದನ್ನು ಮುಂದೆ ಹಿಡಿದುಕೊಂಡೊಯ್ಯಲು ಸನ್ನೆ ಮಾಡಿದರು. ಅದರಂತೆ ಶಿಷ್ಯರು ಮಾಡಲು ಪಲ್ಲಕ್ಕಿಯ ಮೇಲಕ್ಕೆ ಸರಿಯಾಗಿ ಒಂದು ಮೋಡವು ಆ ಶಿಷ್ಯರೊಡನೆ ಸರಿಯುತ್ತ ನೆಳಲಾಗಿ ಸಾಗಿತು. ಈ ಕ್ರಮದಿಂದ ೨ ಹರದಾರಿಯ ಹಾದಿಯು ಹೋಯಿತು. ಅಲ್ಲಿ ಶ್ರೀಗಳು ಎರಡೂ ಕೈಗಳನ್ನೆತ್ತಿ ಸನ್ನೆ ಮಾಡಿದರು. ಆಗಲೀ ಪಲ್ಲಕ್ಕಿಯು ಕೆಳಗಿಳಿಯಿತು. ಪರಿವಾರದ ಶಿಷ್ಯರು ಅವರನ್ನು ಬೈಲಾ

ಜಿನಸುಖಾಸನದ ಮೇಲೆ ಆಸನ ಸಹಿತವಾಗಿ ಕುಳ್ಳಿರಿಸಿದರು. ಆ ಮೇಲೆ ಕೃಷ್ಣಾಚಾರ್ಯರು ಮುಂದಾದರು. ಸಂಪೂರ್ಣವಾದ ಕಟಾಕ್ಷ ನಿಕ್ಷೇಪದಿಂದ ಶ್ರೀಗಳು ಅನುಗ್ರಹಪೂರ್ವಕವಾಗಿ ಫಲಮಂತ್ರಾಕ್ಷತೆಗಳನ್ನು ಆಚಾರ್ಯರಿಗೆ ಕೊಟ್ಟು ಆಶ್ರಮವನ್ನಿತ್ತರು. ಮುಂದಿನ ವಿಧಾನಗಳೆಲ್ಲ ಆಗಿಹೋದುವು. ಇತ್ತ ಶ್ರೀಸತ್ಯಸಂಧರು ಶ್ವಾಸಧಾರಣವನ್ನು ಮಾಡುತ್ತಿರಲು ಅವರ ಶರೀರವು ಪುಟನೆಗೆಯತೊಡಗಿತು. ೪-೬ ಜನರು ಶಾಟಿಯಿಂದ ಕಟ್ಟಿ ಬಿಗಿಹಿಡಿದರೂ ೧ ಗೇಣು ಎತ್ತರವಾಗಿ ಅದು ನೇತಾಡಲಾರಂಭಿಸಿತು. ಮುಂದೆ ಒಂದು ಮುಹೂರ್ತ ಮಾತ್ರದಲ್ಲಿ ಬ್ರಹ್ಮರಂಧ್ರಸ್ಫೋಟವಾದ ಶಬ್ದವು ಕೇಳಿಸಿತು. ಬಳಿಕ ಅಗ್ರಜ್ವಲನದಿಂದ ತಲೆಯು ಬಿಸಿಯಾಗಿ ಬ್ರಹ್ಮರಂಧ್ರದ ಗುಂಡಿಯು ಬಿಚ್ಚಿ ಶ್ರೀಗಳು ೧೭೧೬ನೇ ಆನಂದ ಸಂವತ್ಸರದ ಜ್ಯೇಷ್ಠ ಶುದ್ಧ ೩ಗೆ ದೇವರ ಯಾತ್ರೆಯನ್ನು ಮಾಡಿದರು. ಶಿಷ್ಯರು ಸ್ವಾಮಿಗಳ ಶರೀರವನ್ನು ಹೊಸಬುಟ್ಟಿಯಲ್ಲಿರಿಸಿ ಅಭಿಷೇಕಾದಿ ಪೂಜಾವಿಧಿಗಳನ್ನು ತೀರಿಸಿದರು. ಮೂರನೆಯ ದಿನ ಶ್ರೀಗಳ ಅಪ್ಪಣೆಯಂತೆ ಅವರ ಶರೀರವು **ಮಹಿಷಿಗೆ** ಒಯ್ಯಲ್ಪಟ್ಟು ಅಲ್ಲಿಯೇ ತುಂಗಾತೀರದ ಅಶ್ವತ್ಥನಾರಾಯಣನ ಸನ್ನಿಧಾನದಲ್ಲಿ ವೃಂದಾವನಸ್ಥವಾಯಿತು. **ವಿಷ್ಣುಸಹಸ್ರನಾಮ**ಕ್ಕೆ ಇವರು ಟೀಕೆಯನ್ನು ಬರೆದಿದ್ದಾರೆ.

## ೨೭ ಶ್ರೀಸತ್ಯವರತೀರ್ಥರು



**ಪಟ್ಟ:- ೩-೧-೧೭೧೬ನೇ ಆನಂದದಿಂದ ೭-೫-೧೭೧೯ನೇ ಪಿಂಗಳದ ವರೆಗೆ**

ಇವರು ಹಿಂದಿನ ಶ್ರೀಗಳವರ ತಮ್ಮಂದಿರು. ಇವರು ಸಂಸ್ಥಾನದಲ್ಲಿದ್ದುಕೊಂಡು ವ್ಯಾಸಂಗವನ್ನು ಮಾಡಿಯೇ ಆಸ್ಥಾನಪಂಡಿತರೆಂದೆನಿಸಿಕೊಂಡು ಪಲ್ಲಕ್ಕಿಯ ಪದವನ್ನು ಪಡೆದಿದ್ದರು. **ತಿರುಪತಿಯ ಬಾಳಾಚಾರ್ಯರ** ಬಳಿಯಲ್ಲಿ ಇವರ ವ್ಯಾಕರಣಮೀಮಾಂಸಗಳ ಅಧ್ಯಯನವಾದದ್ದು. ನ್ಯಾಯವೇದಾಂತಗಳ ಅಧ್ಯಯನವು ಗುರುಗಳ ಬಳಿಯಲ್ಲಿ ಆಯಿತು.

**ಶ್ರೀಸತ್ಯಸಂಧರು** ತೀರ್ಥಹಳ್ಳಿಗೆ ಬರುವಾಗ ಹರಿಪದವನ್ನು ಹೊಂದಿ ಸಂಸ್ಥಾನಪಟ್ಟವು ಇವರಿಗಾಯಿತಷ್ಟೇ. ಈಗಿವರು ಗುರುಗಳ ಶರೀರವನ್ನು ಅಂದಣದಲ್ಲಿ(ಪಲ್ಲಕ್ಕಿಯಲ್ಲಿ)ಟ್ಟು ಅದರೊಡನೆ ಆಗುಂಬೆಯ ಘಟ್ಟವನ್ನೇರಿ ಬರುತ್ತಿದ್ದರು. ಅಲ್ಲಿ ಇವರನ್ನು ಟೀಪುಸುಲ್ತಾನ ಸರಕಾರದವರು ತಡೆದರು. ಆದುದರಿಂದ ಹೊಸ ಯತಿಗಳು **ಝುಲಿಪಿ ಕೃಷ್ಣಾಚಾರ್ಯ**ರೆಂಬವರನ್ನು ಒಂಟೆಯ ಸವಾರಿಯಿಂದ ಶ್ರೀರಂಗಪಟ್ಟಣಕ್ಕೆ ಕಳುಹಿ ಅಲ್ಲಿದ್ದ ಮಂತ್ರಿಶ್ರೇಷ್ಠರಾದ ಪೂರ್ಣಯ್ಯನವರಿಂದ ಅನುಜ್ಞಾಪತ್ರವನ್ನು ತರಿಸಿಕೊಂಡು ಗುರುಗಳ ಮನೀಷೆಯನ್ನು ಪೂರೈಸಿದರು.

ಮಹಿಷೀ ಕ್ಷೇತ್ರದಲ್ಲಿ ವಿಜೃಂಭಣೆಯಿಂದ ಗುರುಗಳ ಸಮಾರಾಧನೆಯನ್ನು ಮಾಡಿ ಭೋಜನದಿಂದಲೂ ದಾನಾದಿಗಳಿಂದಲೂ ಬ್ರಾಹ್ಮಣರನ್ನು ಹರುಷಗೊಳಿಸಿ ಹೊಸ ಶ್ರೀಗಳು ಅಲ್ಲಿಯೇ ೬ ತಿಂಗಳುಗಳ ವರೆಗೆ ಇದ್ದರು. ಆ ವೇಳೆಯಲ್ಲಿ ಮಠವು ಕಟ್ಟಿ ಮುಗಿಯಿತು.

ಇಲ್ಲಿಂದ ಮುಂದೆ ಶ್ರೀಗಳು ಸವಣೂರ ಪ್ರಾಂತದ ಕಡೆಗೆ ತೆರಳಿದರು. ಸವಣೂರಲ್ಲಿ ಇವರು ಆರು ತಿಂಗಳುಗಳ ವರೆಗೆ ಪರಮ ಗುರುಗಳಾದ ಶ್ರೀಸತ್ಯಬೋಧರ ಸನ್ನಿಧಿಯಲ್ಲಿ ಪಾದುಕೆಗಳನ್ನು ತೆಗೆದಿಟ್ಟು ಅಲವಣಾಹಾರದಿಂದ ೨೪ಲಕ್ಷ ಪ್ರಣವ ಜಪಗಳನ್ನು ಮಾಡಿ ಗುರುಗಳಿಗೆ ಸಮರ್ಪಿಸಿದರು. ತಮ್ಮ ಗುರುಗಳಿಂದ ರಚಿತವಾದ ವಿಷ್ಣುಸಹಸ್ರನಾಮದ ಟೀಕೆಯ ಪ್ರಸಾರವನ್ನು ಶ್ರೀಪಾದರು ಮಾಡಿದ್ದು ಇಲ್ಲಿಯೇ. ಇದಲ್ಲದೆ ಶ್ರೀರಾಮವೇದವ್ಯಾಸರಿಗೆ ಕೋಟಿ ತುಳಸಿಯ ಅರ್ಚನೆಯನ್ನು ಮಾಡಿ ಲಕ್ಷ ಬ್ರಾಹ್ಮಣರ ಭೋಜನವನ್ನೂ ಶ್ರೀಗಳು ಇಲ್ಲಿ ಮಾಡಿಸಿದರು.

ಇಲ್ಲಿಂದ ಸಂಸ್ಥಾನವು ತಿರುಪತಿಗೆ ತೆರಳಿತು. ಅಲ್ಲಿ ಶ್ರೀಗಳು ೪-೬ದಿನ ಶ್ರೀ ಶ್ರೀನಿವಾಸನ ಪೂಜೆಯನ್ನು ಮಾಡುತ್ತಲಿದ್ದರು. ಈ ಕಾಲದಲ್ಲಿ ಅವರು ವಿಶೇಷವಾಗಿ ಆವ್ಹಾಹನ ಮಂತ್ರವನ್ನು ಜಪಿಸಿ ೪ ಪ್ರತಿಮೆಗಳನ್ನು ಮಾಡಿದರು ಅವುಗಳನ್ನು ತಮ್ಮ ಶಿಷ್ಯರಾದ ೧) **ದಿಗ್ಗಾವಿಯ ಆಚಾರ್ಯ**ರು ೨) **ಕರದೀಪದ ಆಚಾರ್ಯ**ರು

೩) **ಉಮಜ್ಜಿಯ ಲಕ್ಷ್ಮಣಾಚಾರ್ಯ**ರು ೪) **ಆದ್ಯ ಶಾಮಾ ಚಾರ್ಯ**ರು ಈ ನಾಲ್ವರಿಗೆ ಪರಮಾನುಗ್ರಹದಿಂದ ಕೊಟ್ಟುಬಿಟ್ಟರು.

ಮುಂದೆ ಅನಂತಪುರ ಮುಂತಾದೆಡೆಗಳಲ್ಲಿ ಮನ್ನಣೆಯನ್ನು ಹೊಂದುತ್ತ ನಳ ಸಂವತ್ಸರದಲ್ಲಿ ತುಲಾ ಕಾವೇರಿಯ ಸ್ನಾನಾರ್ಥ ವಾಗಿ ಶ್ರೀಗಳು ಶ್ರೀರಂಗಪಟ್ಟಣದ ಕಡೆಗೆ ಬರುತ್ತಿದ್ದರು. ನಡುವೆ ಚಂದಗಾಲವೆಂಬ ಹಳ್ಳಿಯು ಬಂತು. ಶ್ರೀವಿದ್ಯಾಧೀಶರ ಕರಾರ್ಚಿತ ವಾದ ಶ್ರೀರಾಮ ಹಾಗೂ ಮುಖ್ಯಪ್ರಾಣರ ಪ್ರತಿಮೆಗಳಿವೆಯೆಂದು ಶ್ರೀಪಾದರು ಅಲ್ಲಿಳಿದರು.

ಈ ಸುದ್ದಿಯನ್ನು ಕೇಳಿ **ಮಂತ್ರಿವರರಾದ ಪೂರ್ಣಯ್ಯ**ನವರು ಸಂಸ್ಥಾನದ ಯೋಗಕ್ಷೇಮಕ್ಕೆಂದು **ತೀರ್ಥ ಶ್ರೀನಿವಾಸಾಚಾರ್ಯ**ರು **ಸಂಜೀವ ಕೃಷ್ಣಾಚಾರ್ಯ**ರು, **ಹಿರಿ ದಾಸಾಚಾರ್ಯ**ರು, **ತಾಮ್ರ ಪರ್ಣಿ ಆಚಾರ್ಯ**ರು ಈ ನಾಲ್ವರು ಪಂಡಿತರೊಡನೆ ಬಂದರು. ಟೀಪುಸುಲ್ತಾನನ ಪ್ರಾಬಲ್ಯವು ಆಗ ಬಹಳವಾಗಿದ್ದುದರಿಂದ ಮಠದ ಅಭಿಮಾನಿಗಳೆಲ್ಲ ಶ್ರೀಗಳವರ ಸುರಕ್ಷಿತೆಗೆಂದೂ ಮಠದ ಅಭಿವೃದ್ಧಿ ಗೆಂದೂ ಆಗ ಗುಪ್ತಾಲೋಚನೆಯನ್ನು ಮಾಡಿದರು.

ಕೆಲವು ಕಾಲ **ರಾಮನಾಥಪುರ**ವೆಂಬ ಸುಬ್ರಹ್ಮಣ್ಯದಲ್ಲಿದ್ದು ಮುಂದೆ ಚಲೋ ದಿನಗಳು ಬರುವನಕ ಸಂಸ್ಥಾನವು ಶ್ರೀವೇದವ್ಯಾಸ ತೀರ್ಥರಿಂದ ನಿರ್ಮಿತವಾದ **ತನಗುಂಡಿ** ಕ್ಷೇತ್ರದಲ್ಲಿರಬೇಕೆಂದು ನಿರ್ಣ ಯವಾಯಿತು. ಅವಶ್ಯವಾದ ಪ್ರತಿಮೆ ಬಂಗಾರದೊಡವೆಗಳನ್ನುಳಿದು ಸಂಸ್ಥಾನದ ಬೇರೆ ಮೌಲ್ಯವಾದ ಆಭರಣಾದಿ ವಸ್ತುಗಳನ್ನೆಲ್ಲ ಸಂತೆ ಬಿನ್ನೂರಲ್ಲಿದ್ದ ಪೂರ್ಣಯ್ಯನವರ ಅಣ್ಣನ ಮಕ್ಕಳಾದ **ಹಿರಣ್ಯಪ್ಪ** ನವರಲ್ಲಿ ನೆಲದಲ್ಲಿಡುವದೆಂದು ಗೊತ್ತಾಯಿತು. ಇಷ್ಟರಲ್ಲಿ ತುರು ಷ್ಕರ ಹಾವಳಿಗೆ ಮೊದಲಾಯಿತು. ಆದ್ದರಿಂದ ಪೂರ್ಣಯ್ಯನವರು ೫೦ ಜನ ಓಲೆಕಾರರನ್ನು ತಮ್ಮ ಸಂಗಡ ಇದ್ದ ನಾಲ್ಕುಜನ ಆಚಾರ್ಯ ರನ್ನೂ ಅಲ್ಲದೆ **ಪಾರುಪತ್ಯ ಆಚಾರ್ಯರನ್ನೂ ಶಾನಭೋಗ ಶಾಮಾಚಾರ್ಯ**ರನ್ನೂ ಶ್ರೀಗಳ ರಕ್ಷಣೆಗಾಗಿರಿಸಿ ಅವರಿಂದ ಅಪ್ಪಣೆ ಪಡೆದು ಶ್ರೀರಂಗಪಟ್ಟಣಕ್ಕೆ ತೆರಳಿದರು. **ಸಂತೆಬಿನ್ನೂ**ರಲ್ಲಿರುವ

ತಮ್ಮ ಮನೆಯನ್ನು ಅಯ್ಯನವರು ಮಠಕ್ಕೆ ಕೃಷ್ಣಾರ್ಪಣಪೂರ್ವಕ ವಾಗಿ ಕೊಟ್ಟು ಮಠದ ವಾಸಕ್ಕೆ ತಕ್ಕಂತೆ ಆದರಲ್ಲಿ ಏರ್ಪಾಡುಗಳನ್ನು ಮಾಡಿಸಿಕೊಡಲು ಅಣ್ಣನ ಮಕ್ಕಳಾದ ಹಿರಣ್ಯಪ್ಪನವರಿಗೆ ಹೇಳಿಕಳು ಹಿದರು.

ಇಷ್ಟಾದ ಮೇಲೆ ಸಂಸ್ಥಾನವು ಮುಂದಕ್ಕೆ ಹೊರಟು ಪೆನಗುಂಡಿಗೆ ಬಂತು. ಅಲ್ಲಿ ಶ್ರೀ ವೇದವ್ಯಾಸರ ದರ್ಶನವಾಗಿ ಮುಂದೆ ನಾವು ಗುಂಡಲಿಯೆಂಬ ಗ್ರಾಮಕ್ಕೆ ಬಂದಿತು. ಅಲ್ಲಿ ಜಯತೀರ್ಥಾಚಾರ್ಯರೆಂಬವರು ಬಲು ಭಕ್ತಿಯಿಂದ ವಾನಪ್ರಸ್ಥಾಶ್ರಮಿಗಳಾಗಿ ಅಡವಿಯಲ್ಲಿಯೇ ವಾಸವಾಗಿರುತ್ತಿದ್ದರು. ಅದುಕಾರಣವೇ ಅವರಿಗೆ **ಅಡವಿಯ ಆಚಾರ್ಯ**ರೆಂದು ಜನರನ್ನುತ್ತಿದ್ದರು. ಶ್ರೀಗಳು ಬಂದದ್ದನ್ನು ತಿಳಿದು ಆಚಾರ್ಯರು ಅವರೆಡೆಗೆ ಬಂದು ತಮ್ಮ ಸನ್ಯಾಸಕ್ಕೆ ಅಪ್ಪಣೆಯನ್ನು ಕೇಳಿದರು. ಅದಕ್ಕೆ ಶ್ರೀಗಳು ಒಪ್ಪಿ ಅವರಿಗೆ ಸನ್ಯಾಸವನ್ನಿತ್ತು "**ವಿಷ್ಣುತೀರ್ಥ**'ರೆಂದು ಅವರನ್ನು ಕರೆದರು. ಮುಂದವರಿಗೆ ಪ್ರಣವೋಪದೇಶವಾಗಿ ಮಲಾಪಹಾರಿಯ ತೀರದಲ್ಲಿ ಸುಧಾಪ್ರವಚನವನ್ನು ಮಾಡಿಸಲಿಕ್ಕೆ ಶ್ರೀಪಾದರು ಆಜ್ಞೆಯನ್ನಿತ್ತರು.

ಆ ಮೇಲೆ ಶ್ರೀಗಳು ಅಲ್ಲಿಯೇ ಕೆಲ ಕಾಲವಿದ್ದು ಉತ್ತರ ದೇಶದಲ್ಲಿ ಸಂಚಾರಕ್ಕೆಂದು ಸಿದ್ಧತೆಯನ್ನು ನಡೆಸಿದರು. ಇದನ್ನರಿತು ಪೂರ್ಣಯ್ಯನವರಿಂದ ನಿಯಮಿಸಲ್ಪಟ್ಟಿದ್ದ ನಾಲ್ವರು ಆಚಾರ್ಯರು ತುರುಕರ ಬಾಧೆಯು ಕಡಿಮೆಯಾಗುವ ವರೆಗೆ ಸಂತೆಬಿನ್ನೂರಲ್ಲಿ ಅಯ್ಯನವರು ಕಟ್ಟಿಸಿಟ್ಟ ಮಠದಲ್ಲಿಯೇ ವಾಸವಾಗಿರಬೇಕೆಂದು ಶ್ರೀಗಳನ್ನು ಬೇಡಿಕೊಂಡರು.

ಆಗದಕ್ಕೆ ಸ್ವಾಮಿಗಳು ಒಪ್ಪಿದರು. ಸಂತೆಬಿನ್ನೂರಿಗೆ ಹೋಗಲು ಪ್ರಯಾಣಬೆಳೆಸಿದರು. ಆಪದ್ಧನವೆಂದು ಶ್ರೀಸತ್ಯಬೋಧರು ೫೦ ತಪ್ಪೇಲಿ ವರಹಗಳನ್ನು ಸಂಗ್ರಹಿಸಿಟ್ಟಿದ್ದರು. ಈ ಹಣವು ಈಗ ಶ್ರೀಗಳ ಸಂಗಡವೇ ಇತ್ತು. ಮತ್ತು ಶ್ರೀವೇದವ್ಯಾಸರ ನವರತ್ನ ಖಚಿತವಾದ ಸಂಪುಟವೂ ಇತ್ತು. ಇವುಗಳನ್ನು ಕದ್ದೊಯ್ಯಲೆಂದು **ಪುದ್ನಾವರ್ತಿ ರಾಘವಾಚಾರ್ಯ**ನೆಂಬೊಬ್ಬನು ಹೊಂಚುಹಾಕಿ

ಕುಳಿತಿದ್ದನು. ಒಮ್ಮೆ ಶ್ರೀಗಳು ರಾತ್ರಿಯಲ್ಲಿ ಅಲ್ಪಾಚಮನಕ್ಕೆಂದು ಹೋದಾಗ ಆಚಾರ್ಯನು ಮಣೆಯ ಮೇಲಿಟ್ಟ ಮೂಲರಾಮದೇವರ ಪೆಟ್ಟಿಗೆಯೊಂದನ್ನೇ ಎತ್ತಿಕೊಂಡು ಬುಟ್ಟಿಯನ್ನು ಬೋರ್ಲುಹಾಕಿ ವಸ್ತ್ರದಿಂದದನ್ನು ಮುಚ್ಚಿ ಓಡಿ ಹೋದನು.

ಮರುದಿನ ಕಳವಾದದ್ದು ತಿಳಿದು ಶ್ರೀಗಳು ಶ್ರೀವೇದವ್ಯಾಸರ ಪೂಜೆಯನ್ನಷ್ಟೇ ಮಾಡಿ ತೀರ್ಥ ತೆಗೆದುಕೊಂಡು ಉಪೋಷಣೆಗೆ ಆರಂಭಿಸಿದರು. ಈ ಸುದ್ದಿಯು ತಿಳಿದು **ಪೂರ್ಣಯ್ಯ**ನವರು ಬಂದು 'ಎಲ್ಲಿದ್ದರೂ ದೇವರನ್ನು ಹುಡುಕಿಸಿ ತರಿಸುವೆನು; ಆದರೆ ದಯವಿಟ್ಟು ಫಲಾಹಾರವನ್ನು ತೆಗೆದುಕೊಳ್ಳಿ'ರೆಂದು ಶ್ರೀಗಳಿಗೆ ಬೇಡಿಕೊಂಡರು. ಆದರೆ ಸ್ವಾಮಿಗಳು ಒಪ್ಪಲಿಲ್ಲ. ಆಗ ಕಳ್ಳಕಾಕರನ್ನು ಗೊತ್ತು ಹಚ್ಚಿ ಅವರಲ್ಲನೇಕ ನೀಚರ ಕೊಲೆಯನ್ನೇ ಅಯ್ಯನವರು ಮಾಡಿಸ ತೊಡಗಿದರು. ಕೆಲವರನ್ನು ಗಿಡಕ್ಕೆ ಕಟ್ಟಿಸಿ ಕಶೆಗಳಿಂದ (ಬಾರಿಕೋಲುಗಳಿಂದ) ಪ್ರಹರಿಸತೊಡಗಿದರು. ಈ ಭಯಾನಕವಾದ ಸ್ಥಿತಿಯಿಂದ ಕಳ್ಳರೊಳಗೆ ಹಾಹಾಕಾರವೇ ಎದ್ದಿತು. ಇದನ್ನು ತಿಳಿದು ದೇವರನ್ನು ಕದ್ದೊಯ್ದ ಹಾರುವನು ಅಂಜಿಕೆಯಿಂದ ಆಭರಣಗಳನ್ನು ಮಾತ್ರ ಬಿಚ್ಚಿಕೊಂಡು ಮೂಲಸೀತಾರಾಮದೇವರ ಪ್ರತಿಮೆಯನ್ನು ಬಾಳೆಯ ಎಲೆಯಲ್ಲಿ ಮುಚ್ಚಿ ರಾಗಿಯ ಹುಲ್ಲುಬಣವೆಯಲ್ಲಿ ಒಂದು ಬಾವಿಯ ಬಳಿಯಲ್ಲಿ ತಂದಿರಿಸಿ ಎಲ್ಲಿಯೋ ಕಾಲಿಗೆ ಬುದ್ಧಿಯನ್ನು ಹೇಳಿದನು.

ಇಷ್ಟರಲ್ಲಿ ಇಪ್ಪತ್ತು ದಿನಗಳು ಕಳೆದಿದ್ದುವು. ೨೧ನೆಯ ದಿನ ಮಠದ ಪಂಡಿತರಾದ ಸವಣೂರ ಪ್ರಾಂತದ **ನವರತ್ನ ಅಣ್ಣಯ್ಯಾಚಾರ್ಯ**ರೆಂಬುವವರು ಮೋರೆಯನ್ನು ತೊಳೆಯಲೆಂದು ಮೇಲಿನ ಬಾವಿಗೆ ಅಕಸ್ಮಾತ್ತಾಗಿ ಬಂದರು. ಸಹಜವಾಗಿ ಅವರ ದೃಷ್ಟಿಯು ಆಗ ಹುಲ್ಲುಬಣವೆಯ ಕಡೆಗೆ ಹೋಯಿತು. ಬಾಳೆಯ ಎಲೆಯು ಹಾರಾಡುತ್ತಿತ್ತು. ಏನಿದೆಯೆಂದು ಕುತೂಹಲದಿಂದ ಅಲ್ಲಿಗೆ ಬಂದು ಎಲೆಯನ್ನು ಅವರು ಎತ್ತಿ ನೋಡಿದರು. ಆಗಲ್ಲಿ ಶ್ರೀಮೂಲಸೀತಾರಾಮರ ಮೂರ್ತಿಗಳು ಕಂಗೊಳಿಸಿದುವು. ಆಚಾರ್ಯರು ಹಿರಿಹಿರಿ ಹಿಗ್ಗಿದರು.

ಶ್ರೀಗಳ ೨೧ದಿವಸಗಳ ಉಪವಾಸದ ಫಲವು ದೊರೆಯಿತೆಂದು ಹರುಷ
ಬಡುತ್ತ ಶ್ರೀಗಳಿದ್ದಲ್ಲಿಗೆ ಓಡಿಬಂದರು. 'ತಮ್ಮ ತಪಸಿಗೆ ಮೆಚ್ಚಿ
ಶ್ರೀರಾಮರು ಪ್ರತ್ಯಕ್ಷರಾಗಿದ್ದಾರೆ. ವಾದ್ಯವೈಭವದೊಡನೆ ಅವರನ್ನು
ಬರಮಾಡಿಕೊಳ್ಳಿ'ರೆಂದು ಹಿಗ್ಗಿನಿಂದ ಹೇಳಿದರು.

ಈ ಸಮಾಚಾರದಿಂದ ೨೧ದಿನದ ಉಪೋಷಣದ ಆಯಾಸವೇ
ಶ್ರೀಗಳಿಗೆ ಕಳೆದಂತಾಯಿತು. ಅವರು ದಿಗ್ಗನೆ ಎದ್ದು ಪಾಟಿಯನ್ನೆಳಿ
ಮಕೊಂಡು ದೇವರ ದರ್ಶನಕ್ಕೆ ಧಾವಿಸಿದರು. ಮಠದವರು ಸಮಾ
ಧಾನಗೊಳಿಸಿ ಶ್ರೀಗಳಿಗೆ ಆವಿಗೆಗಳನ್ನು ಹಾಕಿಕೊಳ್ಳಲು ಕೊಟ್ಟರು.
ಮಠದ ವಾದ್ಯವೈಭವಗಳು ಅವರನ್ನು ಹಿಂಬಾಲಿಸಿದುವು. ಶ್ರೀಗಳು
ಮೂರ್ತಿಗಳನ್ನು ಕಾಣುತ್ತಲೆ ಅವರ ಕಣ್ಣಲ್ಲಿ ನೀರು ತುಂಬಿಬಂದುವು.
ಮೂರ್ತಿಗಳನ್ನು ಅಪ್ಪಿಕೊಂಡು ಬಾಷ್ಪಗಳಿಂದಲೇ ಅಭಿಷೇಕವನ್ನು
ಮಾಡಿದರು. ಆ ಮೇಲೆ ಮಂಗಳಾರತಿ ಫಲನೈವೇದ್ಯ ಮೊದಲಾ
ದುವು ವೇದಘೋಷದೊಡನೆ ಸಾಗಿಹೋದುವು. ನಂತರ ದೇವರನ್ನು
ಪೆಟ್ಟಿಗೆಯಲ್ಲಿರಿಸಿ ಶ್ರೀಗಳು ಆಯಾಸದಿಂದ ಮೂರ್ಛಿತರಾದರು.
ಶ್ರೀಗಳನ್ನು ಪಲ್ಲಕ್ಕಿಯಲ್ಲಿ ಒಯ್ದರು. ದೇವರ ಪೆಟ್ಟಿಗೆಯನ್ನು ಎಡ
ಸೇವಿಯ ಬೋಧರಾಜಾಚಾರ್ಯರೆಂಬವರ ಮೇಲಿನಿಂದ ಮಠಕ್ಕೆ ಸಾಗಿಸಿ
ದರು. ಆ ಮೇಲೆ ಅನೇಕ ಉತ್ಸವಗಳೂ ಬ್ರಾಹ್ಮಣರ ಭೋಜನಾದಿ
ಗಳೂ ಆದುವು.

ಈ ಆನಂದದ ಸುದ್ದಿಯನ್ನು ಕೇಳಿ ಪೂರ್ಣಯ್ಯನವರು ಮಠಕ್ಕೆ
ಬಂದರು. ಶ್ರೀಗಳನ್ನು ಶ್ರೀಮೂಲಸೀತಾರಾಮರ ಸನ್ನಿಧಿಯಲ್ಲಿದ್ದು
ದನ್ನು ಕಣ್ತುಂಬ ನೋಡಿದರು. ಆ ಮೇಲೆ ಅವರ ದೇಹಸ್ಥಿತಿಯ ಕಡೆಗೆ
ದಿಟ್ಟಿಸಿ ನೋಡಿ ಮಠಕ್ಕೆ ಯಾರನ್ನಾದರೂ ಪಟ್ಟಗಟ್ಟುವ ಸಮಯವು
ಇದೇ ಎಂದು ಶ್ರೀಗಳಿಗೆ ವಿನಯದಿಂದ ಸೂಚಿಸಿದರು. ಶ್ರೀಗಳು
ಹೋದ ಶ್ರೀಸೀತಾಮೂಲರಾಮರನ್ನು ಕಂಡುಹಿಡಿದು ಬಂದ ನವರ
ತ್ನದ ಅಣ್ಣಯ್ಯಾಚಾರ್ಯರ ಹೆಸರನ್ನೆತ್ತಿದರು. ಅವರಿಂದಲೇ ಮಠದ
ಅಭಿವೃದ್ಧಿಯಾಗುವದೆಂದು ದೇವರ ಸೂಚನೆಯಾಗಿದೆಯೆಂಬು ತಿಳಿಸಿ
ದರು.

ಶ್ರೀಪಾದರ ಅಭಿಪ್ರಾಯದಂತೆ ಎಲ್ಲ ಸಿದ್ಧತೆಯಾಯಿತು. ಸಂಜೆಯ ಸಮಯಕ್ಕೆ ಶಿಷ್ಯರಿಂದ ಗಟ್ಟಿಯಾಗಿ ಹಿಡಿಸಿಕೊಂಡು ಕುಳಿತು **ಅಣ್ಣಯ್ಯಾಚಾರ್ಯ**ರಿಗೆ ಸನ್ಯಾಸವನ್ನು ಕೊಟ್ಟು ಶ್ರೀಪಾದರು '**ಸತ್ಯ ಧರ್ಮ**'ರೆಂದವರನ್ನು ಕರೆದರು. ಆ ಮೇಲೆ ಸಂಸ್ಥಾನಪಟ್ಟಾಭಿಷೇಕ ವಾಯಿತು. ಆ ದಿನವೇ ರಾತ್ರಿ ಅಯ್ಯನವರು ಮುಂದಿನ ಕಾರ್ಯ ಗಳನ್ನು ಸಾಂಗವಾಗಿ ಸಾಗಿಸಲಿಕ್ಕೆ ಹಿರಣ್ಯಪ್ಪನವರಿಗೆ ಹೇಳಿ ಶ್ರೀರಂಗ ಪಟ್ಟಣಕ್ಕೆ ತೆರಳಿದರು.

ನಂತರ ೨ ದಿನಗಳ ಮೇಲೆ ಶ್ರೀ ಸತ್ಯವರರು ೧೭೧೯ನೇ ಶ್ರಾವಣ ಶುದ್ಧ ೭ ದಿನ ನಾರಾಯಣಧ್ಯಾನಪರರಾದರು. ಇವರ ವೃಂದಾವನವು **ಸಂತೆಬಿನ್ನೂರ**ಲ್ಲಾಗಿದೆ. ಇವರು **ವಾಯ್ವಂಶ**ರೆಂದು ಹೇಳಿಕೆಯಿದೆ.

# ೨೮ ಶ್ರೀ ಸತ್ಯಧರ್ಮತೀರ್ಥರು.

ಪಟ್ಟ:- ೭-೫-೧೭೧೯ನೇ ಪಿಂಗಳದಿಂದ ೨೮-೬-೧೭೫೨ನೇ ವಿಕೃತಿಯ ವರೆಗೆ

ಇವರು ಪೂರ್ವಾಶ್ರಮದಲ್ಲಿ ಬಹು ದಾರಿದ್ರ್ಯದಿಂದ ಪೀಡಿತ ರಾಗಿದ್ದರು. ಆದ್ದರಿಂದ ಮಂತ್ರಾಲಯದ ಸ್ವಾಮಿಗಳ ಸೇವೆಯನ್ನು ಮಾಡಿ ಅವರನುಜ್ಞೆಯಿಂದ ಉತ್ತರಾದಿ ಮಠಕ್ಕೆ ಬಂದು ಸೇರಿದರು. ಉತ್ತರಾದಿ ಮಠದ ಪೀಠವು ನಿಮಗೆ ಸಿಕ್ಕು ನೀವು ಮಹಾಮಹಿಮರಾ ಗುವಿರೆಂದು ರಾಯರು ಕನಸಿನಲ್ಲಿ ಹೇಳಿದಂತಾಗಿತ್ತಂತೆ. ಎಲ್ಲವೂ ನಿಜ ವಾಯಿತು. ಶ್ರೀಗಳಾದ ಮೇಲೆ ತಮ್ಮ ಗುರುಗಳ ಆರಾಧನೆಯನ್ನು ಚೆನ್ನಾಗಿ ಮಾಡಿ ಅವರ ವೃಂದಾವನವನ್ನು ಸಂತೇಬಿನ್ನೂರಲ್ಲಿ ಮಾಡಿಸಿದರು. ಶ್ರೀಪಾದಪುತ್ರರಾದ **ಹಾವೇರಿ ಸ್ವಾಮಿರಾಯಾ ಚಾರ್ಯ**ರಿಗೆ ಕೆಲವು ಗ್ರಾಮಗಳನ್ನು ಕೊಟ್ಟು ಸಂತಸಗೊಳಿಸಿದರು.

ಆ ಬಳಿಕ ಸಂಸ್ಥಾನದ ಸಕಲ ಸಂಪತ್ತನ್ನೂ ತೆಗೆದುಕೊಂಡು ಅರಮನೆಯ ಓಲೆಕಾರ ಮತ್ತು ಆಯುಧಪಾಣಿಗಳಾದ ಸಿಪಾಯಿಯ ರೊಡನೆ ಶ್ರೀಗಳು ಸವಣೂರ ಪ್ರಾಂತದ ಕಡೆಗೆ ಸಾಗಿಹೋದರು.

ಅಲ್ಲಿದ್ದಾಗ ಮುದ್ರಾಧಾರಣಪಾಠಪ್ರವಚನಾದಿಗಳಿಂದ ಎಲ್ಲರನ್ನೂ ಸ್ವಾಮಿಗಳು ಸಂತುಷ್ಟಗೊಳಿಸಿದರು.

ಸಂಚಾರದಲ್ಲಿಯೂ ತಮ್ಮ ಪೂರ್ವಾಶ್ರಮದ ಮಕ್ಕಳಾದ ನವರತ್ನ ಬೋಧರಾಯಾಚಾರ್ಯರಿಗೆ ಪಾಠವನ್ನು ಶ್ರೀಗಳು ಹೇಳುತ್ತಲೇ ಇದ್ದರು. ಈ ರೀತಿಯಿಂದ ಶ್ರೀಗಳು **ಭಾಗ್ಯನಗರ**ವೆಂದೆನಿಸಿದ ಹೈದರಾಬಾದ ನಗರಕ್ಕೆ ಬಂದರು. **ಶ್ರೀ. ರಾಜಾನಾರಾಯಣರಾಯ**ರೆಂಬ ಧನವಂತರ ಮುಖಾಂತರವಾಗಿ ಅಲ್ಲಿಯ ಮಹಮ್ಮದೀಯ ರಾಜನಿಂದ ಬಹುವಾದ ಮನ್ನಣೆಯನ್ನು ಹೊಂದಿ ಮುಂದೆ ಚಾತುರ್ಮಾಸ್ಯಕ್ಕೆಂದು ಲಿಂಗಂಪಲ್ಲಿಯೆಂಬೂರಿಗೆ ಶ್ರೀಪಾದರು ದಯಮಾಡಿಸಿದರು. ಆಗಲ್ಲೊಂದು ಮಠವು ಸ್ಥಾಪಿತವಾಯಿತು. ಮಂತ್ರೋಪದೇಶ, ಮುದ್ರಾಧಾರಣಾದಿಗಳಿಂದ ಮಠಕ್ಕೆ ಅಲ್ಲಿ ಎಷ್ಟೋ ಜನ ಶಿಷ್ಯರಾದರು

ಆ ಮೇಲೆ ಮಠವು ರಾಜಮಹೇಂದ್ರಿಗೆ ಸಾಗಿತು. ಅಲ್ಲಿಯೇ ಕೆಲಕಾಲ ಉಳಿದು ಮಠವು ಬಳಿಕ ಗೋದಾವರಿಯ ತೀರದಲ್ಲಿ ತಿರುಗುತ್ತಿತ್ತು. ಆಗಲ್ಲಿಗೆ ಒಮ್ಮೆ ವಿಜಯನಗರದ ರಾಜನು ಬಂದನು. **ಪಾರುಪತ್ಯ ಆಚಾರ್ಯಸ್ವಾಚಾರ್ಯ, ಕಲ್ಲಾಪುರ ರಾಮಚಂದ್ರಾಚಾರ್ಯ**ರು ಅವನಿಗೆ ಮಠದ ಮಹಿಮೆಯನ್ನು ತಿಳಿಸಿದರು. ಭಕ್ತಿಯು ಹುಟ್ಟಿ ಅವನು ಶ್ರೀಗಳಿಗೆ ತನ್ನ ರಾಜ್ಯಕ್ಕೆ ಬರಲು ಬೇಡಿಕೊಂಡನು.

ಶ್ರೀಗಳನ್ನು ಊರಿಗೆ ಕರೆತರಲೆಂದು ತನ್ನ ಮಂತ್ರಿಯನ್ನು ರಾಜನು ವಾದ್ಯವೈಭವಗಳೊಡನೆ ಕಳುಹಿದನು. ಶ್ರೀಗಳು ಸಂತೋಷಪಟ್ಟು ಮಂತ್ರಿಯನ್ನು ಹಿಂಬಾಲಿಸಿದರು. ಮಂತ್ರಿಯು ಶ್ರಿಗಳಿಗೆ ಸ್ವಲ್ಪವಾದರೂ ಮಾರ್ಗದಲ್ಲಿ ಆಯಾಸವಾಗದಂತೆ ಏರ್ಪಾಡನ್ನು ಮಾಡಿದ್ದನು. ಶ್ರೀಗಳು ರಾಜಧಾನಿಯನ್ನು ಸೇರಿದರು. ರಾಜನು ಎದುರ್ಗೊಂಡು ಅವರನ್ನು ತನ್ನರಮನೆಗೆ ಕರೆದೊಯ್ದನು. ೧ತಿಂಗಳ ವರೆಗೆ ಆತಿಥ್ಯವಾಯಿತು. ಮೂಲರಾಮಸೀತಾ ಮುಂತಾದ ತೇಜೋಮಯವಾದ ಪ್ರತಿಮೆಗಳನ್ನು ನೋಡಿ ಅರಸನಿಗೆ ಆನಂದದ ಮೇರೆಯೇ ತಪ್ಪಿದಂತಾಯಿತು. ಮುತ್ತಿನ ಕಂಠಿ, ನವರತ್ನ ಖಚಿತವಾದ

ಪೀಠಪ್ರಭಾವಳಿ, ಆಭರಣಗಳ ಸುರಿಮಳೆಯನ್ನೇ ಆತನು ಸುರಿಸಿದನು. ಈ ಕಾಲಕ್ಕೆ ಅರಸಾಜ್ಞೆಯಿಂದಲೇ ೫೦೦ ಜನ ಸ್ಮಾರ್ತರಾಗಿದ್ದ ರಾಜಾಶ್ರಿತರು ದ್ವೈತಿಗಳಾದರು. ಬಳಿಕ ರಾಜನು ಈ ಎಲ್ಲ ವಿವರವನ್ನು ಮಠದ ಮುಖ್ಯಾಭಿಮಾನಿಗಳಾದ **ಪೂರ್ಣಯ್ಯ** ಮಂತ್ರಿವರರಿಗೆ ಒಂಟಿಯುವನೊಂದಿಗೆ ಬರೆದು ಕಳುಹಿದನು.

ಅಷ್ಟರಲ್ಲಿ ಟೀಪುಸುಲ್ತಾನನು ಗತಿಸಿಹೋಗಿದ್ದನು. ಮೈಸೂರ ರಾಜ್ಯಪದ್ಧತಿಯ ವ್ಯವಸ್ಥೆಯ ಬಗ್ಗೆ ಬ್ರಿಟಿಶರು ಮಾತು ನಡೆಸಿದ್ದರು. ಇಷ್ಟರಲ್ಲಿ ಶ್ರೀಗಳೆಡೆಯಿಂದ ಬಂದ ಒಂಟಿಯವನ ಪತ್ರವನ್ನೋದಿಕೊಂಡು ಆನಂದಬಟ್ಟು ಅಯ್ಯನವರು ತಮ್ಮಲ್ಲಿಯ ಎಲ್ಲ ವ್ಯವಸ್ಥೆಯು ಮುಗಿದ ಬಳಿಕ ಶ್ರೀಗಳು ತಮ್ಮಲ್ಲಿಗೇ ದಯಮಾಡಿಸಬೇಕೆಂದು ಆತನೊಡನೆಯೇ ಬರೆದು ಬಿನ್ನೈಸಿಕೊಂಡರು.

ಬಳಿಕ ಮಠವು ಉತ್ತರಕ್ಕೆ ಸಾಗಿತು. ಪಂಢರಪುರದಲ್ಲಿ ಮಠಕ್ಕೆ ಬಹು ಜನ ಶಿಷ್ಯರಾದರು. ಪುಣೆಗೆ ಮಠವು ಸಮೀಪಿಸಿರಲು ಅದರ ಮಹಾತ್ಮ್ಯೆಯನ್ನು ಮೊದಲೇ ತಿಳಿದಿದ್ದ **ಬಾಜೀರಾಯನು** ಘೋರಪಡೆಯೆಂಬ ತನ್ನ ಮಂತ್ರಿಯಿಂದ ಶ್ರೀಗಳನ್ನು ಆದರದಿಂದ ಬರಮಾಡಿಕೊಂಡನು. ತನ್ನ ಅಷ್ಟಪ್ರಧಾನಪರಿವಾರಸಮೇತನಾಗಿ ಮಠವನ್ನು ಒಂದು ತಿಂಗಳ ವರೆಗೆ ಆದರಿಸಿದನು. ಸಂಸ್ಥಾನವೈಭವು ಸ್ಥಿರವಾಗಬೇಕೆಂದು ಆಗ ೧ಲಕ್ಷ ವರಹಗಳು, ಮಕರ ಕಂಠಿ, ಮುತ್ತಿನ ವೈಜಯಂತೀಮಾಲಾ, ಎರಡು ಮಣ ಬಂಗಾರದ ಮಂಟಪ, ನಾಲ್ಕು ಅಂಬಾರಿಯ ಆನೆಗಳು, ೨೫ ಕುದುರೆಗಳು ಬಾಜೀರಾಯನಿಂದ ಕೊಡಲ್ಪಟ್ಟವು. ಇದಲ್ಲದೆ ಮಠದ ಆಶ್ರಿತರಿಗೂ ಬಹು ಮನ್ನಣೆಯಾಯಿತು. ಶ್ರೀಪಾದಪುತ್ರರಿಗೆ ಬಂಗಾರ ಕಂಠಿ, ಕಿವಿಮುತ್ತು, ಶಿರಶೋಭೆಯ ಅಲಂಕಾರ ಮುಂತಾದುವು ಸಿಕ್ಕವು.

ಇನ್ನು ಮಹಾಯಾತ್ರೆಗೆ ಹೊರಡಬೇಕೆಂದು ಶ್ರೀಗಳಿಗೆ ಮನಸಾಯಿತು. ಅಂದೇ ಹೊರಟು ಅವರು ಪಂಚವಟಿಗೆ ಬಂದರು. ರಾಮ

ದೇವರ ಗುಡಿಯಲ್ಲಿ ಮಲಗಿದಾಗ ಶ್ರೀಗಳಿಗೆ ರಾಮದೇವರು 'ದಕ್ಷಿಣ ದಲ್ಲಿಯೇ ಸಂಚಾರ ಮಾಡುತ್ತ ಮೈಸೂರ ಸೀಮೆಯಲ್ಲಿ ೧೨ ವರ್ಷ ಕಳೆದ ಮೇಲೆ ಮಹಾಯಾತ್ರೆಗೆ ಹೊರಡುವುದು;' ಎಂತಾಗಿ ಹೇಳಿ ದಂತಾಯಿತು. ದೇವರ ಆಜ್ಞೆಯಂತೆ ಮರುದಿನವೇ ಶ್ರೀಗಳು ದಕ್ಷಿ ಣದ ಕಡೆಗೆ ಸಾಗಿದರು. **ತ್ರಯಂಬಕ**ದಲ್ಲಿ ಮಹಾದೇವರ ದರ್ಶನ ವವರಿಗಾಯಿತು. ಹಾಗೆಯೇ ಮುಂದೆ ಬರುತ್ತಿರಲು **ಕೊಲ್ಹಾಪುರ** ಮಹಾಲಕ್ಷ್ಮಿಯು ಒಮ್ಮೆ ಸ್ವಪ್ನದಲ್ಲಿ ಶ್ರೀಗಳಿಗೆ ತನ್ನೂರಿಗೆ ಬರಲು ಆಮಂತ್ರಣವನ್ನಿತ್ತಳು. ಸಂಸ್ಥಾನಮರ್ಯಾದೆಗಾಗಿ ಮಹಾದೇವರ ನಂದೀಶ್ವರನಿಂದಲೇ ಈ ಒಳಗಾಗಿ ರಾಜನಿಗೆ ಪ್ರೇರಣೆಯಾಗುವು ದೆಂದು ಆಕೆಯು ಹೇಳಿದಂತಾಯಿತು.

ಭಗವದಿಚ್ಛೆಯೆಂತೆಂದು ಶ್ರೀಗಳು ಕೊಲ್ಹಾಪುರದ ಕಡೆಗೆ ನಡೆ ದರು. ಸಂಚಾರಕ್ರಮದಿಂದ ಕೊಲ್ಹಾಪುರದ ಸೀಮೆಯ ಸಮೀಪದ ಲ್ಲಿಯೇ ಮಠವು ಇಳಿದಿರಲು ಒಂದು ಚಮತ್ಕಾರವಾಯಿತು. **ಕೊಲ್ಹಾ ಪುರದರಸನು** ಬೇಟೆಯಿಂದ ಬಳಲಿ ನೀರಡಿಸಿ ಆಗಲ್ಲಿಗೆ ಬಂದನು. ಮಧ್ಯಾಹ್ನಕಾಲದಲ್ಲಿ ತೀರ್ಥವನ್ನಿತ್ತು ಬ್ರಾಹ್ಮಣರನ್ನು ಊಟಕ್ಕೆ ಕೂಡಿಸಲೋಸುಗ ಎಡಸೇವೆಯ ಅನಂತಾಚಾರ್ಯರು ಬೆಳ್ಳಿಯ ಗಿಂಡಿ ಯಲ್ಲಿ ಪಚ್ಚಕರ್ಪುರದ ತೀರ್ಥವನ್ನು ತೆಗೆದುಕೊಂಡು ಬರುತ್ತಿದ್ದರು. ರಾಜನು ಎದುರಿಗೆ ನೆಟ್ಟಗೆ ಬಂದು ತನ್ನನಾರೂ ಮಾತನಾಡಿಸದ್ದರಿಂದ ಆನಂತಾಚಾರ್ಯರ ಕೈಯಲ್ಲಿಯ ಗಿಂಡಿಯನ್ನು ಕಿತ್ತಿಕೊಂಡು ಅದನ್ನು ಬರಿದು ಮಾಡಿಬಿಟ್ಟನು. ಅವನಿಗೆ ಛಿ, ಥೂ ಅನ್ನಬೇಕೆಂದು ಎಲ್ಲರೂ ಮುಂದರಿಯುವಷ್ಟರಲ್ಲಿಯೇ ರಾಜಚಿನ್ಹದಿಂದಲಂಕೃತವಾದ ಕುದು ರೆಯು ಆಗವರಿಗೆ ಕಾಣಿಸಿತು. ಎಲ್ಲರ ಬಾಯಿಗೆ ಬೀಗಹಾಕಿದಂತಾ ಯಿತು. ಸುಮ್ಮನೇ ಎಲ್ಲರೂ ನಿಂತಿರಲು 'ಎಲೈ ಬ್ರಾಹ್ಮಣನೇ ನನ್ನ ನೀರಡಿಕೆಯು ನೀಗಿಹೋಗಲಿಕ್ಕೆ ನೀನೇ ಕಾರಣನಾಗಿರುವಿ; ಅದುಕಾರಣ ಬೇಕಾದ್ದನ್ನು ಬೇಡು; ಕೊಡುವೆ! ಎಂದು ಆನಂದದಿಂದ ರಾಜನು ಮಾತನಾಡಿದನು. ಇಷ್ಟಾಗುವಷ್ಟರಲ್ಲಿ ಅರಸನ ಪರಿವಾರದ ವರೂ ಅಲ್ಲಿಗೆ ಬಂದರು. ಪರಿವಾರದವರಿಂದ ಎಲ್ಲವನ್ನೂ ತಿಳಿದು

ಅನಂತಾಚಾರ್ಯರು ರಾಜನನ್ನು ಯೋಗ್ಯಮರ್ಯಾದೆಯಿಂದ ಕುಳ್ಳಿರಿಸಿಕೊಂಡು ಉತ್ತರಾದಿ ಮಠದಲ್ಲಿದ್ದ ಮೂಲರಾಮದಿಗ್ವಿಜಯರಾಮರ ಮಹಿಮೆಯನ್ನೂ ಶ್ರೀಗಳ ಪ್ರಭಾವವನ್ನೂ ವಿವರಿಸಿ ಹೇಳಿದರು. ವಿಜಯನಗರ, ಹೈದರಾಬಾದ ಮುಂತಾದ ದೊಡ್ಡ ರಾಜರಿಂದ ಮನ್ನಣೆ ಹೊಂದಿದ್ದನ್ನು ಕೇಳಿ ಅರಸನು ಭಕ್ತಿಯುತನಾಗಿ ಶ್ರೀಪಾದರ ದರ್ಶನವನ್ನು ಮಾಡಿಸುವುದೆಂದು ಆಚಾರ್ಯರನ್ನು ಕೇಳಿಕೊಂಡನು. ಆಚಾರ್ಯರು ಒಪ್ಪಲು ಕೂಡಲೇ ರಾಜನು ಸ್ನಾನಮಾಡಿ ಮಡಿಬಟ್ಟೆಯನ್ನುಟ್ಟು ಶ್ರೀಗಳ ಭೋಜನವಾಗುವ ಸಮಯವನ್ನು ಕಾದಿದ್ದನು. ಶ್ರೀಗಳ ಭೋಜನವಾಗುತ್ತಲೇ ಪುಷ್ಪಾಂಜಲಿಯುತನಾಗಿ ಶ್ರೀಗಳನ್ನು ರಾಜನು ಕಾಣಿಸಿಕೊಂಡನು. ಆಗಲ್ಲಿದ್ದ ರತ್ನವೈಢೂರ್ಯಾದಿ ವೈಭವವು ಅವನನ್ನು ಬೆರಗುಗೊಳಿಸಿತು. ತನ್ನೂರಿಗೆ ದಯಮಾಡಿಸಲೇಬೇಕೆಂದು ಆತನು ಶ್ರೀಗಳನ್ನು ಬಲುಮೆಮಾಡಿ ಬೇಡಿಕೊಂಡನು. ಶ್ರೀಗಳು ಅದಕ್ಕಾಗಿಯೇ ಹೊರಟಿದ್ದರಲ್ಲವೇ? ರಾಜನ ಬೇಡಿಕೆಯು ಮನ್ನಿಸಲ್ಪಟ್ಟಿತು. ಶ್ರೀಪಾದರನ್ನು ಕೂಡಲೇ ಅರಸನು ವೈಭವದಿಂದ ಪುರದೊಳಕ್ಕೆ ಕರೆದೊಯ್ದನು. ಅರಮನೆಯಲ್ಲಿಯೇ ಮಠದ ಬಿಡಾರವಾಯಿತು. ಶ್ರೀಗಳು ೧ ತಿಂಗಳ ವರಗೆ ಅಲ್ಲಿದ್ದರು. ಆ ಕಾಲಕ್ಕೆ ದಿನಾಲು ಪಾಠಪ್ರವಚನಗಳಾಗುತ್ತಿದ್ದುವು. ವಾದವಿವಾದಗಳಾಗುತ್ತಿದ್ದುವು. ಮಿರ್ಜಿ ಸಾಂಗಲಿಗಳಲ್ಲಿಯ ಎಷ್ಟೋ ಅದ್ವೈತಿಗಳು ವಾದದಲ್ಲಿ ಕುಂಠಿತರಾದರು. ಆಗ ಶ್ರೀಮದಾಚಾರ್ಯರ ತತ್ವಗಳು ಹೆಚ್ಚು ಹೆಚ್ಚು ಪ್ರಸಾರಗೊಂಡುವು. ಅಲ್ಲಿಯ ಎಷ್ಟೋ ಜನಗಳಿಗೆ ಮಂತ್ರೋಪದೇಶ ಮುದ್ರಾಧಾರಣೆಗಳೂ ಆಕಾಲಕ್ಕೆ ಆದುವು. ಮುಂದೆ ಮಹಾಸಮಾರಾಧನೆಯೂ ಆ ಊರಲ್ಲಿಯೇ ಆಯಿತು.

ಶ್ರೀವರಮಹಾಲಕ್ಷ್ಮಿಯ ವ್ರತದಲ್ಲಿ ೧೦೮ ಮುತ್ತೈದೆಯರಿಗೆ ಸಾಲಂಕೃತ ಮರದ ಬಾಗಿಣಗಳನ್ನಿತ್ತು ಶ್ರೀಗಳು ಮಹಾಲಕ್ಷ್ಮಿಗೆ ಲಕ್ಷ ಕುಂಕುಮಾರ್ಚನೆಯನ್ನು ಮಾಡಿಸಿದರು. ಈ ಅರ್ಚನೆಯ ಕಾಲಕ್ಕೆ ಶ್ರೀಪಾದರು ರಾಜನನ್ನು ಬರಮಾಡಿಕೊಂಡು 'ರಾಜನೇ! ನಿನ್ನ ಮನೀಷೆಯು ಸಫಲವಾಗಲೆಂದು ದೇವಿಯನ್ನು ಬೇಡಿಕೊಂಡಿದ್ದೇವೆ;'

ಎಂತೆಂದು ಅವನಿಗೆ ಹೇಳಿದರು. ಆಗಲೇ ಲಕ್ಷ್ಮಿಯ ಬಲಭಾಗದೆಡೆ ಯಿಂದ ಒಂದು ಕಮಲವು ಅರಸನ ಅಂಜಲಿಯಲ್ಲಿ ಬಿತ್ತು. ಇದನ್ನು ಕಂಡು ಶ್ರೀಗಳು 'ರಾಜಾ! ಇನ್ನೊಂದು ವರುಷದೊಳಗಾಗಿ ನಿನಗೆ ಪುತ್ರೋತ್ಸವವಾಗುವುದು; ೧೦೦ ವರ್ಷ ಪರ್ಯಂತವಾಗಿ ನಿನ್ನ ರಾಜ್ಯದಲ್ಲಿ ದುಷ್ಟಬಾಧೆ ಮುಂತಾದವುಗಳಾವವೂ ಆಗುವದಿಲ್ಲ; ರಾಜ್ಯವು ವೈಭವದಿಂದ ಮೆರೆಯುವುದು;' ಎಂದು ಧನ್ಯವಾದವನ್ನು ಮಾಡಿ ಮೂರು ಹಿಡಿ ಮಂತ್ರಾಕ್ಷತೆಗಳನ್ನು ಅರಸನುಡಿಯಲ್ಲಿ ಹಾಕಿದರು. ಅರಸನು ಆಗ ಸದ್ಗದಿತನಾಗಿ ದೇವಿಗೆರಗಿ ಶ್ರೀಗಳಿಗೆರಗಿ ಪುನೀತನಾದೆ ನೆಂದು ಉದ್ಗಾರವನ್ನು ತೆಗೆದನು.

ಮರುದಿನವೇ ಕೆಳಗೆ ಬರೆದಂತೆ ಆಭರಣಾದಿಗಳು ಸಂಸ್ಥಾನಕ್ಕೆ ಅರಸನಿಂದ ಅರ್ಪಿಸಲ್ಪಟ್ಟವು.

೧ ಹತ್ತು ಸಾವಿರ ಲಕ್ಷ್ಮೀದೇವಿಯ ವರಹ

೨ ನವರತ್ನಕಲಶದ ಬಂಗಾರದ ಪಲ್ಲಕ್ಕಿ

೩ ರತ್ನದನೇಕ ಆಭರಣಗಳು

೪ ಬೆಳ್ಳಿಬಂಗಾರದ ಆಭರಣಗಳಿಂದ ಯುಕ್ತವಾದ ೨ ಅಂಬಾರಿಯ ಆನೆಗಳು

೫ ವಿಧವಿಧದ ಸುವರ್ಣಪಾತ್ರೆಗಳು

ಇಷ್ಟಾದ ಬಳಿಕ ರಾಜನು ಒಂಟಿಯ ಸ್ವಾರನಿಂದ ಈ ವಿವರ ವನ್ನು ಮೈಸೂರ ಪೂರ್ಣಯ್ಯನವರಿಗೆ ಹೇಳಿಕಳುಹಿದನು.

ಇತ್ತ ಮಠವು ಕೊಲ್ಹಾಪುರದಿಂದ ಹೊರಟು ಕೃಷ್ಣೆಯ ಮಾರ್ಗ ವಾಗಿ ಹಾವೇರಿಗೆ ಬಂದಿತು. ಆಗ ಕರ್ಜಗಿಯಲ್ಲಿ ಹಂಪೆಯ **ವಿರೂ ಪಾಕ್ಷ ಮಠದ ಘನಪಂಡಿತ**ರೊಬ್ಬರು ಮಧ್ವಮತದೂಷಕವಾದ **"ಕಲಿಮಹಿಮೆ"** ಎಂಬ ಗ್ರಂಥವನ್ನು ಪ್ರಚಾರಮಾಡುತ್ತ **"ಮಧ್ವ ತಂತ್ರಮುಖಮರ್ದನ"** ವೆಂಬ ಪುಸ್ತಕದ ಪ್ರಸಾರವನ್ನು ನಡೆಸಿ ದ್ದರು. ಈ ಸುದ್ದಿಯು ಶ್ರೀಗಳಿಗೆ ತಿಳಿಯುತ್ತಲೇ ಅವರು **ಕರ್ಜಗಿಗೆ** ಹೋಗಿ ಪಂಡಿತರ ಸಭೆಗೂಡಿಸಿ ವಾಕ್ಯಾರ್ಥವಿವಾದವನ್ನು ನಡೆಸಿ ದರು. ಅದು ಎಂಟು ದಿನ ನಡೆಯಿತು.

೧) **"ಅಭಿನವಗದಾ"** ಗ್ರಂಥವು '**ಕಲಿಮಹಿಮೆ**'ಯ ಪ್ರತಿ ವಾಕ್ಯವನ್ನು ಖಂಡಿಸುತ್ತಿದೆ.

೨) ವಿಜಯೀಂದ್ರ ಸ್ವಾಮಿಗಳು ರಚಿಸಿದ '**ಅಪ್ಪಯ್ಯ ಗಲ್ಲಚ ಪೇಟಿಕಾ**' ಎಂಬ ಗ್ರಂಥವು '**ಮಧ್ವತಂತ್ರ ಮುಖಮರ್ದನ**'ವೆಂಬು ದನ್ನು ಸಂಪೂರ್ಣವಾಗಿ ಖಂಡಿಸಿದೆ.

೩) ಶ್ರೀ ಸತ್ಯನಾಥತೀರ್ಥರು ಬರೆದ '**ಅಭಿನವಗದಾ**' ಗ್ರಂಥ ದಿಂದ ಅಪ್ಪಯ್ಯದೀಕ್ಷಿತರ ಗ್ರಂಥದ ಖಂಡನೆಯಾಗಿದೆ. ಎಂಬ ಈ ಮೂರು ಮಾತುಗಳನ್ನು ಮತತ್ರಯದವರಿಂದ ಒಡಂಬಡಿಸಲಾಯಿತು. ವಿರೂಪಾಕ್ಷ ಮಠದ ಪಂಡಿತರು ಖಿನ್ನರಾಗಿ ಹೊರಟು ಹೋದರು.

ಬಳಿಕ ಶ್ರೀಗಳು ಹರಿಹರಕ್ಕೆ ಬಂದು ಅಲ್ಲಿ ಕೆಲ ದಿನ ನಿಂತರು. ಅಷ್ಟರಲ್ಲಿ ಪೂರ್ಣಯ್ಯನವರು ಮಹಿಸೂರಿಗೆ ಭದ್ರವಾದ ಕೋಟೆಯನ್ನು ಕಟ್ಟಿಸಿ ಶ್ರೀಮುಷ್ಣದ ವರಾಹದೇವರ ಗುಡಿಯನ್ನು ಪೂರ್ಣಗೊಳಿಸಿ ಮೂರ್ತಿಪ್ರತಿಷ್ಠಾಪನೆಗೆಂದು ಅಳಿಯಂದಿರಾದ **ತೀರ್ಥ ಶ್ರೀನಿವಾಸಾ ಚಾರ್ಯ**ರನ್ನು ಆಮಂತ್ರಣಬಿನ್ನಹಪತ್ರಿಕೆಗಳನ್ನು ಕೊಟ್ಟು ಶ್ರೀಗಳ ಬಳಿಗೆ ಕಳುಹಿಕೊಟ್ಟರು.

ಅಯ್ಯನವರ ಬೇಡಿಕೆಯಂತೆ ಶ್ರೀಗಳು ಮೈಸೂರಿಗೆ ದಯಮಾಡಿ ಸಿದರು. ವರಾಹ ಮೂರ್ತಿಯ ಪ್ರತಿಷ್ಠಾಪನೆಯನ್ನು ಮಾಡಿ ೧೫ದಿನ ಅಲ್ಲಿಯೇ ಇದ್ದರು. ಆ ಮೇಲೆ ಸಂಚಾರಕ್ಕೆ ಹೊರಡುವುದೆಂದು ಶ್ರೀಗಳ ಮನೀಷೆಯು. ಆಗ ಪೂರ್ಣಯ್ಯನವರು ಅವರ ಸನ್ನಿಧಿಗೆ ಬಂದು:- " ಹಿಂದಿನ ಶ್ರೀವೇದವ್ಯಾಸತೀರ್ಥರು ನರಸರಾಜರಿಗೆ ಅನ್ನ ದಲ್ಲಿ ಹುಳಕಾಣಿಸುವುದನ್ನು ತಪ್ಪಿಸಿ ಅನುಗ್ರಹ ಮಾಡಿದಂತೆ ತಾವಾ ದರೂ ಮೈಸೂರೊಡೆಯರ ಶ್ರೇಯೋಭಿವೃದ್ಧಿಗಾಗಿ ನಮ್ಮ ಸೀಮೆಯ ಲ್ಲಿಯೇ ವಾಸವಾಗಿರಬೇಕು. ಮತತ್ರಯದ ಗುರುಪೀಠಗಳೂ ಮತ ತ್ರಯದ ಪೀಠಗಳೂ ಘನವಿದ್ವಾಂಸರೂ ನಮ್ಮ ರಾಜ್ಯದಲ್ಲಿಯೇ ಇರ ಲೆಂಬ ನಮ್ಮ ಹಾರೈಕೆ. ಕಾರಣ ತಾವು ದಯವಿಟ್ಟು ಹೇಮಾವತೀ ನದಿಯ ತೀರದಲ್ಲಿಯ **ಹೊಳೆನರಸಿಂಹಪುರ** (ವಸಿಷ್ಠಾಶ್ರಮ)ದಲ್ಲಿ ವಾಸವಾಗಿರಬೇಕು. ಇದೇ ಮಠದ ಹಿಂದಿನ ಶ್ರೀಗಳಾದ ಶ್ರೀವೇದ

ವ್ಯಾಸತೀರ್ಥರು ಮಠವೊಂದನ್ನು ಕಟ್ಟಿಸಿದ್ದಾರೆ. ಅದೇ ಸ್ಥಾನವನ್ನು ತಾವು ಪ್ರಕಾಶಗೊಳಿಸುತ್ತ ವ್ಯಾಖ್ಯಾನ ಟಿಪ್ಪಣಿಗಳನ್ನು ಮಾಡಿ ಮತ ಪ್ರಸಾರವನ್ನು ಮಾಡುತ್ತಿರಬೇಕು. ಮಹಿಸೂರ ರಾಜ್ಯಕಾರಭಾರವು ನನ್ನ ಕೈಯಲ್ಲಿರುವವರೆಗೆ ಶ್ರೀಗಳ ತಪಃಸಾಮ್ರಾಜ್ಯವೈಭವಗಳಿಗೆ ಉಪಹತಿಯು ಬಾರದಂತೆ ನೋಡಿಕೊಳ್ಳುತ್ತ ಯಥಾಶಕ್ತಿಯಾಗಿ ಮಠದ ಸೇವೆಯನ್ನು ಮಾಡಲು ಸಿದ್ಧನಿದ್ದೇನೆ'' ಎಂತಾಗಿ ಬೇಡಿಕೊಂಡರು. ಶ್ರೀಗಳು ಅಯ್ಯನವರನ್ನು ಅನುಗ್ರಹಿಸಿದರು. ಆಗಲೇ **ಫೌಜದಾರ ವೆಂಕಟರಮಣ**ಯ್ಯಗೆ ಸಂಸ್ಥಾನದ ಸಂಗಡ ಹೊಳೆನರಸಿಂಹಪುರಕ್ಕೆ ಹಿಂಬಾಲಿಸಲು ಆಜ್ಞೆಯಾಯಿತು. ನರಸಿಂಹಪುರದ **ಅಮಲ್ದಾರ ಅಪ್ಪಾಜಿಗೌಡ**ನಿಗೆ 'ದಿನಕ್ಕೆ ಮೂರಾವರ್ತಿ ಶ್ರೀಗಳ ಸಮಾಚಾರವನ್ನು ತೆಗೆದುಕೊಳ್ಳುತ್ತ ಮೂರು ದಿನಕ್ಕೊಮ್ಮೆ ಶ್ರೀಯಾಜ್ಞೆಯನ್ನು ರಾಜಧಾನಿಗೆ ತಿಳಿಸುವುದೆಂ'ದು ಅಪ್ಪಣೆಯಾಯಿತು. ಮಠವನ್ನು ಬೆಳೆಸಲಿಕ್ಕೆ ಅಯ್ಯನವರು ೨೦ ಸಾವಿರ ವರಹಗಳನ್ನು ಕೊಟ್ಟರು. ಮಠದಲ್ಲಿಯೇ ಹೇಮಾವತಿಯ ಕಾರಂಜಿಯು ಬಂದಿತು. ನಗಾರಿ ನೌಬತ್ತುಗಳಿಗೆ ಹೊಸ ಮನೆಗಳ ಏರ್ಪಾಡಾಯಿತು.

ಒಮ್ಮೆ ಮಹಾಸಮಾರಾಧನೆಯ ಕಾಲಕ್ಕೆ ಹನ್ನೆರಡುಸಾವಿರ ಬ್ರಾಹ್ಮಣರು ಕಲೆತರು. ಆಗ ಪೂರ್ಣಯ್ಯನವರೂ ಜಮಾಬಂದಿಗೆಂದು ಅಲ್ಲಿಗೆ ದಯಮಾಡಿಸಿದ್ದರು. ಊಟದ ಕಾಲಕ್ಕೆ ಮಳೆಹತ್ತಿ ಬ್ರಾಹ್ಮಣರಿಗೆ ಕಷ್ಟವಾಯಿತು. ಆಗ ಶ್ರೀಗಳು ಮಳೆಯಲ್ಲಿ ತೊಯಿಸಿಕೊಳ್ಳುತ್ತ ಸ್ವಲ್ಪ ವೇಳೆ ನಿಂತಿದ್ದು ಮೇಘರಾಜನನ್ನು ಪ್ರಾರ್ಥಿಸಲು ಕೂಡಲೇ ಮಳೆಯು ನಿಂತಿತು. ಇದನ್ನೆಲ್ಲ ನೋಡಿದ ಪೂರ್ಣಯ್ಯನವರು ಬೇಗನೇ ೧೨ ಸಾವಿರ ಜನಗಳಿಗೆ ಸಾಲುವಂತೆ ಮಠವನ್ನು ಬೆಳೆಸುವ ಏರ್ಪಾಡನ್ನು ಮಾಡುವಂತೆ ಅಮಲ್ದಾರರಿಗೆ ಅಪ್ಪಣೆಯನ್ನಿತ್ತರು. ಮತ್ತೊಂದು ವರ್ಷ ಸಂಸ್ಥಾನವು ಅಲ್ಲಿಯೇ ಇರಬೇಕೆಂದು ಅಯ್ಯನವರು ಶ್ರೀಗಳಿಗೆ ಹೇಳಿಕೊಂಡರು. ಆ ವೇಳೆಯಲ್ಲಿ ತಗಲುವ ವೆಚ್ಚವನ್ನೂ ಅಭಿಷೇಕಕ್ಕೆಂದು ೧ ಸಾವಿರ ಅಮೃತಮಹಾಲ ಕಚೇರಿಯ ಆಕಳುಗಳನ್ನೂ ಆಕಳ ಮೇವಿಗಾಗಿ ಗುಂಜಾದ ಕಾವಲೊಳಗಿನ ೫೦೦

ಎಕರೆಯ ಭೂಮಿಯನ್ನೂ ದೇವರ ತೆಂಗಿನಕಾಯಿಗಳಿಗಾಗಿ **ಬೆನಗುಳಿ, ಚಕ್ರಗಿರಿ, ಮೆಣಸಿನಹಳ್ಳಿ, ಹನಸೋಗಿ** ಈ ಗ್ರಾಮುಗಳಲ್ಲಿಯ ೪ ತೋಟಗಳನ್ನೂ ನರಸಿಂಹಪುರ ತಾಲೂಕಿನಲ್ಲಿಯ ಎಲ್ಲ ಸರಕಾರದ ಹುಣಸೆಯ ಮರಗಳನ್ನೂ ಮಠದ ಪ್ರತಿಯೊಬ್ಬ ಸೇವಾವೃತ್ತಿಯವನಿಗೆ ಆರು ವರಹಗಳ ವರ್ಷಾಶನವನ್ನೂ ಕೊಡುವುದೆಂದು ತಾಲೂಕ ಕಚೇರಿಗೆ ಕಟ್ಟಪ್ಪಣೆಯಾಯಿತು.

ಅಯ್ಯನವರು ಕೆಲವು ದಿನ ಮಠದಲ್ಲಿ ನಿಂತು ಶ್ರೀಗಳಲ್ಲಿ ಶಾಂತಿ ಪಾಠವನ್ನು ಹಾಕಿ ೩೭ ಗ್ರಂಥಗಳನ್ನು ಓದಿ ಮಂಗಳ ಮಾಡಿದರು. ಆಗ ಶ್ರೀಪಾದಪುತ್ರರಿಗೆ ಅನರ್ಘ್ಯವಾದ ಆಭರಣಾದಿಗಳು ಸಿಕ್ಕುವು. ಇದಲ್ಲದೆ **ಕಾಶೀ ತಿಮ್ಮಣ್ಣಾಚಾರ್ಯ, ಕೌಲಗಿ ಬಾಳಾಚಾರ್ಯ, ಗಾರ್ಲವಾಡು ಕೃಷ್ಣಾಚಾರ್ಯ, ಕಲ್ಲಾಪುರದ ರಾಮಚಂದ್ರಾಚಾರ್ಯ, ಹೈದರಾಬಾದ ಅನಂತಾಚಾರ್ಯ, ಬೆಂಗಳೂರ ದಾಸಾಚಾರ್ಯ, ಉಡಪಿ ವಾಸುದೇವಾಚಾರ್ಯ, ಹೊಸಕೋಟೆ ಗೋವಿಂದಾಚಾರ್ಯ,** ಮುಂತಾದ ಪಂಡಿತರಿಗೂ ಕಂಠಿ, ಬೆಳ್ಳಿಯ ತಂಬಿಗೆ, ಮುಂತಾದುವು ಸಿಕ್ಕವು. ಬಳಿಕ ಅಯ್ಯನವರು ನರಸಿಂಹದೇವರ ಸನ್ನಿಧಿಯಲ್ಲಿ ಸೋಮಯಾಗ ಮಾಡಬೇಕೆಂಬ ಏರ್ಪಾಡು ಮಾಡಿ ರಾಜಧಾನಿಗೆ ತೆರಳಿದರು.

ಈ ಯಾಗವನ್ನು ಮುಂದೆ ಪ್ರಭವ ಸಂವತ್ಸರದಲ್ಲಿ ಬೋಧರಾಯಾಚಾರ್ಯರಿಂದ ಮಾಡಿಸಲಾಯಿತು. ಫಲಮಂತ್ರಾಕ್ಷತೆಗಳನ್ನು ದಿವಾನ ಬಾಬುರಾಯರಿಂದಲೂ ಗಾರ್ಲವಾಡ ಕೃಷ್ಣಾಚಾರ್ಯರಿಂದಲೂ ಅರಮನೆಗೆ ಅಯ್ಯನವರು ಕಳಿಸಿದರು.

ಮುಂದೆ ೧೨-೧೫ ವರ್ಷ ಶ್ರೀಗಳು ನರಸಿಂಹಪುರದಲ್ಲಿಯೇ ಇದ್ದರು. ಆಗ ದಿನವೂ ಪಾಠಪ್ರವಚನಗಳು ನಡೆಯುತ್ತಿದ್ದವು. ೧೬ ಸಲ ಸುಧಾ ಮಂಗಲವಾಯಿತು. ಝುಲಿಪಿ ಕೃಷ್ಣಾಚಾರ್ಯರು ಸಂಸ್ಥಾನದಲ್ಲಿರುವ ಏರ್ಪಾಡಾಗಿ, ಅವರ ಮುಖದಿಂದ ಶ್ರೀಸತ್ಯಸಂಧರ ಕಾಲದ ಆಸ್ಥಾನಪಂಡಿತರಾದ ತಿರುಪತಿಯ ಬಾಳಾಚಾರ್ಯರಿಂದ ರಚಿತವಾದ ಷಟ್‌ಶಾಸ್ತ್ರಕ್ರೋಡ ಪತ್ರಗಳನ್ನು ಶ್ರೀಗಳು ಓದಿಸಿ ಕೇಳು

ತ್ತಿದ್ದರು. ಕೃಷ್ಣಾಚಾರ್ಯರ ಜ್ಞಾನಕ್ಕೆ ಆನಂದಭರಿತರಾಗಿ ಅವರಿಂದಲೂ ಬೋಧರಾಯಾಚಾರ್ಯರಿಂದಲೂ ಶ್ರೀಗಳು ತಮ್ಮ ಗ್ರಂಥಗಳ ಅನುವಾದವನ್ನು ಪಂಡಿತರ ಸಭೆಯಲ್ಲಿ ಮಾಡಿಸಿ ವಿದ್ವಾಂಸರನ್ನೆಲ್ಲ ಬಹು ಮನ್ನಿಸುತ್ತಿದ್ದರು.

ಇಷ್ಟರಲ್ಲಿ ಪೂರ್ಣಯ್ಯನವರು ದಿವಾಣ ಪದದಿಂದ ನಿವೃತ್ತರಾದರು. ಆಗವರು ಸಂಸ್ಥಾನಕ್ಕೆ ಬಂದು ಅರಮನೆಯಿಂದ ಅರ್ಪಿತವಾದ ಎಲ್ಲ ವಸ್ತುಗಳ ಮೇಲೆ ಕೃಷ್ಣರಾಜ ಒಡೆಯರ ವಿಳಾಸವನ್ನು ಹಾಕಿಸಿದರು. ಭಾಂಡಾರದಿಂದ ೩೦ ಸಾವಿರ ವರಹಗಳನ್ನು ತರಿಸಿ ಇದೇ ನನ್ನ ಕಡೆಯ ಸೇವೆಯೆಂದು ಅಯ್ಯನವರು ಶ್ರೀಗಳಿಗೆ ಸಾಷ್ಟಾಂಗ ಹಾಕಿ ಹೇಳಿದರು. ಇದಲ್ಲದೆ ಎಷ್ಟೋ ಬ್ರಾಹ್ಮಣರಿಗೆ ವೃತ್ತಿಗಳನ್ನು ಕಲ್ಪಿಸಿಕೊಟ್ಟರು. ಆ ಬಳಿಕ ರಾಮನಾಥಪುರ ಮಾರ್ಗದಿಂದ ಮೈಸೂರಿಗೆ ಹೋದವರೇ ಮಂತ್ರಿಪದವನ್ನು ಬಿಟ್ಟುಕೊಟ್ಟು ಶ್ರೀರಂಗಪಟ್ಟಣವನ್ನು ಸೇರಿದರು.

ಯುವ ಸಂವತ್ಸರವು ಬರಲು ಒಮ್ಮೆ ಮಠದ ಉಗ್ರಾಣದ ಕೋಣೆಗೆ ಒಮ್ಮೆಲೇ ಬೆಂಕಿಯು ಹತ್ತಿತು. ದೇವರನ್ನು ನೆನೆಯುತ್ತ ಎಷ್ಟೋ ಜನಗಳು ಅದನ್ನು ನಂದಿಸಲು ಓಡಾಡತೊಡಗಿದರು. ಆದರೂ ಉರಿಯು ದೇವರ ಮನೆಯ ವರೆಗೆ ಬಂದಿತು. ಶ್ರೀಮೂಲರಾಮರೂ ಶ್ರೀಗಳೂ ಹೊರಗೆ ಬಾರದಂತಾಗಿರಲು ಆಭಿ ಶ್ರೀನಿವಾಸಾಚಾರ್ಯರೆಂಬವರು ಜೀವದ ಹಂಗುದೊರೆದು ಮೈಗೆ ಒದ್ದೆ ಹಚ್ಚಡವನ್ನು ಹೊದ್ದುಕೊಂಡು ಬೆಂಕಿಯೊಳಕ್ಕೆ ನುಗ್ಗಿ ಶ್ರೀಗಳಿಗೂ ಒಂದು ಒದ್ದೆಯ ಹಚ್ಚಡವನ್ನು ಸುತ್ತಿ ಹೊರಗೆ ಅವರನ್ನು ಕರೆತಂದರು. ಝುಲಿಪಿ ಕೃಷ್ಣಾಚಾರ್ಯರೂ ಆಚಾರಪ್ಪಾಚಾರ್ಯರೂ ಕೂಡಿ ಇದರಂತೆ ದೇವರ ಪೆಟ್ಟಿಗೆಯನ್ನು ಹೊರತಂದರು. ತಪೋಬಲದಿಂದ ಶ್ರೀಗಳು ಮರುದಿನವೇ ಗುಣಹೊಂದಿದರು ಉಳಿದವರು. ೫-೬ ತಿಂಗಳುಗಳ ವರೆಗೆ ಕಷ್ಟಪಟ್ಟರು.

ಸಂಸ್ಥಾನದ ನವರತ್ನಖಚಿತವಾದ ಎಷ್ಟೋ ಆಭರಣಾದಿಗಳೂ ರಾಜಶಾಸನ ದಾನಪತ್ರಾದಿಗಳೂ ಸುಟ್ಟು ಬೂದಿಯಾದುವು. ಎಂಟು

ದಿನಗಳ ವರೆಗೆ ಜ್ವಾಲೆಯು ಇದ್ದಿತು. ಶ್ರೀಮೂಲರಾಮರ ಪ್ರಭಾವ ದಿಂದ ದೇವರ ಎಲ್ಲ ಪ್ರತಿಮೆಗಳೂ ಶ್ರೀವೇದವ್ಯಾಸರ ಪುಸ್ತಕಭಾಂಡಾ ರವೂ ಅಚ್ಚಳಿಯದೇ ಉಳಿಯಿತು.

ಈ ಸಮಾಚಾರವು ಅಮಲದಾರರಿಂದ ಅರಮನೆಗೆ ತಿಳಿಯಿತು. ಆ ಬಳಿಕ ಸರಕಾರದವರಿಂದ ಅಗ್ನಿಯು ಆರಿಸಲ್ಪಟ್ಟಿತು. ನಂತರ ದಿವಾಣ ಬಾಬೂರಾಯರು ಶ್ರೀಗಳ ಸನ್ನಿಧಿಗೆ ಬಂದು ಬೆಲೆಯುಳ್ಳ ಒಡ ವೆಗಳೆಲ್ಲ ನಾಶವಾದವೆಂದು ಯೋಚಿಸಕೂಡದೆಂದು ಶ್ರೀಗಳಿಗೆ ಹೇಳಿ ಕೊಂಡರು. ಮುಂದೆ ಬಾಬೂರಾಯರು ಸುಡದೇ ಉಳಿದ ವಸ್ತು ಗಳನ್ನು ಹುಡುಕಿ ನೋಡಿದರು. ನಾಲ್ಕು ಸೇರು ನವರತ್ನಗಳೂ ಕುಂವ ಕೃಷ್ಣಾಜಿಪಂತರ ಪಚ್ಚದ ರಾಮಮೂರ್ತಿಯೂ ವಿಜಯನಗರದ ವಜ್ರ ಪದಕವೂ ಬಾಜಿರಾಯನ ಕೆಂಪು ಪದಕ ವೈಜಯಂತಿ ಮಾಲೆಗಳೂ ಬೂದಿಯಲ್ಲಿ ಸಿಕ್ಕುವು. ಆಗ ಮಹಾರಾಜರ ಅನುಜ್ಞೆಯಿಂದ ೨ ಲಕ್ಷ ವರಹಗಳನ್ನು ಭಾಂಡಾರದಿಂದ ತರಿಸಿ ೮ ದಿನಗಳಲ್ಲಿ ಪೂಜೆಯ ಉಪಕ ರಣಗಳನ್ನು ಬಾಬೂರಾಯರು ಸಿದ್ಧಪಡಿಸಿದರು. ಹಾರಪದಕಾದಿಗಳೂ ಸಿದ್ಧವಾದುವು. ಮುಂದೆ ಯಥಾಪ್ರಕಾರವಾಗಿ ಪೂಜೆಯನ್ನು ಸಾಗ ಗೊಳಿಸಿ ಬಾಬೂರಾಯರು ಮೈಸೂರಿಗೆ ಹೊರಟುಹೋದರು.

ಸುಟ್ಟುಕೊಂಡ ಜನಗಳಿಗೆ ವಾಸಿಯಾದ ಮೇಲೆ ಶ್ರೀಗಳು ಸಂಚಾ ರಕ್ಕೆ ಹೊರಟರು. ಹೋದಹೋದಲ್ಲಿ ಶಿಷ್ಯರನ್ನು ಮಂತ್ರೋಪದೇಶ ಮುದ್ರಾಧಾರಣಾದಿಗಳಿಂದ ಸಂತೋಷ ಪಡಿಸುತ್ತ ಕಾಶಿಯಯಾತ್ರೆಗೆ ಹೋಗಿ ಚಿತ್ರಭಾನು ಸಂವತ್ಸರಕ್ಕೆ ಶ್ರೀಗಳು ಮತ್ತೆ ಮೈಸೂರ ಪ್ರಾಂತಕ್ಕೆ ದಯಮಾಡಿಸಿದರು.

ಶ್ರೀರಂಗಪಟ್ಟಣದ ಸಮೀಪದ **ಸುಬ್ಬರಾಯನ ಕೊಪ್ಪಲು ಕಿರಂಗೂರಲ್ಲಿ** ಉಳಿದುಕೊಂಡಾಗ ಶ್ರೀಗಳಿಗೆ ಸ್ವಲ್ಪ ಆಯಾಸವಾಯಿತು. ಇಷ್ಟರಲ್ಲಿ ಮಠದ ಅಭಿಮಾನಿಗಳಾದ ಪೂರ್ಣಯ್ಯನವರು ವೈಕುಂಠವಾಸಿ ಗಳಾಗಿದ್ದರು. ಆದ್ದರಿಂದ ಝುಲಿಪಿ ಕೃಷ್ಣಾಚಾರ್ಯರನ್ನೂ ದಿವಾಣ ಬಾಬೂರಾಯರನ್ನೂ ಕರೆಯಿಸಿಕೊಂಡು ಅವರೆದುರಲ್ಲಿಯೇ ತಮ್ಮ

ಪೂರ್ವಾಶ್ರಮದ ತಮ್ಮಂದಿರಾದ **ನವರತ್ನ ಶ್ರೀನಿವಾಸಾಚಾರ್ಯ ರಿಗೆ** ಆಶ್ರಮವನ್ನು ಕೊಟ್ಟು **ಸತ್ಯಸಂಕಲ್ಪ**ರೆಂದು ಕರೆದು ಸಂಸ್ಥಾನಕ್ಕೆ ಅವರನ್ನು ಪಟ್ಟಗಟ್ಟಿದರು. ಆಗ ಮಹಿಸೂರ ಮಹಾರಾಜರು ಉಭಯ ಶ್ರೀಪಾದರ ದರ್ಶನಕ್ಕೆ ದಯಮಾಡಿಸಿದರು.

ಇಷ್ಟಾಗುವದರೊಳಗಾಗಿ ಹಿರಿಯ ಸ್ವಾಮಿಗಳಿಗೆ ಗುಣವಾಯಿತು. ಮುಂದೆ ವ್ಯಾಜ್ಯವು ಹುಟ್ಟಬಾರದೆಂಬ ಬಗ್ಗೆ ವ್ಯವಸ್ಥೆಯನ್ನು ಮಾಡಲು ಮಹಾರಾಜರು ಅವರ ಬಳಿಯಲ್ಲಿ ಬೇಡಿಕೊಂಡು ಅವರು ಮಠದವರನ್ನು ರಹಸ್ಯವಾಗಿ ಕರೆಯಿಸಿಕೊಂಡರು. 'ಹೊಸ ಹಳೆಯ ಸ್ವಾಮಿಗಳಿಬ್ಬರ ಮಕ್ಕಳಾದ ಮುದ್ಗಲಾಚಾರ್ಯ, ಬೋಧರಾಚಾರ್ಯ ಇವರಿಬ್ಬರೂ ಮಹಾವಿದ್ವಾಂಸರಾಗಿರುವರು. ಆದ್ದರಿಂದ ಅವರೊಳಗೆ ಅಧಿಕಾರದ ಬಗ್ಗೆ ಜಗಳ ಬರುವ ಸಂಭವವಿದೆ. ಹಾಗಾದಾಗ ಚಿಕ್ಕ ಸ್ವಾಮಿಗಳ ಕಡೆಗೆ ಮಹಾಸಂಸ್ಥಾನವನ್ನು ಕೊಟ್ಟು ಅವರಾಶ್ರಯದಲ್ಲಿ ನಿಮ್ಮಲ್ಲಿಯ ಕೆಲವರು ಇರಬೇಕು. ಹಿರಿಯ ಸ್ವಾಮಿಗಳು ವೃದ್ಧರಾಗಿದ್ದುದರಿಂದ ವಂಶರಾಮದೇವರನ್ನು ಮಾತ್ರ ಇಟ್ಟುಕೊಂಡು ಸಂಚಾರ ಮಾಡಬೇಕು. ಅವರ ಕಡೆಗೂ ಕೆಲವರು ಹೋಗಿ ಇರಬೇಕು. ಹಿರಿಯರಿಗೆ ವರ್ಷಕ್ಕೆ ೧೨ ಸಾವಿರ ರೂಪಾಯಿಗಳನ್ನು ಸಲ್ಲಿಸುತ್ತಿರುವಂತೆ ಹೊಳೆನರಸಿಂಹಪುರ ತಾಲೂಕ ಕಚೇರಿಗೆ ಈಗ ತಿಳಿಸಲಾಗುವುದು. ಹಿರಿಯ ಸ್ವಾಮಿಗಳು ಬೇರೊಬ್ಬರಿಗೆ ಮತ್ತೆ ಆಶ್ರಮವನ್ನು ಕೊಡದಿರುವಂತೆ ನೀವೆಲ್ಲರೂ ಜಾಗರೂಕರಾಗಿರಬೇಕು ಎಂದು ಎಲ್ಲರಿಗೂ ನಿರ್ಬಂಧಿಸಿದ್ದಾಯಿತು. ಆ ಮೇಲೆ ಮಹಾರಾಜರು ರಾಜಧಾನಿಗೆ ಹೊರಟುಹೋದರು.

ರಾಜರು ಚಿಂತಿಸಿದಂತೆ ಶ್ರೀಪಾದಪುತ್ರರಿಬ್ಬರಲ್ಲಿಯೂ ಜಗಳವು ಬಂದಿತು. ಆಗ ಚಿಕ್ಕ ಸ್ವಾಮಿಗಳು ಸಂಸ್ಥಾನದೊಂದಿಗೆ ಮೈಸೂರ ಸೀಮೆಯಲ್ಲಿ ಸಂಚರಿಸತೊಡಗಿದರು. ಹಿರಿಯ ಸ್ವಾಮಿಗಳು ರಾಮೇಶ್ವರದ ಯಾತ್ರೆಗೆ ನಡೆದರು. ಯಾತ್ರೆಯನ್ನು ಮುಗಿಸಿಕೊಂಡು ಹಿರಿಯರು ಸಂಚಾರಕ್ರಮೇಣ ಶಿವಮೊಗ್ಗೆಗೆ ಬಂದರು. ಇಲ್ಲಿ ಕೆಲಕಾಲ ಮಠವು ವಾಸವಾಗಿದ್ದಿತು. ಮಠದ ವ್ಯವಸ್ಥೆಯ ವಿಚಾರದಲ್ಲಿ **ಶ್ರೀಪಾದ**

**ಪುತ್ರರಾದ ಬೋಧರಾಚಾರ್ಯ**ರೂ ಝುಲಿಪಿ ಕೃಷ್ಣಾಚಾರ್ಯರೂ ಮಹಾರಾಜರ ಸನ್ನಿಧಿಗೆ ಹೋದರು. ಹೊಳೆಹೊನ್ನೂರಲ್ಲಿ ಹೊಸ ದೊಂದು ಮಠವನ್ನು ಕಟ್ಟಿಸಿಕೊಳ್ಳಲಿಕ್ಕೆಂದು ೧೬ಸಾವಿರ ವರಹ ಗಳನ್ನು ಮಹಾರಾಜರು ಕೊಟ್ಟರು. ಅಲ್ಲದೆ ಇಬ್ಬರು ಆಚಾರ್ಯ ರಿಗೂ ವಸ್ತ್ರ, ಮೇಣೆ ಮುಂತಾದವುಗಳು ಬಹುಮಾನಾರ್ಥವಾಗಿ ಸಿಕ್ಕುವು. ಹಿರಿಯ ಸ್ವಾಮಿಗಳ ಸಲುವಾಗಿಯೂ ಅನೇಕ ವೈಭವದ ಒಡವೆಗಳು ಸಿಕ್ಕುವು. ಈ ಮುಂದೆ ಶ್ರೀಸತ್ಯಧರ್ಮರು ಹೊಳೆಹೊ ನ್ನೂರ ಮಠದಲ್ಲಿಯೇ ಇರಲಾರಂಭಿಸಿದರು.

ಒಮ್ಮೆ ನದೀ ತೀರದಲ್ಲಿದ್ದ ಈಶ್ವರದೇವಾಲಯದಲ್ಲಿ ರುದ್ರಾಭಿ ಷೇಕವನ್ನು ಶ್ರೀಗಳು ನಡೆಸಿದ್ದರು. ಎಲ್ಲವೂ ಮುಗಿದು ಬ್ರಾಹ್ಮ ಣರೂ ಶ್ರೀಗಳೂ ಭೋಜನಕ್ಕೆ ಕುಳಿತುಕೊಳ್ಳುವವರಿದ್ದರು. ಇಷ್ಟರ ಲ್ಲಿಯೇ ಜಟಾಧಾರಿಯಾಗಿ ಅಡ್ಡವಾಗಿ ಗಂಧವನ್ನು ಹಚ್ಚಿಕೊಂಡು ತೇಜಃಪುಂಜನಾದ ಬ್ರಾಹ್ಮಣನೊಬ್ಬನು ಅಲ್ಲಿಗೆ ಬಂದನು. ತನ್ನ ಊಟವೇ ಮೊದಲಾಗಬೇಕೆಂದು ಆತನು ಶ್ರೀಗಳಿಗೆ ಒತ್ತಾಯಪಡಿಸಿ ದನು. ಕೂಡಲೇ ಶ್ರೀಗಳು ಭಕ್ತಿಯಿಂದ ಎದ್ದು ಬ್ರಾಹ್ಮಣನಿಗೆ ಷೋಡಶೋಪಚಾರಗಳನ್ನು ಮಾಡಿ ಬಹು ಮರ್ಯಾದೆಯಿಂದ ಆತ ನಿಗೆ ಊಟಕ್ಕೆ ಹಾಕಿ ಕಳುಹಿಕೊಟ್ಟರು. ಬ್ರಾಹ್ಮಣನು ಹೊರಗೆ ಹೊರಟನು. ಅವನು ಎಲ್ಲಿಗೆ ಹೋಗುವನೆಂಬದನ್ನು ನೋಡಲು ಶ್ರೀಗಳು ಶಿಷ್ಯರಿಗೆ ಹೇಳಿದರು. ಶಿಷ್ಯರು ಹೊರಗೆ ಬರುವಷ್ಟರಲ್ಲಿ ಬ್ರಾಹ್ಮಣನು ಮಾಯವಾಗಿದ್ದನು. ಬಳಿಕ ಬ್ರಾಹ್ಮಣನು ಉಂಡ ಶೇಷ ವನ್ನೇ ಶ್ರೀಗಳು ಗ್ರಹಿಸಿದರು. ಉಳಿದ ಬ್ರಾಹ್ಮಣರ ಭೋಜನವೂ ಆಯಿತು.

ಸ್ಮಾರ್ತರನ್ನು ಮನ್ನಿಸಿದ್ದಕ್ಕೆ 'ಶ್ರೀಗಳಿಗೆ ಹುಚ್ಚು ಹಿಡಿದಿದೆ' ಯೆಂದು ಊರ ಜನರಲ್ಲಿ ಕೆಲವರು ಕೂಗಾಟವನ್ನೆಬ್ಬಿಸಿದರು. ಪರಿ ವಾರದವರು ಈ ಸುದ್ದಿಯನ್ನು ಶ್ರೀಗಳಿಗೆ ಹೇಳಿದರು. ' ನಿಜವು ಬಯ ಲಿಗೆ ಬರುವುದು; ನೀವು ಸುಮ್ಮನಿರಿ';ಯೆಂದು ಶ್ರೀಗಳು ಶಿಷ್ಯರಿಗೆ ಹೇಳಿ ದರು. ಸಾಯಂಕಾಲದ ಮಂಗಳಾರತಿಗಾಗಿ ಈಶ್ವರ ದೇವಾಲಯಕ್ಕೆ

ಎಲ್ಲರೂ ದುಃಖಮಾಡಿಸಿರಲು ಪೂಜಾರಿಯು ಕದವನ್ನು ತೆರೆಯುತ್ತಾನೆ! ಶ್ರೀಗಳು ಊಟದ ಕಾಲಕ್ಕೆ ಸ್ಮಾರ್ತ ಬ್ರಾಹ್ಮಣನಿಗೆ ಮನ್ನಣೆಯಾಗಿ ಸಲ್ಲಿಸಿದ ವಸ್ತ್ರಾದಿಗಳೆಲ್ಲ ಈಶ್ವರಲಿಂಗದ ಮೇಲಿದ್ದದ್ದು ಕಂಡುಬಂದಿತು. ಸಾಕ್ಷಾತ್ತಾಗಿ ಈಶ್ವರನೇ ಶ್ರೀಗಳ ಪೂಜೆಯನ್ನು ಕೊಂಡಿರುವನೆಂದು ಮನಗಂಡಂತಾಗಿ ಎಲ್ಲರೂ ಬೆರಗಾಗಿ ಬೊಟ್ಟುಕಚ್ಚಿದರು.

ಈ ಸಂಗತಿಯಾಗಿ ಒಂದು ವರುಷ ಕಳೆಯಿತು. ವಿಕೃತಿ ಸಂವತ್ಸರದ ಶ್ರಾವಣ ಶುದ್ಧ ೧೩ನೆಯ ದಿನ ಬೆಳಗಿನಲ್ಲಿ ಶ್ರೀರಾಮರಿಗೆ ಆಮಂತ್ರಣೋತ್ಸವ ಪಾದಪೂಜಾದಿಗಳನ್ನು ಮಾಡಿ ಶ್ರೀಗಳು ತಾವು ಹರಿಯಾತ್ರೆಗೆ ತೆರಳುವೆವೆಂದು ಎಲ್ಲರಿಗೂ ಹೇಳಿದರು. ಎಲ್ಲ ವ್ಯವಸ್ಥೆಯಾದ ಮೇಲೆ ಶ್ರೀಗಳು ಶ್ರೀನಾರಾಯಣಧ್ಯಾನಪರರಾದರು.

ಇವರ ವೃಂದಾವನವು **ಹೊಳೆಹೊನ್ನೂರ**ಲ್ಲಿಯೇ ಆಯಿತು. ಗರ್ಭಾಲಯದ ಬಳಿಯಲ್ಲಿ ಮೂಲೆಯೊಂದೆಡೆಗೆ ಈಶ್ವರ ಭಾಗೀರಥಿಯರು ಪ್ರತ್ಯಕ್ಷವಾಗಿದ್ದಾರೆಂಬದಕ್ಕೆ ಒಂದೊಂದೇ ತಟಕು ನೀರೂ ಒಂದು ಉಸುಬಿನ ಕಣವೂ ಬೀಳುತ್ತಿದ್ದುದು ಕಾಣಿಸುತ್ತಿದೆ. ವೃಂದಾವನ ವ್ಯವಸ್ಥೆಗಾಗಿ ಮೈಸೂರ ಸರಕಾರದಿಂದ ವರ್ಷಾಶನವು ಸಿಕ್ಕುತ್ತಿದೆ. ಪೂರ್ಣಯ್ಯನವರಿಂದ ಮಠಕ್ಕೆ ಬಹು ಸಹಾಯವಾದುದರಿಂದ ಅಂದಿನಿಂದ ಉತ್ತರಾದಿ ಮಠದಲ್ಲಿ ಬಹು ಮರ್ಯಾದೆಯು ಅವರ ಮನೆತನಕ್ಕೆ ಸಿಕ್ಕುತ್ತಲಿರುವುದು. ಶ್ರೀಗಳು **ರುದ್ರಾಂಶ**ರೆಂಬ ಖ್ಯಾತಿಯಿದೆ.

ಇವರು ಕೆಳಗಿನ ಗ್ರಂಥಗಳನ್ನು ರಚಿಸಿದ್ದಾರೆ.

೧ ಸಕಲ ವಿದ್ವಜ್ಜನರಿಂದ ಮಾನ್ಯವಾದ ಶ್ರೀಭಾಗವತದ ೬-೭-೮-೯-೧೦-೧೨ನೇ ಸ್ಕಂದಗಳಿಗೆ ಟಿಪ್ಪಣಿ

೨ ಭಾರತ ಉದ್ಯೋಗಪರ್ವದ ಸನತ್ಸುಜಾತೀಯ ಟಿಪ್ಪಣಿ

೩ ತತ್ವಸಂಖ್ಯಾನ ಟಿಪ್ಪಣಿ

೪ ತತ್ವನಿರ್ಣಯ ಟಿಪ್ಪಣಿ

ಶ್ರೀಗಳ ಮಹಾ ಸಮಾರಾಧನೆಯು ಇನ್ನೂ ಹೊಳೆಹೊನ್ನೂರಲ್ಲಿ ಬಹು ವಿಜೃಂಭಣೆಯಿಂದ ನಡೆಯುತ್ತಿದೆ. ಶ್ರೀವಂಶರಾಮದೇವರ

ಪ್ರತಿಮೆಯು ಶ್ರೀಪಾದ ಪುತ್ರರಾದ ಬೋಧರಾಚಾರ್ಯರಿಂದ ಮರಳಿ ಮಹಾಸಂಸ್ಥಾನಕ್ಕೆ ಒಪ್ಪಿಸಲ್ಪಟ್ಟಿತೆಂಬ ಬಗ್ಗೆ ಮೈಸೂರ ಸರಕಾರದವರಲ್ಲಿ ಈಗಲೂ ಉಲ್ಲೇಖವು ಸಿಕ್ಕುತ್ತಿದೆ.

## ೨೯ ಶ್ರೀಸತ್ಯಸಂಕಲ್ಪತೀರ್ಥರು



ಪಟ್ಟ:- ೨೮-೫-೧೭೫೨ನೇ ವಿಕೃತಿಯಿಂದ ೧೫-೪-೧೭೬೫ನೇ ಸ್ವಭಾನು ವರೆಗೆ

ಗುರುಗಳು ಜೀವದಿಂದಿರುವಾಗಲೇ ಪಟ್ಟವಾಗಿ ಅವರಿಂದ ಮಹಾಸಂಸ್ಥಾನದ ಪೂಜೆಯನ್ನು ಮಾಡುವ ಅಧಿಕಾರವು ಇವರಿಗೆ ಸಿಕ್ಕಿತ್ತಷ್ಟೇ. ಸಂಸ್ಥಾನದೊಡನೆ **ಸುಬ್ಬರಾಯನಕೊಪ್ಪಲು ಗ್ರಾಮ**ದಿಂದ ಇವರು ಗುರುಗಳನ್ನು ಬಿಟ್ಟು ಬೇರೆ ಕಡೆಗೆ ಸಂಚಾರಕ್ಕೆ ಹೊರಟರು. ಹಿರಿಯ ಸ್ವಾಮಿಗಳ ಪುತ್ರರು ವ್ಯಾಜ್ಯವನ್ನು ಹೂಡಿದಾಗ ಮಹಾಸಂಸ್ಥಾನವೆಲ್ಲ ತಮ್ಮ ಕಡೆಗುಳಿದು ವಂಶರಾಮದೇವರ ಪ್ರತಿಮೆ, ೧೨ ಸಾವಿರದ ಉತ್ಪನ್ನವು ಮಾತ್ರ ಹಿರಿಯರ ಕಡೆಗೆ ಇರುವಂತೆ ಮಹಾರಾಜರಿಗೆ ಹೇಳಿ ಇವರು ವ್ಯವಸ್ಥೆಯನ್ನು ಮಾಡಿಸಿಕೊಂಡರು.

ಈ ವ್ಯವಸ್ಥೆಯಾದ ಮೇಲೆ ಶ್ರೀಗಳು ಮೈಸೂರಿಗೆ ಬಂದು ರಾಜರಿಗೆ ದೇವರ ಸಂದರ್ಶನಾದಿಗಳನ್ನು ಮಾಡಿಸಿ ಸಂಚಾರಕ್ರಮೇಣ ಕರ್ಜಗಿಯ ಕಡೆಗೆ ಬಂದರು. ಅಲ್ಲಿ ಎಷ್ಟೋ ಕಾಲವಿದ್ದುಕೊಂಡು ಶಿಷ್ಯರಿಗೆ ಮುದ್ರಾಧಾರಣಾದಿಗಳನ್ನು ಕೊಡುತ್ತಿದ್ದು ಬಳಿಕ ಹೊಳೆನರಸಿಂಹಪುರಕ್ಕೆ ಬಂದರು. ಆಗಲ್ಲಿ ಕ್ಷಾಮಕಾಲವಿದ್ದಿತು. ಈ ಕಾರಣದಿಂದಲೂ ಶ್ರೀಪಾದಪುತ್ರರ ಅವ್ಯವಸ್ಥೆಯಿಂದಲೂ ಮಠಕ್ಕೆ ಆಗ ಬಲು ಹಾನಿ ತಟ್ಟಿತು. ಹಿರಿಯ ಸ್ವಾಮಿಗಳು ಹರಿಯಾತ್ರೆಯನ್ನು ಮಾಡಿದ ಮೇಲೆ ಎಲ್ಲ ಪದಾರ್ಥಗಳೂ ಸಂಸ್ಥಾನಕ್ಕೆ ಸೇರಿದವು. ಆ ಮೇಲೆ ಶ್ರೀಗಳು ಮತ್ತೆ ಸಂಸ್ಥಾನಸಮೇತರಾಗಿ ಧಾರವಾಡ ಹುಬ್ಬಳ್ಳಿಯ ಕಡೆಗೆ ನಡೆದರು. ಇಷ್ಟರಲ್ಲಿಯೇ ಶ್ರೀಪಾದಪುತ್ರರಾದ ಮುದ್ಗಲಾಚಾರ್ಯರ ಅಪವ್ಯಯಅಪಹರಣೆಗಳಿಂದ ಸಂಸ್ಥಾನವು ಅತಿ ಕ್ಷೀಣ ದೆಶೆಗೆ ಬಂದಿತು. ದೇವತಾರ್ಚನೆಯು ಯಥಾಸಾಂಗ

ವಾಗಿ ನಡೆಯುವುದು ದುಸ್ತರವಾಯಿತು. ಇದನ್ನು ಕಂಡು ಧಾರವಾಡ ಹುಬ್ಬಳ್ಳಿಗಳಲ್ಲಿರುವ ಮಠದ ಅಭಿಮಾನಿಗಳೆಲ್ಲರೂ ಒಟ್ಟಾಗಿ ಶ್ರೀಗಳ ಆಜ್ಞೆಯಿಂದ ಕೆಳಗಿನ ಗೊತ್ತುವಳಿಗಳನ್ನು ಮಾಡಿದರು.

೧) ಮುದ್ಗಲಾಚಾರ್ಯರಿಂದ ಸರ್ವಾಧಿಪತ್ಯವನ್ನು ಕಸಿದುಕೊಳ್ಳಬೇಕು.

೨) ಸಂಸ್ಥಾನದ ನಿತ್ಯನಿಯಮಗಳು ಸಂಪ್ರದಾಯದಂತೆ ನಡೆಯಲೇ ಬೇಕು.

೩) ಸೇವಾದವರಿಗೆ ಪರಂಪರೆಯ ವೇತನಗಳು ಸಿಗಲೇಬೇಕು.

೪) ಲೆಕ್ಕಪತ್ರದ ವ್ಯವಸ್ಥೆಯನ್ನು ಚನ್ನಾಗಿ ಇಡಬೇಕು.

೫) ಮಠದ ಹಣವನ್ನು ನಿಷ್ಕಾರಣವಾಗಿ ಮಠೀಯರಿಗೆ ತಿಳಿಯದಲೇ ಆರೂ ವೆಚ್ಚಮಾಡಬಾರದು.

೬) ಮೈಸೂರ ಮಹಾರಾಜರು, ಯೋಗ್ಯ ಶಿಷ್ಯರು ಇವರುಗಳನ್ನು ಕೇಳಿ ಮುಂದಿನ ಪಟ್ಟವು ಬೇರೆಯವರಿಗೆ ಸಿಗಬೇಕು.

ಈ ಗೊತ್ತುಗಳಿಗೆ ಶ್ರೀಗಳ ಶ್ರೀಕಾರಸಹಿತವಾದ ಮುದ್ರೆಯು ಬಿದ್ದು ಅದರಂತೆ ವ್ಯವಸ್ಥೆಯು ನಡೆಯಿತು.

ಮುಂದೆ ಬಹು ದಿನ ಸಂಚರಿಸಿ ಶ್ರೀಗಳು ಸಂಸ್ಥಾನಕ್ಕೆ ಧನವನ್ನು ಗಳಿಸಿಟ್ಟರು. ಮಠವು ಕೆಲಕಾಲದ ಮೇಲೆ ಕರ್ಜಗಿಗೆ ಬಂದಿತು. ಇಲ್ಲಿ ಇರುವಾಗಲೇ ಮುದ್ಗಲಾಚಾರ್ಯರು ದೈವಾಧೀನರಾದರು.

ಇಲ್ಲಿಂದ ಶ್ರೀಗಳು ದಕ್ಷಿಣಕ್ಕೆ ಹೊರಟು ಶ್ರೀರಂಗಪಟ್ಟಣದ ಮಾರ್ಗವಾಗಿ ಮೈಸೂರಿಗೆ ಬಂದರು. ರಾಜನು ಅವರನ್ನು ವಾದ್ಯ ವೈಭವಗಳೊಡನೆ ಎದುರ್ಗೊಂಡು ಅರಮನೆಗೆ ಕರೆದೊಯ್ದನು. ಯಥಾಯೋಗ್ಯವಾಗಿ ಸತ್ಕಾರಕ್ಕೆ ಮೊದಲಾಯಿತು. ರಾಜಧಾನಿಯಲ್ಲಿ ಒಂದು ಮಠವನ್ನು ಕಟ್ಟುವ ಏರ್ಪಾಡನ್ನು ಮಾಡಿದ್ದುದರಿಂದ ರಾಜನು ಶ್ರೀಗಳನ್ನು **ಬ್ರಹ್ಮಾಂಡ ವಿಷ್ಣುಪಾದಾಚಾರ್ಯ**ರ ಮನೆಯಲ್ಲಿಳಿಸಿದ್ದನು. ಅಲ್ಲಿಯೇ ೨ ತಿಂಗಳುಗಳ ವರೆಗೆ ಮಠದ ಪೂಜೆಯು ನಡೆಯಿತು. ರಾಜನು ಸಂಸ್ಥಾನಕ್ಕೆ ನಡುನಡುವೆ ಅನೇಕ ಛತ್ರ

ಚಾಮರಾದಿಯಾದ ವೈಭವದ ವಸ್ತುಗಳನ್ನು ಅರ್ಪಿಸುತ್ತಲೇ ಇದ್ದನು. ಒಮ್ಮೆ ನವರತ್ನದ ಅಭಿಷೇಕವೂ ಆಯಿತು. ಆಗ ನವರತ್ನಗಳನ್ನು ರಾಜನ ಬೊಗಸೆಯಿಂದ ಕೈಕೊಳ್ಳಲು ಶ್ರೀಗಳು ನಿರಾಕರಿಸಿದರು. ಯಾಕಂದರೆ ರಾಜರ ಕೈಯಲ್ಲಿ ಜಯಲಕ್ಷ್ಮೀ, ಭಾಗ್ಯಲಕ್ಷ್ಮೀ, ವೀರಲಕ್ಷ್ಮೀ ಈ ಮೂವರು ಶ್ರೀದೇವತೆಗಳು ಮಾತ್ರ ಇರುತ್ತಾರಂತೆ. ಆದರೆ ಬ್ರಾಹ್ಮಣನ ಕೈಯಲ್ಲಿ ದೇವತೀರ್ಥ, ಋಷಿತೀರ್ಥ, ಅಗ್ನಿತೀರ್ಥ, ಬ್ರಹ್ಮತೀರ್ಥ, ಪಿತೃತೀರ್ಥ ಎಂಬ ಈ ಪಂಚ ತೀರ್ಥಗಳಿರುವವಂತೆ. ಈ ತೀರ್ಥಗಳೊಳಗಿಂದ ದಾಟಿ ಬಂದ ಪದಾರ್ಥಗಳನ್ನಷ್ಟೇ ಸ್ಪರ್ಶ ಮಾಡತಕ್ಕದ್ದೆಂದು ಸನ್ಯಾಸಿಗಳಿಗೆ ನಿರ್ಬಂಧವಿದೆಯಂತೆ. ಈ ಕಾರಣ ವನ್ನು ಹೇಳಲು ರಾಜನು ಒಪ್ಪಿದನು. ನವರತ್ನಗಳು ವಿಷ್ಣುಪಾದಾ ಚಾರ್ಯರ ಕೈಯೊಳಗಿಂದ ಶ್ರೀಗಳ ಬೊಗಸೆಗೆ ಬಂದುವು. ಅಭಿಷೇಕ ವನ್ನು ಕಣ್ತುಂಬ ನೋಡಿ ರಾಜನು ಆನಂದಭರಿತನಾದನು. ಆ ಮೇಲೆ ಕೊರೆಯದ ಮುತ್ತುಗಳ ಬೊಗಸೆಯಿಂದಲೂ ಶ್ರೀಮೂಲರಾಮದೇವರಿಗೆ ಅಭಿಷೇಕವಾಯಿತು. ಈ ಪದಾರ್ಥಗಳಿನ್ನೂ ಮಠದಲ್ಲಿಯೇ ಇವೆ.

ಈ ನಂತರ ಮಠದ ಮಹಾಪೂಜೆಯು ಅಣ್ಣಾರಾಯರೆಂಬವರ ವಿಶಾಲವಾಗಿದ್ದ ಮನೆಯಲ್ಲಿ ನಡೆಯತೊಡಗಿತು. ಈ ಮನೆಯಲ್ಲಿ ದ್ದಾಗ ಶ್ರೀಗಳಿಗೆ ದೇಹದಲ್ಲಿ ಆಯಾಸವಾಯಿತು. ಮಠವು ಕಟ್ಟಿ ಇನ್ನೂ ಮುಗಿದಿದ್ದಿಲ್ಲ. ಆದ್ದರಿಂದ **ಅಣ್ಣಾರಾಯರ** ಮನೆಯಲ್ಲಿಯೇ ಸುಧಾಮಂಗಳವಾಗಿ ಮುಗಿಯಿತು. ರಾಜರು, ಮಠೀಯರು ಇವರು ಗಳ ಅನುಮತಿಯಿಂದ **ಗೂಳಿ ಬಾಳಾಚಾರ್ಯ**ರಿಗೆ ಆಶ್ರಮವಾ ಯಿತು. **ಸತ್ಯಸಂತುಷ್ಟ**ರೆಂದು ಹೊಸ ಶ್ರೀಗಳ ಹೆಸರಾಯಿತು. ಶ್ರೀಗ ಳಿರುವಾಗಲೇ ಹೊಸ ಶ್ರೀಗಳು ಕೆಲ ದಿನ ಸಂಸ್ಥಾನಪೂಜೆಯನ್ನು ಮಾಡಿದರು. ಆ ಮೇಲೆ ಅಣ್ಣಾರಾಯರ ಮನೆಯಲ್ಲಿಯೇ ಶ್ರೀಗಳು ಪ್ಲವಸಂವತ್ಸರದ ಆಷಾಢ ಶುದ್ಧ ೧೫ ದಿನ ನಾರಾಯಣಧ್ಯಾನಪರ ರಾದರು. ಮೂರು ದಿನಗಳ ನಂತರ ಹಳೇ ಆಗ್ರಹಾರದ ಮಠದಲ್ಲಿ ಸಂಪ್ರದಾಯದಂತೆ ಮಹಾರಾಜರ ಸಮಕ್ಷದಲ್ಲಿಯೇ ಅವರ ವೃಂದಾ ವನವಾಯಿತು. ಇವರು **ಮಾಂಡವ್ಯಋಷಿಗಳ ಅಂಶದವ**ರೆಂದು ಆಖ್ಯಾಯಿಕೆ.

# ೩೦ ಶ್ರೀ ಸತ್ಯಸಂತುಷ್ಟತೀರ್ಥರು

**ಪಟ್ಟ:- ೧೫-೪-೧೭೬೩ ಪ್ಲವದಿಂದ ೩೦-೧೨-೧೭೬೩ ಪ್ಲವದ ವರೆಗೆ**

ಇವರ ಪೂರ್ವಾಶ್ರಮದ ಹೆಸರು **ಗೂಳಿ ಬಾಳಾಚಾರ್ಯ**ರೆಂದಿದೆಯಷ್ಟೇ. ಸಕಲ ಶಾಸ್ತ್ರಗಳಲ್ಲಿ ಪಾರಂಗತರಾಗಿ ಬೇಕಾದಾಗ ತಮಗೆ ಬೇಕಾದಂತೆ ಪ್ರತಿಪಾದನವನ್ನು ಮಾಡುವ ಶಕ್ತಿಯನ್ನು ಪಡೆದಿದ್ದುದರಿಂದಲೇ ಇವರಿಗೆ "ಶಾಸ್ತ್ರಗೂಳಿ" ಯೆಂದು ಹೆಸರಾಯಿತು. ಶಾಸ್ತ್ರವಾದದಲ್ಲಿ ಕೋಟಿಕ್ರಮಗಳನ್ನಂತೂ ಇವರು ಅವ್ಯಾಹತವಾಗಿ ಸ್ವೇಚ್ಛೆಯಿಂದಲೇ ಮಾಡಿ ಜಯವನ್ನು ಪಡೆಯಬಲ್ಲರಾದುದರಿಂದ ಇವರನ್ನು ಗುರುಗಳು **"ಸತ್ಯಸಂತುಷ್ಟ"** ರೆಂದು ಕರೆದರು.

ಮೈಸೂರಲ್ಲಿ ಆಗ ಆಸ್ಥಾನಪಂಡಿತರು **ಆನಂದಾಳ್ವ**ರೆಂಬವರಿದ್ದರು. ಇವರು ಶ್ರೀಗಳ ಪೂರ್ವಾಶ್ರಮದ ಶಿಷ್ಯರು. ತಾವು ಪಟ್ಟಕ್ಕೆ ಬಂದೊಡನೆಯೇ ಶ್ರೀಗಳು ಇವರನ್ನು ಸಂಸ್ಥಾನಕ್ಕೆ ಕರೆಸಿಕೊಂಡು ಶಾಸ್ತ್ರಾರ್ಥ ವಿಚಾರದಲ್ಲಿಯೇ ಇವರೊಡನೆ ಕಾಲವನ್ನು ಕಳೆಯತೊಡಗಿದರು. ಈ ಶ್ರೀಪಾದರ ಕಾಲದಲ್ಲಿದ್ದಷ್ಟು ದೊಡ್ಡ ದೊಡ್ಡ ಪಂಡಿತರು ಬೇರೆ ಯಾವ ಕಾಲದಲ್ಲಿಯೂ ಇರಲಿಲ್ಲ. **೧ ಕಾಶಿಯ ತಿಮ್ಮಣಾಚಾರ್ಯರು ೨ ತಿರುಪತಿಯ ಶ್ರೀನಿವಾಸಾಚಾರ್ಯರು ೩ ಬ್ರಹ್ಮಾಂಡ ವಿಷ್ಣುಪಾದಾಚಾರ್ಯ**ರು ಮುಂತಾದವರೇ ಅವರಲ್ಲಿ ಮುಖ್ಯರಾಗಿದ್ದರು.

ಎಲ್ಲ ವೇದಾಂತಕೋವಿದರನ್ನು ಕೂಡಿಸಿ ಚತುಃಶಾಸ್ತ್ರಗಳಲ್ಲಿ ಮೈಸೂರ ಮಹಾರಾಜರ ಎದುರಲ್ಲಿಯೇ ಒಮ್ಮೆ ಶ್ರೀಗಳು ವಾದ ವಿವಾದವನ್ನು ಮಾಡಿಸಿದರು. ಅದರಲ್ಲಿ **ಆನಂದಾಳ್ವ**ರೇ ಪಂಡಿತಾಗ್ರೇಸರರೆಂದು ಹೊಗಳಿಸಿ ಎಲ್ಲ ವಿದ್ವಾಂಸರಿಂದ ಅವರಿಗೆ ಮಾನಪತ್ರಿಕೆಗಳನ್ನು ಕೊಡಿಸಿದರು. ಈ ಕಾಲಕ್ಕೆ ಬಂದ ಎಲ್ಲ ವಿದ್ವಾಂಸರಿಗೂ ಸಂಸ್ಥಾನದಿಂದ ತಕ್ಕ ಮರ್ಯಾದೆಯು ಸಿಗಬೇಕೆಂಬುದಕ್ಕೆ ಮಹಾರಾಜರ ಅನುಮತಿಯನ್ನು ಶ್ರೀಗಳು ಕೇಳಿದರು.

ತಾವೆದುರಿನಲ್ಲಿದ್ದಾಗ ಸಂಸ್ಥಾನದ ಹಣವು ವೆಚ್ಚವಾಗಬಾರ ದೆಂದು ಮಹಾರಾಜರು ತಾವೇ ವಿದ್ವಾಂಸರನ್ನು ಮನ್ನಿಸಲು ಸಿದ್ಧರಾ ದರು. ಭಾಂಡಾರದಿಂದ ೩ ಸಾವಿರ ಬಹಾದ್ದೂರಿ ವರಹಗಳು ಬಂದು ರಾಶಿಯಾಗಿ ಬಿದ್ದುವು. ಒಂದು ಶಾಲನ್ನೂ ರಾಶಿಯೊಳಗಿಂದ ಬೊಗ ಸೆಗೆ ಬಂದಷ್ಟು ವರಹಗಳನ್ನೂ ಪ್ರತಿಯೊಬ್ಬ ವಿದ್ವಾಂಸರಿಗೆ ತಾವೇ ಕೊಡುವುದೆಂದು ಮಹಾರಾಜರು ಅಭಿಪ್ರಾಯಪಟ್ಟರು. ಶ್ರೀಗಳು ಮಂತ್ರಾಕ್ಷತೆಗಳನ್ನು ಮಾತ್ರ ಕೊಡಬೇಕೆಂದು ಗೊತ್ತಾಯಿತು. ಆಗಿನ ನೋಟವು ರಾಜಸೂಯದ ಕಾಲಕ್ಕೆ ಶ್ರೀವೇದವ್ಯಾಸರ ಎದುರಿ ನಲ್ಲಿ ಧರ್ಮರಾಜನು ದಾನ ಮಾಡಿದನೆಂಬ ಮಹಾಭಾರತದ ಕಥೆ ಯನ್ನು ನೆನಪಿಗೆ ತಂದುಕೊಡುವಂತಿತ್ತು. ನೆರೆದವರೆಲ್ಲರೂ ಆನಂದ ದಿಂದ ಉಬ್ಬುಬ್ಬಿ 'ಧನ್ಯದಿನ'ವೆಂತೆಂದು ಜಯಜಯಾಕಾರವನ್ನು ಮಾಡಿದರು. ಆಗ ಅಂತರಿಕ್ಷದಿಂದ ಪುಷ್ಪವೃಷ್ಟಿಯಾಯಿತೆನ್ನುತ್ತಾರೆ. "ಮಹಾತ್ಮರೇ! ತಮ್ಮ ಮರ್ಯಾದೆಗೆ ತಕ್ಕಂತೆ ತಮ್ಮನ್ನು ಮನ್ನಿಸು ವುದು ನನ್ನಿಂದ ಸಾಧ್ಯವಿಲ್ಲೆಂದು ತೋರುತ್ತಿದೆ. ಇಷ್ಟರಿಂದಲೇ ತುಷ್ಟರಾಗಿರಿ;'' ಎಂಬ ಉದ್ಗಾರಗಳು ಮಹಾರಾಜರ ಬಾಯಿಯಿಂದ ಹೊರಟವು. ೪-೫ ತಾಸುಗಳಲ್ಲಿ ಯಥಾಪ್ರಕಾರವಾಗಿ ಸಭೆಯ ಕೆಲಸ ವಾಗಿಹೋಯಿತು.

ಈ ಮುಂದೆಯೂ ೨-೩ ತಿಂಗಳುಗಳ ವರೆಗೆ ಸಂಸ್ಥಾನದ ಅನ್ನ ಸಂತರ್ಪಣೆಯ ಭಾರವು ಅರಮನೆಯಿಂದಲೇ ವಹಿಸಲ್ಪಟ್ಟಿತು. ಆಗ ಒಂದು ದಿನ ಮಹಾರಾಜರಿಗೆ ಮಠತ್ರಯದ ಯತಿಗಳನ್ನು ಒಂದೆಡೆ ಯಲ್ಲಿ ಕೂಡಿಸಿ ಪೂಜಾದಿಗಳನ್ನು ಮಾಡಿಸಿ ಅವರನ್ನು ವಾಕ್ಯಾರ್ಥಕ್ಕೆ ನಿಲ್ಲಿಸಬೇಕೆಂಬ ಬಯಕೆಯುಂಟಾಯಿತು. ತಮ್ಮ ಇಚ್ಛೆಯನ್ನು ಕೂಡಲೇ ಅವರು ಶ್ರೀಗಳಿಗೆ ತಿಳುಹಿದರು. ಮಠತ್ರಯದವರಲ್ಲಿ ಜಗಳವಾಗಿ ಅನ್ಯೋನ್ಯವಾಗಿ ನಮಸ್ಕಾರಾದಿಗಳೂ ನಿಂತುಹೋಗಿರು ವುದರಿಂದ ಸಂಸ್ಥಾನ ಮರ್ಯಾದೆಗೆ ಎಲ್ಲಿ ಕುಂದುಬರುತ್ತಿದೆಯೋ ಎಂದು ಶ್ರೀಗಳು ಸಂಶಯಗೊಂಡರು. "ವಾಕ್ಯಾರ್ಥಕ್ಕೆ ಬೇಕಾದವರು ಬಂದರೂ ಬೆದರುವ ಕಾರಣವಿಲ್ಲ. ಆನಂದಾಳ್ವರು, ದಾದಾಶಾಸ್ತ್ರೀ,

ಬಾಳಾಶಾಸ್ತ್ರೀ, ಪಾಂಡುರಂಗಿ ಕೃಷ್ಣಾಚಾರ್ಯರೆಂಬ ತಮ್ಮ ಶಿಷ್ಯರಿಂದಲೇ ಕಾರ್ಯವು ಕೈಗೂಡುವು''ದೆಂದು ಶ್ರೀಗಳು ಸ್ವಚ್ಛವಾಗಿ ಹೇಳಿದರು.

ಈ ವಿಷಯವನ್ನು ಮತ್ತೆ ಸ್ವಲ್ಪ ಯೋಚಿಸಿ ಮಹಾರಾಜರು ಮತತ್ರಯದವರನ್ನು ಕಲೆಹಾಕುವ ವಿಚಾರವನ್ನು ಬದಿಗಿರಿಸಿದರು.

ಸಂಸ್ಥಾನದ ಮೇಲೆ ಬಹು ಅಭಿಮಾನವಿರುವುದರಿಂದಲೇ ಈ ಮುಂದೆಯೂ ಮಹಾರಾಜರು ಶ್ರೀಗಳಿಗೆ ಮೈಸೂರಲ್ಲಿಯೇ ವಾಸವಾಗಿರಲಿಕ್ಕೆ ಯೋಗ್ಯವಾದ ಅನುಕೂಲತೆಗಳನ್ನು ಒದಗಿಸಿಕೊಟ್ಟರು. ಶ್ರೀಗಳು ಅಲ್ಲಿಯೇ ಇರಲಾರಂಭಿಸಿದರು. ಆಗಲೂ ಮಠದಲ್ಲಿ ಅನೇಕ ವಾಕ್ಯಾರ್ಥಗಳಾಗುತ್ತಲೇ ಇದ್ದುವು.

ಆದರೆ ಇಷ್ಟರಲ್ಲಿ ಶ್ರೀಗಳಿಗೆ ಪಿತ್ತೋದ್ರೇಕವಾಗಿ ದೇಹಾಯಾಸವಾಯಿತು. ಇದನ್ನು ತಿಳಿಯುತ್ತಲೇ **ಕಲ್ಲಾಪುರದ ಭೀಮವರಾಹಾಚಾರ್ಯ**ರೆಂಬವರು ಕುಂಭಘೋಣ **ದಿವಾಣ ವೆಂಕಟರಾಯ**ರನ್ನು ಸಹಾಯವಾಗಿಟ್ಟುಕೊಂಡು ತಮಗಲ್ಲದೆ ಇತರರಿಗೆ ಮಠದ ಪಟ್ಟವು ಸಿಗಬಾರದೆಂಬ ಬುದ್ಧಿಯಿಂದ ಮಠದ ಎಲ್ಲ ಒಡವೆಗಳು ಸರಕಾರದ ವಶದಲ್ಲಿರುವಂತೆ ಇಂಗ್ಲಿಷ, ಮೈಸೂರ ಈ ಎರಡೂ ಸರಕಾರದವರಿಂದ ಶಾಸನಪತ್ರವನ್ನು ತಂದರು. ಆದರೆ ಮಠದವರು ವಿಶಿಷ್ಟ ಪ್ರಯತ್ನದಿಂದ ಬಂದ ಆ ಶಾಸನವನ್ನು ಹಿಂದಿರುಗಿಸಿದರು.

ಬಳಿಕ **ಪಾರುಪತ್ಯ ಬಾಳಾಚಾರ್ಯ**ರೂ **ಬ್ರಹ್ಮಾಂಡ ವಿಷ್ಣುಪಾದಾಚಾರ್ಯ**ರೂ ಮಹಾರಾಜರ ಅನುಮತಿಯಿಂದ ಶ್ರೀಸತ್ಯಸಂಧರ ವಂಶಜರಾದ **ಹಾವೇರಿ ಗುರುರಾಯಾಚಾರ್ಯ**ರನ್ನು ಕರೆತಂದು ಅವರಿಗೆ ಸಂಸ್ಥಾನದ ಪಟ್ಟವನ್ನು ಕೊಡಿಸುವುದೆಂದು ಗೊತ್ತು ಮಾಡಿದರು. ಸಂಪ್ರದಾಯದಂತೆ ಸಂಸ್ಥಾನದ ಎಲ್ಲ ಕಾರ್ಯಗಳನ್ನೂ ನಿರ್ವಹಿಸುತ್ತೇವೆಂಬ ಬಗ್ಗೆ ಗುರುರಾಯಾಚಾರ್ಯರಿಂದ ಒಂದು ಕರಾರಪತ್ರವನ್ನು ಬರೆಯಿಸಿಕೊಂಡರು. ನಂತರ ಶ್ರೀಗಳು ಗುರುರಾಯಾಚಾರ್ಯರ ತಲೆಯ ಮೇಲೆ ಶ್ರೀವೇದವ್ಯಾಸರ ಸಂಪುಟವನ್ನು ತೆಗೆದಿಟ್ಟರು.

ಶಂಖೋದಕದಿಂದ ಪಟ್ಟಾಭಿಷೇಕವಾಯಿತು. ಹೊಸ ಶ್ರೀಗಳನ್ನು "**ಸತ್ಯಪರಾಯಣ**"ರೆಂದು ಕರೆಯಲಾಯಿತು. ಆಗ ಶ್ರೀಸತ್ಯ ಸಂತುಷ್ಟರು ಪವಿತ್ರಾಸನದಲ್ಲಿ ಕುಳಿತು ಪ್ಲವ ಸಂವತ್ಸರದ ಫಾಲ್ಗುಣ ಬಹುಳ ೩ರಂದು **ಮೈಸೂರಲ್ಲಿ** ನಾರಾಯಣಧ್ಯಾನಪರರಾದರು. ಇವರ ಕಾಲಕ್ಕೆ ದ್ವೈತಸಿದ್ಧಾಂತಗಳಿಗೆ ಬಲು ಕಳೆ ಬಂದಿದ್ದಿತು. ಇವರು **ಶೇಷಾಂಶ**ರೆಂದು ಹೇಳಿಕೆಯಿದೆ.

# ೩೧ ಶ್ರೀಸತ್ಯಪರಾಯಣತೀರ್ಥರು

ಪಟ್ಟ: ೩೦-೧೨ ೧೭೮೧ ಪ್ಲವದಿಂದ ೭-೭-೧೭೮೫ ರುಧಿರೋದ್ಗಾರಿಯ ವರೆಗೆ

ಶ್ರೀಸಂತುಷ್ಟರಿಂದ ಪಟ್ಟವನ್ನು ಪಡೆದು ಇವರು ಸಂಚಾರ ಕ್ರಮವಾಗಿ ಒಮ್ಮೆ ಪಂಪಾಕ್ಷೇತ್ರಕ್ಕೆ ದಯಮಾಡಿಸಿದರು. ಅವರಿಗೆ ಅಲ್ಲಿ **ಯಂತ್ರೋದ್ಧಾರ ಪ್ರಾಣದೇವರ** ದರ್ಶನವಾಯಿತು. **ಕೋದಂಡ ರಾಮದೇವರ** ಪೂಜೆಯನ್ನು ಶ್ರೀಗಳು ಮಾಡಿದರು. ನವವೃಂದಾವನದ ಗಡ್ಡೆಯಲ್ಲಿ **ಶ್ರೀ ಮಾಧವತೀರ್ಥ**ರು **ಚಂದ್ರಿಕಾಚಾರ್ಯ**ರು ಮುಂತಾದ ಗುರುಗಳ ಪ್ರೀತ್ಯರ್ಥವಾಗಿ ಹಸ್ತೋದಕಾದಿಗಳಾಗಿ ಅನ್ನ ಸಂತರ್ಪಣೆಯಾಯಿತು. ಆನೆಗುಂದಿ ರಾಜನು ಆಗ ಶ್ರೀಗಳನ್ನು ಬಹು ಮನ್ನಿಸಿದನು. ಆ ಮೇಲೆ ಶ್ರೀನರಹರಿತೀರ್ಥರ ಆರಾಧನೆಯು ಬಹು ವಿಜೃಂಭಣೆಯಿಂದ ಜರುಗಿತು. ಹಂಪೆಯ ವಿರೂಪಾಕ್ಷನಿಗೆ ಶ್ರೀಗಳು ಕನಕಾಭಿಷೇಕವನ್ನು ಮಾಡಿಸಿದರು. ಮಹಾಪೂಜಾದಿಗಳನ್ನು ಮುಗಿಸಿಕೊಂಡು ಅಲ್ಲಿಂದ ಶ್ರೀಪಾದರು ಮಳಖೇಡಕ್ಕೆ ಹೊರಟರು. ಅಲ್ಲಿ ಯಥಾವಿಧಿಯಾಗಿ ಹಸ್ತೋದಕಾದಿಗಳಾಗಿ ಮಠವು ಹೈದರಾಬಾದಕ್ಕೆ ಹೋಯಿತು.

ಬಳಿಕ ಆ ಊರಲ್ಲಿಯ ರಾಜಾಗೋಪಾಳರಾಯ ಮುಂತಾದವರಲ್ಲಿ ಪೂಜೆಯು ಉತ್ಸವದಿಂದ ಜರುಗಿತು. ದಿವಾಣರಾದ ರಾಜಾ ಚಂದೂಲಾಲರ ಮುಖಾಂತರವಾಗಿ ನಿಜಾಮರಿಂದಲೂ ಮಠಕ್ಕೆ ಬಹು ಮನ್ನಣೆಯು ಸಿಕ್ಕಿತು. ಸಾರಿ, ಕುಂಬಾರಿ ಮುಂತಾದ ಗ್ರಾಮಗಳ

ಉಂಬಳಿಯೂ ಶಾಲುಶಕಲಾತಿಗಳೂ ಐದು ಸಾವಿರ ರೂಪಾಯಿಗಳೂ ಸಂಸ್ಥಾನಕ್ಕೆ ದೊರಕಿದುವು. ದಿವಾಣರೂ ೫ ಬಂಗಾರದ ತಾಟು ಗಳನ್ನೂ ನೂರು ವರಹಗಳನ್ನೂ ಕಂಠಿಪದಕಗಳನ್ನೂ ಶ್ರೀಗಳಿಗೆ ಸಮರ್ಪಿಸಿದರು. ಇದಲ್ಲದೆ ಸಂಸ್ಥಾನದ ಕಾವಲಿಗಾಗಿ ೨೫ ಅರಬ ೨೫ ರೋಹಿಲ ಸಿಪಾಯಿಗಳು ಸರಕಾರದಿಂದ ನಿಯಮಿಸಲ್ಪಟ್ಟರು. ಮೊಗಲಾಯಿಯಲ್ಲಿ ಹೋದಹೋದಲ್ಲೆಲ್ಲ ಶ್ರೀಗಳಿಗೆ ಮನ್ನಣೆಯಾಗ ಬೇಕೆಂದು ಅಲ್ಲಲ್ಲಿಯ ಅಧಿಕಾರಿಗಳಿಗೆ ನಿಜಾಮರ ಕಟ್ಟಪ್ಪಣೆಯಾಯಿತು.

ಮುಂದೆ ಮಠವು ಸಂಚಾರಕ್ರಮದಿಂದ **ಲಿಂಗಂಪಲ್ಲಿ**ಗೆ ಬಂದಿತು. ಅಲ್ಲಿ ಅದು ೬ ತಿಂಗಳು ವಾಸವಾಗಿದ್ದಿತು. ಆ ಕಾಲಕ್ಕೆ ಆ ಊರಲ್ಲಿಯ ಮಠವು ಬೆಳೆಯಿಸಲ್ಪಟ್ಟಿತು. ಅಲ್ಲಿ ಈಶ್ವರ ಮತ್ತು ಪ್ರಾಣದೇವರ ಪ್ರತಿಷ್ಠಾಪನೆಯಾಯಿತು. ೧೦ ಸಾವಿರ ಬ್ರಾಹ್ಮಣರ ಭೋಜನವು ಏಕಕಾಲಕ್ಕೆ ಆಯಿತು. ಇಲ್ಲಿಂದ ಶ್ರೀಗಳು ಗದ್ವಾಲಿಗೆ ಬಂದರು. ಅಲ್ಲಿಯ ರಾಜನು ಇವರನ್ನು ಬಹಳವಾಗಿ ಪೂಜಿಸಿದನು. ಬಳಿಕ ಮಠವು ಧಾರವಾಡ ಪ್ರಾಂತಕ್ಕೆ ದಯಮಾಡಿಸಿತು.

ಶ್ರೀಗಳ ಪರಮ ಗುರುಗಳಾದ (ಗುರುಗಳ ಗುರು) ಶ್ರೀಸತ್ಯ ಸಂಕಲ್ಪರ ಕಾಲಕ್ಕೆ ಸಂಸ್ಥಾನಕ್ಕೆ ೨ ಲಕ್ಷ ರೂಪಾಯಿಗಳ ಸಾಲವಾಗಿ ಬೆಲೆಯುಳ್ಳ ಆಭರಣಾದಿಗಳು ಅಡವುಹಾಕಲ್ಪಟ್ಟಿದ್ದುವು. ಅವುಗಳ ನ್ನೀಗ ಬಿಡಿಸಿಕೊಳ್ಳಬೇಕೆಂದು ಶ್ರೀಪಾದರು ಬಗೆದರು. ಎಲ್ಲ ಶಿಷ್ಯರೂ ತಮ್ಮ ಎರಡೆರಡು ತಿಂಗಳುಗಳ ಸಂಬಳವನ್ನು ಸಂಸ್ಥಾನಕ್ಕೆ ಸಲ್ಲಿಸು ವುದೆಂದು ಹೇಳಿದರು. ವಿಚಾರಾಂತ್ಯದಲ್ಲಿ ಸಣ್ಣ ಸಂಬಳದವರಿಂದ ೧ ತಿಂಗಳದ ಹಣವನ್ನು ದೊಡ್ಡ ಸಂಬಳದವರಿಂದ ೨ ತಿಂಗಳುಗಳ ಹಣವನ್ನು ತೆಗೆದುಕೊಳ್ಳಲಾಯಿತು. ಶ್ರೇಷ್ಠಿ, ಸಾವುಕಾರ, ದೇಸಾಯಿ ದೇಶಪಾಂಡೆ ಈ ಮುಂತಾದವರಿಂದಲೂ ಯೋಗ್ಯತಾನುಸಾರವಾಗಿ ಆಗ ಹಣವು ದೊರೆಯಿತು.

ನಂತರ ಶ್ರೀಗಳು ಸಾಂಗಲಿಗೆ ಹೋದರು. ಅಲ್ಲಿ **ಶ್ರೀಸತ್ಯ ವ್ರತ ತೀರ್ಥ** ಗುರುಗಳ ದರ್ಶನವವರಿಗಾಯಿತು. ಅಲ್ಲಿಂದ ಸಂಸ್ಥಾ ನವು ಕೊಲ್ಹಾಪುರಕ್ಕೆ ಹೋಯಿತು. ಅಲ್ಲಿ ಮಹಾಲಕ್ಷ್ಮಿಯನ್ನು

ಸಂದರ್ಶಿಸಿ ನಿಂತಲ್ಲಿಯೇ ಶ್ರೀಗಳು **ಲಕ್ಷ್ಮೀ ದಂಡಕವೆಂಬ** ಸ್ತೋತ್ರವನ್ನು ರಚಿಸಿ ಹೇಳಿದರು. ಆಗ ಶ್ರೀದೇವಿಗೆ ಲಕ್ಷ ಕುಂಕುಮ ಪೂಜೆಯೂ ಆಯಿತು. ಸಾವಿರ ಮುತ್ತೈದಿಯರಿಗೆ ಸೀರೆಕುಪ್ಪಸಗಳನ್ನು ಕೊಡಲಾಯಿತು. ಸಾವಿರ ದಂಪತಿಗಳ ಅನ್ನಸಂತರ್ಪಣೆಯಾಯಿತು. ಬಳಿಕ ರಾಜನಿಂದಲೂ ಮಠಕ್ಕೆ ಮನ್ನಣೆಯಾಯಿತು. ೨ ಆನೆಗಳನ್ನೂ ೨೫ ರೋಹಿಲ ಸಿಪಾಯಿಯರನ್ನೂ ಕಾಣಿಕೆಯಾಗಿ ಕೊಡಲಾಯಿತು.

ಅಲ್ಲಿಂದ ಶ್ರೀಗಳು ಮಹಾಯಾತ್ರೆಗಾಗಿ ಹೊರಟರು. ಸಂಚಾರ ಕ್ರಮದಿಂದ **ನಾಗಪೂರ**ಕ್ಕೆ ಹೋಗಿ ಕೀಲಕ ಸಂವತ್ಸರದ ಫಾಲ್ಗುಣ ವದ್ಯ ಅಮಾವಾಸ್ಯೆಯ ಪೂಜೆಯನ್ನು ಅಲ್ಲಿ ಪೂರೈಸಿಕೊಂಡು **ಲಾತೂರ** ಎಂಬಲ್ಲಿಗೆ ಸಂಸ್ಥಾನವು ಹೋಯಿತು. ನಗಾರಿ ನೌಬತ್ತುಗಳ ದನಿಯನ್ನು ಕೇಳಿ ಪೂಜೆಯನ್ನು ನೋಡಲಿಕ್ಕೆಂದು ಆ ಊರವರೆಲ್ಲರೂ ನೆರೆದರು. ರತ್ನವೈಢೂರ್ಯಾದಿಗಳು ಅವರ ಕಣ್ಣನ್ನು ಕುಕ್ಕಿಸಿಬಿಟ್ಟುವು. ಎಲ್ಲರೂ ಆನಂದಬಟ್ಟರು. ಆದರೆ ಸಂಸ್ಥಾನದ ವೈಭವದ ಸುದ್ದಿಯು ಆ ಊರ ಸಮೀಪದಲ್ಲಿಯ ಕಳ್ಳರ ತಂಡದವರಿಗೆ ಗೊತ್ತಾಗಿ ಮಠವನ್ನು ಸುಲಿದುಕೊಳ್ಳಲು ಅವರು ಹವಣಿಸತೊಡಗಿದರು. ಶ್ರೀಗಳು ಲಾತೂರ ಕೋಟೆಯಲ್ಲಿಳಿದುಕೊಂಡಿದ್ದರು. ಒಳಗೆ ಮಠದ ಜನರಷ್ಟೇ ಇದ್ದರು. ಸಂಜೆಯಾಗುತ್ತಲೇ ೨೦೦೦ ಜನ ಕಳ್ಳರ ಮುತ್ತಿಗೆಯು ಕೋಟೆಗೆ ಬಿದ್ದಿತು. ಶ್ರೀಗಳನ್ನು ಮೊದಲುಮಾಡಿಕೊಂಡು ಎಲ್ಲರೂ ಹೌಹಾರಿ ಕುಳಿತುಕೊಂಡರು. **ರೋಹಿಲ ಜಮಾದಾರ**ನೇನೋ ಶ್ರೀಗಳಿಗೆ ಧೈರ್ಯಗೊಳಿಸುತ್ತಿದ್ದನು. ಆದರೆ ಚಿಂತೆಯೇನೂ ತಪ್ಪಲಿಲ್ಲ. ಎಲ್ಲರೂ ಆ ದಿನ ಬಿಡುಗಣ್ಣಿನವರೇ ಆಗಿದ್ದರು. ಮಧ್ಯರಾತ್ರಿಯಾದಾಗ ಶ್ರೀಗಳಿಗೆ ಸ್ವಲ್ಪ ನಿದ್ರೆಯು ಹತ್ತಿತ್ತೇನೋ ಆಗವರು ಒಂದು ಕನಸನ್ನು ಕಂಡರು. ಅಲ್ಲಿ ಪ್ರಾಣದೇವರು ಗದೆಯನ್ನು ಹಿಡಿದುಕೊಂಡು ಎದುರಿನಲ್ಲಿ ನಿಂತಂತಾಗಿತ್ತು.

ಶ್ರೀಗಳು ಕೂಡಲೇ ಎದ್ದು ಪ್ರಾತಃಸ್ಮರಣೆಯನ್ನು ಮಾಡಿ ಶಿಷ್ಯರಿಗೆ ಸ್ನಾನದ ಸಿದ್ಧತೆಯನ್ನು ಮಾಡ ಹೇಳಿದರು. ಪೂಜೆಯ ಸಿದ್ಧತೆಗೂ ಆಗಲೇ ಅಪ್ಪಣೆಯಾಯಿತು. ಶ್ರೀಪಾದರು ಸ್ನಾನ ಮಾಡಿ

ಮಂಟಪವನ್ನು ಅಲಂಕಾರವಾಗಿ ರಚಿಸಿ ಎಲ್ಲ ಪಂಡಿತರೊಡನೆ ಪೂಜೆಯನ್ನು ಬಹು ವಿಜೃಂಭಣೆಯಿಂದ ಆರಂಭಿಸಿ ಕಳ್ಳರ ಮುತ್ತಿಗೆಯ ಪರಿಣಾಮವೇನಾಗುವುದೋ ಎಂತೆಂದು ನೋಡುತ್ತ ಕುಳಿತರು. ಎಲ್ಲರೂ ಶ್ರೀಮೂಲ ರಾಮದೇವರ ಮೇಲೆಯೇ ಎಲ್ಲ ಭಾರವನ್ನು ಹೊರಿಸಿಬಿಟ್ಟರು. ಶ್ರೀಗಳು ಮೇಲಿಮೇಲಿ ಅಭಿಷೇಕ ಪಾರಾಯಣಾದಿಗಳನ್ನು ನಡೆಸಿದ್ದರು. ಇಷ್ಟರಲ್ಲಿ ಸೂರ್ಯೋದಯವಾಯಿತು. ಮೋಹಿಲ ಜಮಾದಾರನು ಕೋಟೆಯ ಹೊರಕ್ಕೆ ಬಂದನು. 'ಕೋಟೆಯೊಳಗಿನ ಅಸಂಖ್ಯಾಕರಾದ ಸಾಯುಧರ ಎದುರಿನಲ್ಲಿ ನೀವು ನಿಲ್ಲಲಾರಿರಿ. ಸುಮ್ಮನೆ ಶ್ರೀಗಳಿಗೆ ಶರಣುಹೋಗಿರಿ' ಎಂತೆಂದು ಗಂಭೀರವಾಗಿ ಆತನು ನುಡಿದನು. ಇದನ್ನು ಕೇಳುತ್ತಲೇ ಕಳ್ಳರು ಕತ್ತನ್ನು ಮೇಲಕ್ಕೆತ್ತಿ ಕೋಟೆಯನ್ನು ನೋಡಿದರು. ಆಗಲೆ ಅಲ್ಲಿ ಸಾಯುಧವಾಗಿದ್ದ ಸಾವಿರಾರು ಮರ್ಕಟಗಳು ಅವರಿಗೆ ಕಾಣಿಸಿದುವು. ಇದನ್ನು ನೋಡಿ ಕಳ್ಳರು ಗಾಬರಿಗೊಂಡು ಒಬ್ಬೊಬ್ಬರಾಗಿ ಶ್ರೀಗಳಿಗೆ ಶರಣುಹೊಕ್ಕು ಕಾಣಿಕೆಯನ್ನರ್ಪಿಸಿದರು. ಮತ್ತು ಸಂಸ್ಥಾನವನ್ನು ತೊಂದರೆಯಾಗದಂತೆ ನರ್ಮದೆಯ ತೀರಕ್ಕೆ ತಂದು ಮುಟ್ಟಿಸಿದರು. ಬಳಿಕ ಮಠದಲ್ಲಿ ಅಡಿಗೆಯಾಗಿ ಎಲ್ಲರೂ ಆನಂದದಿಂದ ಉಂಡು ನಿದ್ರಿಸಿದರು. ಶ್ರೀಗಳು ಮಾತ್ರ ಶ್ರೀರಾಮರ, ಪ್ರಾಣದೇವರ ಮಹಿಮೆಯನ್ನು ನೆನೆಸಿಕೊಂಡು ಆನಂದಬಾಷ್ಪಗಳನ್ನುದಿರಿಸುತ್ತ ಕುಳಿತಿದ್ದರು.

ಮರು ದಿನ ಸಂಸ್ಥಾನವು **ಜಬಲಪುರ**ಕ್ಕೆ ಬಂದಿತು. ಅಲ್ಲಿಯೂ ನರ್ಮದೆಯ ದಂಡೆಯ ಮೇಲೆ ದೊಡ್ಡ ಅನ್ನಸಂತರ್ಪಣೆಯಾಯಿತು. ಬಳಿಕ ಮಠವು **ಪ್ರಯಾಗಕ್ಕೆ** ನಡೆಯಿತು. ಅಲ್ಲಿ ೩ ತಿಂಗಳುಗಳ ವಾಸವಾಯಿತು. ತ್ರಿವೇಣಿಯ ಮಹಿಮೆಯನ್ನು ಎಲ್ಲರಿಗೂ ತಿಳಿಸುತ್ತಲಿದ್ದು ಎಲ್ಲ ಮಠದವರ ತೀರ್ಥವಿಧಿಗಳು ಮುಗಿದ ಮೇಲೆ ಶ್ರೀಗಳು **ಕಾಶಿ**ಗೆ ಹೋದರು. ಅಲ್ಲಿಯೂ ೩ ತಿಂಗಳುಗಳ ವಾಸವಾಯಿತು. ಆಗ ದೊಡ್ಡ ದೊಡ್ಡ ಪಂಡಿತರನ್ನು ನೆರೆಯಿಸಿ ವಾಕ್ಯಾರ್ಥಗಳನ್ನು ಶ್ರೀಗಳು ಮಾಡಿಸುತ್ತಿದ್ದರು. ವಾಕ್ಯಾರ್ಥಕ್ಕೆ ಕೂಡಿದವರಿಗೆಲ್ಲ ಬಹುವಾಗಿ ವಸ್ತ್ರಾಲಂಕಾರಾದಿಗಳಿಂದ ಮನ್ನಿಸುತ್ತಿದ್ದರು. ಅನ್ನಸಂತರ್ಪಣೆಗಂತೂ ಮಿತಿಯೇ ಇರಲಿಲ್ಲ. ಹೀಗೆ ಕಾಲವನ್ನು ಕಳೆಯುತ್ತಿರು

ಹಾಗ ಶ್ರೀಗಳು **ಕಾಶಿಯ ತಿಮಣಾಚಾರ್ಯ**ರೆಂಬವರಿಗೆ ಮಠಾಧಿಕಾರವನ್ನು ಕೊಟ್ಟರು. ಆ ಮೇಲೆ ಪಂಚಕ್ರೋಶಾದಿಗಳನ್ನು ಶ್ರೀಪಾದರು ಯಥಾವಿಧಿಯಾಗಿ ತೀರಿಸಿದರು. ಒಮ್ಮೆ ರಾಮದೇವರ ಪೂಜೆಯ ಕಾಲಕ್ಕೆ ಸಾವಿರಾರು ಮಂಗಗಳು ಬಂದು ಬಂದು, ಬಾಗಿ ಹೋಗುತ್ತಿರುವ ದೃಶ್ಯವನ್ನು ನೋಡಿದ ಕಾಶಿಯ ವಾಸಿಗಳು ಬೆರಗಾಗಿ ಶ್ರೀಗಳ ಮಹಿಮೆಯನ್ನು ಕೊಂಡಾಡುತ್ತ ಅನೇಕ ಕಾಣಿಕೆ ಮುಂತಾದವುಗಳಿಂದ ಶ್ರೀಗಳನ್ನು ಸತ್ಕರಿಸಿದರು.

ಆ ಮೇಲೆ ಸಂಸ್ಥಾನವು **ಗಯಾ** ಕ್ಷೇತ್ರಕ್ಕೆ ಹೋಯಿತು. ಶ್ರೀಗಳು ವಿಷ್ಣುಪಾದದ ಮೇಲೆ ಪಿಂಡೋದಕ ಪ್ರದಾನವನ್ನು ಮಾಡಿದರು. ಆ ಮೇಲೆ ಎಲ್ಲ ಗಯಾವಾಡರ ಮುದ್ರಾಧಾರಣಾದಿಗಳು ನಡೆದುವು. ಗಯಾವಾಡರು ೨೫ ಸಾವಿರ ರೂಪಾಯಿಗಳನ್ನು ಶ್ರೀಗಳಿಗೆ ಅರ್ಪಿಸಿದರು. ಇಷ್ಟು ದಿನದ ಸಂಚಾರದಿಂದ ಮಠದ ಸಾಲವು ತೀರಲು ಬಂದಿದ್ದಿತು.

ಆನಂತರ ಶ್ರೀಗಳು ಮೇಲೆ ಉತ್ತರದ ಕಡೆಗೆ ಹೊರಡಬೇಕೆಂದು ಬಗೆದರು. ಆದರೆ ತಡೆಯಿಲ್ಲದ ದಾರಿಯು ಸಂಸ್ಥಾನಕ್ಕೆ ಸಿಗುವುದು ಅಸಾಧ್ಯವೆಂದು ಎಲ್ಲರಿಗೂ ತೋರಿತು. ಆಗ ವಿಚಾರಿಸಿ ಶ್ರೀಗಳು ಗವ್ಹರ್ನರ ಜನರಲ್‌ರಿಂದ ಎಲ್ಲೆಲ್ಲಿಯೂ ತಡೆಯಾಗಬಾರದೆಂಬುದಾಗಿ ಒಟ್ಟು ಹುಕ್ಕುಂ ತೆಗೆದುಕೊಳ್ಳಬೇಕೆಂದು ಅಂದುಕೊಂಡರು. ಆ ಕೂಡಲೇ ಸಂಸ್ಥಾನ ಚಿನ್ಹಗಳಿಂದ ಸಹಿತವಾಗಿ **ಖರ್ನಿಸ ಬೋಧರಾಯಾಚಾರ್ಯ**ರನ್ನು ಕಲಕತ್ತೆಗೆ ಕಳಿಸಿದರು. ಅವರು ಜಾಣತನದಿಂದ ಅಲ್ಲಿಯ ಅಧಿಕಾರಿಗಳ ಮನವೊಲಿಸಿ ಮಠದ ಮಹಾತ್ಮೆಯನ್ನು ಅವರಿಗೆ ವಿಸ್ತರಿಸಿ ಹೇಳಿದರು. ಆಗ ಅವರು ಬ್ರಿಟಿಶ ಸರಕಾರವಿರುವವರೆಗೆ ಉತ್ತರಾದಿ ಮಠವು ಬೇಕಾದಲ್ಲಿ ಸಂಚರಿಸಬಹುದೆಂದೂ ಅವಕ್ಕೆ ಸುಂಕಾದಿಗಳ ಕಟ್ಟಲೆಯು ಇಲ್ಲವೆಂದೂ ಒಟ್ಟು ಶಾಸನ ಪತ್ರವನ್ನು ವ್ಹಾಯಿಸರಾಯರಿಂದ ಕೊಡಿಸಿದರು.

ಬಳಿಕ ಶ್ರೀಗಳು **ಅಯೋಧ್ಯೆಗೆ** ಹೋಗಿ ಅಲ್ಲಿಂದ **ಗೋಕುಲ, ವೃಂದಾವನ, ಗೋವರ್ಧನ, ಮಥುರಾ** ಮುಂತಾದ ಯಾತ್ರೆಗಳನ್ನು

ಮುಗಿಸಿಕೊಂಡು ಭರತಪುರದ ಮೇಲಿಂದ **ದಿಲ್ಲಿ**ಗೆ ಹೋದರು. ಅಲ್ಲಿ **ಗೋಪೀಚಂದ, ಬದರೀದಾಸ** ಎಂಬಿಬ್ಬರು ಶ್ರೀಮಂತರು ಶ್ರೀಗಳನ್ನು ಬಲು ಸತ್ಕರಿಸಿದರು. ಅಲ್ಲಿಂದ ಮಠವು ಕಾನಪುರಕ್ಕೆ ಬಂದಿತು. ಅಲ್ಲಿದ್ದುಕೊಂಡು ಶ್ರೀಗಳು ಬ್ರಹ್ಮಾವರ್ತದಲ್ಲಿದ್ದ **ಶ್ರೀಮಂತ ಬಾಜೀರಾಯ**ರಿಗೆ ಪಂಡಿತರಿಂದ ಅನುಗ್ರಹಾಶೀರ್ವಾದಗಳನ್ನು ಕಳುಹಿಕೊಟ್ಟರು. ಕೂಡಲೇ ಶ್ರೀಮಂತರು ಶ್ರೀಗಳನ್ನು ಬರಮಾಡಿ ತರಲಿಕ್ಕೆಂದು ತಮ್ಮ ವಜೀರರಾದ **ಪರಶುರಾಮಭಾವೂ ಪಟವರ್ಧನ**ರನ್ನು ಕಳುಹಿಕೊಟ್ಟರು. ಶ್ರೀಗಳು ಸಕಲ ವೈಭವದೊಡನೆ ಅಂದಣವನ್ನೇರಿ ಬ್ರಹ್ಮಾವರ್ತಕ್ಕೆ ದಯಮಾಡಿಸಿದರು. ಊರು ಸಮೀಪಿಸುತ್ತಲೇ **ವಾಲ್ಮೀಕಾಶ್ರಮ**ದಲ್ಲಿ ಸ್ನಾನವನ್ನು ತೀರಿಸಿಕೊಂಡು ನಿರ್ಮಾಲ್ಯ ವಿಸರ್ಜನೆಯನ್ನು ಮಾಡಿಕೊಂಡು ಶ್ರೀಮೂಲ ರಾಮರ ಪೆಟ್ಟಿಗೆಯನ್ನು ಹೆಗಲಲ್ಲಿಟ್ಟು ಕಾಲಿಲಿ ನಡೆಯುತ್ತ ಪಾರಾಯಣವನ್ನು ಮಾಡುತ್ತ **ರಾಮಘಟ್ಟ**ದ ಕಡೆಗೆ ಶ್ರೀಗಳು ಸಾಗಿ ನಡೆದರು. ಶ್ರೀಮಂತರು **ಲಕ್ಷ್ಮಣಘಟ್ಟ**ದಲ್ಲಿ ಆಹ್ನಿಕವನ್ನು ನಡೆಸಿದ್ದರು. ಶ್ರೀಗಳು ಅಂದಣವನ್ನೇರಿ ಬಂದದ್ದು ಸಶಾಸ್ತ್ರವಲ್ಲವೆಂದು ಅವರು ಆಕ್ಷೇಪಿಸಿದರು. ಆಗ **ತಾತ್ಯಾಸಾಹೇಬ** ಮುಂತಾದವರು ಎಲ್ಲವನ್ನೂ ಅರಿತವರಾದುದರಿಂದ ಶ್ರೀಮಂತರೆದುರಿನಲ್ಲಿ ಮಠದ ಸಂಪ್ರದಾಯವನ್ನು ವಿಸ್ತರಿಸಿ ಹೇಳಿದರು. "ಉತ್ತರಾದಿಮಠದ ಸ್ವಾಮಿಗಳು ಮೊದಲಿಂದಲೂ ವಿರಕ್ತರು. ಅಂಚಿನ ಶಾಟಿಯನ್ನು ಅವರು ಹೊರುವದಿಲ್ಲ. ಅಂಚಿರದ ಶಾಟಿಯನ್ನು ಮಧ್ಯದಲ್ಲಿ ಹರಿದು ಹೊಲಿಸಿ ಧರಿಸುವ ಪರಿಪಾಠವಿದೆ. ಕಟಿಸೂತ್ರಕೌಪೀನಗಳ ಹೊರತಾಗಿ ಬೇರೆ ಬಟ್ಟೆಗಳೇ ಅವರಿಗಿರುವದಿಲ್ಲ. ತುಳಸಿಯ ಮಾಲೆಯನ್ನಲ್ಲದೆ ಅವರು ರತ್ನಹಾರಾದಿಗಳನ್ನು ಧರಿಸುವವರಲ್ಲ. ಉತ್ಸವಾದಿಗಳ ಕಾಲಕ್ಕೆ ಆನೆ ಅಂಬಾರಿಗಳಲ್ಲಿ ಕುಳಿತಿರಲು ಮುಂದೆ ಶಾಸ್ತ್ರದ ಪುಸ್ತಕಗಳನ್ನು ಇಟ್ಟುಕೊಂಡು ಎಲ್ಲ ವೈಭವವು ಶ್ರೀ ವೇದವ್ಯಾಸರಿಗೆಂದು ಅವರು ಅನುಸಂಧಾನವನ್ನು ಮಾಡುತ್ತಾರೆ. ತಲೆಗೆ ಶಾಲುರುಮಾಲುಗಳನ್ನು ಸುತ್ತಿಕೊಳ್ಳದೆ ಶಾಟಿಯ ಚೌಕವೊಂದನ್ನು ಸುತ್ತಿಕೊಳ್ಳುತ್ತಾರೆ. ಇದೀಗ

ಸ್ನಾನಮಾಡಿ ದೇವರ ಪೆಟ್ಟಿಗೆಯನ್ನು ಹೆಗಲಮೇಲಿಟ್ಟು ಶ್ರೀಗಳು ನಡೆದುಕೊಂಡು ಬರುತ್ತಿದ್ದಾರೆ, ನೋಡಿರಿ'' ಎಂದು ಮುಂತಾಗಿ ಎಲ್ಲರೂ ಶ್ರೀಮಂತರಿಗೆ ಹೇಳಿದರು. ಇದನ್ನು ಕೇಳಿ ಶ್ರೀಮಂತರು ಬೇಗನೆ ಬಂದು ಶ್ರೀಗಳ ಪಾದಸ್ಪರ್ಶದಿಂದ ತಾವು ಧನ್ಯರೆಂದು ತಮ್ಮೊಳಗೇ ಅಂದುಕೊಂಡರು. ಬಳಿಕ ಅರಮನೆಗೆ ಶ್ರೀಗಳನ್ನು ಕರೆದೊಯ್ದು ಶ್ರೀಮಂತರು ಅವರನ್ನು ಚನ್ನಾಗಿ ಸತ್ಕರಿಸಿದರು. ಎಂಟು ದಿನಗಳ ವರೆಗೆ ೫೦೦೦ ಬ್ರಾಹ್ಮಣರ ಪಂಚಪಕ್ವಾನ್ನಗಳ ಊಟವು ದಿನಾಲೂ ಆಗುತ್ತಿತ್ತು. ಕಡೆಯ ದಿನ ಶ್ರೀಮಂತರು ಮೂವತ್ತು ಸಾವಿರ ರೂಪಾಯಿಗಳನ್ನು ಬೆಳ್ಳಿಯ ತಟ್ಟೆಯಲ್ಲಿಟ್ಟು ಶ್ರೀಗಳ ಮುಂದಿರಿಸಿದರು. ಇದಲ್ಲದೆ ಪದಕವುಳ್ಳ ೭ ಎಳೆಯ ಮುತ್ತಿನ ಕಂಠಿ, ವೈಜಯಂತೀ ಮಾಲಾ, ೨ ಆನೆಗಳು, ಬೆಳ್ಳಿ ಬಂಗಾರದ ಅನೇಕ ಆಭರಣಗಳು ಮುಂತಾದವನ್ನೂ ಕೊಟ್ಟರು.

ಬ್ರಹ್ಮಾವರ್ತದಿಂದ ಸಂಸ್ಥಾನವು ಒಡ್ಡಿಯ ಜಗನ್ನಾಥಪುರಿಗೆ ಹೊರಟಿತು. ಅಲ್ಲಿಂದ ವಿಶಾಖಪಟ್ಟಣದ ಮಾರ್ಗವಾಗಿ ಸಿಂಹಾಚಲಕ್ಕೆ ಹೋಯಿತು. ಅಲ್ಲಿ ಶ್ರೀಗಳು ಶ್ರೀನೃಸಿಂಹದೇವರ ದರ್ಶನವನ್ನು ತೆಗೆದುಕೊಂಡರು. ಮುಂದೆ ಕೂರ್ಮಕ್ಷೇತ್ರದಲ್ಲಿಯ ಶ್ರೀನರಹರಿತೀರ್ಥರಿಂದ ಪ್ರತಿಷ್ಠಿತವಾದ ಶ್ರೀರಾಮರನ್ನು ನೋಡಿಕೊಂಡು ಶ್ರೀಪಾದರು ರಾಜಮಹೇಂದ್ರಿಗೆ ದಯಮಾಡಿಸಿದರು. ಮೈಸೂರಮೊದಲಾದಲ್ಲಿ ಬಿಡಿಬಿಡಿಯಾಗಿ ಸಿಕ್ಕ ರತ್ನ ವೈಢೂರ್ಯಗಳಿಂದ ಶ್ರೀಮೂಲರಾಮರಿಗೆ ಆಭರಣಗಳು ಈ ಊರಲ್ಲಿ ಸಿದ್ಧವಾದುವು. ಬಳಿಕ ಮಠವು ಆಂಧ್ರವಿಜಯನಗರಕ್ಕೆ ಹೋಯಿತು. ಅಲ್ಲಿಯ ಗೋಪಾಲಕೃಷ್ಣನ ಗುಡಿಯಲ್ಲಿ ಬಿಡಾರವು ಬಿಡಲಾಯಿತು. ಅಲ್ಲಿಯ ರಾಜನು ಸಂಸ್ಥಾನಕ್ಕೆ ಗ್ರಾಮಭೂಮಿಗಳನ್ನನೇಕವಾಗಿ ದಾನವಾಗಿ ಕೊಟ್ಟನು. ಆ ಮೇಲೆ ದಕ್ಷಿಣದ ಯಾತ್ರೆಗಳನ್ನೆಲ್ಲ ಮುಗಿಸಿಕೊಂಡು ಸೇತುವಿಗೆ ಹೋಗಿ ರೌದ್ರಿ ಸಂವತ್ಸರದ ಕಾಲಕ್ಕೆ ಶ್ರೀಗಳು ಮೈಸೂರಿಗೆ ದಯಮಾಡಿಸಿದರು. ಅರಮನೆಯ ಕನ್ನಡಿಯ ಮನೆಯಲ್ಲಿ ಶ್ರೀಮೂಲರಾಮರ ಪೂಜೆಯು ನಡೆಯಿತು. ದೊಡ್ಡ ದೊಡ್ಡ ವಿದ್ವಾಂಸರುಗಳಿಗೆಲ್ಲ ತಾಮ್ರ

ಬೆಳ್ಳಿಗಳ ಮುದ್ರೆಗಳಿಂದ ಮುದ್ರಾಧಾರಣವಾಗುತ್ತಿದ್ದುದನ್ನು ಒಮ್ಮೆ ಅರಸನು ಕಂಡು ಬಂಗಾರದ ಮುದ್ರೆಗಳನ್ನು ಮಾಡಿಸಿ ತಾನೇ ನಿಂತು ವಿದ್ವಾಂಸರಿಗೆ ಶ್ರೀಗಳು ಮುದ್ರೆ ಕೊಡುವ ಸಂಭ್ರಮವನ್ನು ನೋಡಿ ಆನಂದಬಟ್ಟನು. ಆಗ ರತ್ನಹಾರಾದಿಗಳೂ ಮತ್ತೆ ರಾಜನಿಂದ ಸಮರ್ಪಣೆಮಾಡಲ್ಪಟ್ಟುವು. ಮೂರು ತಿಂಗಳುಗಳ ವರೆಗೆ ದೊಡ್ಡ ದೊಡ್ಡ ಧನವಂತರ ಮನೆಗಳಲ್ಲಿ ಸತ್ಕಾರವನ್ನು ಹೊಂದುತ್ತಲಿದ್ದು ಬಳಿಕ ಹೊಳೆನರಸಿಂಹಪುರದ ಮಾರ್ಗವಾಗಿ ಶ್ರೀಗಳು ಗುರ್ಲಹೊಸೂರಿಗೆ ಬಂದರು. ಅಲ್ಲಿ ಅವರಿಗೆ ದೇಹಾಯಾಸವಾಯಿತು. **ಪಾಚ್ಛಾಪುರದ ಶ್ರೀನಿವಾಸಾಚಾರ್ಯ**ರೆಂಬವರಿಗೆ ಆಶ್ರಮವು ಸಿಕ್ಕಿತು. ೨ಲ ಪದಾರ್ಥಗಳನ್ನವರಿಗೆ ಕೊಟ್ಟು ಪ್ರಣವೋಪದೇಶವನ್ನು ಮಾಡಿ ಶ್ರೀಗಳು ಅವರನ್ನು "**ಸತ್ಯಕಾಮ**"ರೆಂದು ಕರೆದರು. ಮುಂದೆ ರುಧಿರೋದ್ಗಾರಿಯ ಆಶ್ವೀನ ವದ್ಯ ೭ನೆಯ ದಿನ ಶ್ರೀಗಳು ನಾರಾಯಣ ಧ್ಯಾನಪರರಾದರು. ಅವರ ದೇಹವು **ಸಂತೇಬಿನ್ನೂ**ರಿಗೆ ಒಯ್ಯಲ್ಪಟ್ಟು ಶ್ರೀಸತ್ಯವರತೀರ್ಥರ ಮಠದಲ್ಲಿಯೇ ವೃಂದಾವನವನ್ನು ಕಟ್ಟಿಸಲಾಯಿತು. ಇವರು **ಪ್ರಲ್ಹಾದಾಂಶ**ರೆಂದು ಪ್ರಖ್ಯಾತವಾಗಿದೆ.

## ೩೨ ಶ್ರೀಸತ್ಯಕಾಮತೀರ್ಥರು

**ಪಟ್ಟ:**- ೭-೭-೧೭೪೫ನೇ ರುಧಿರೋದ್ಗಾರಿಯಿಂದ ೨೧-೧೦-೧೭೮೩ನೇ ಪ್ರಜೋತ್ಪತ್ತಿಯ ವರೆಗೆ

ಸಂತೇಬಿನ್ನೂರಲ್ಲಿ ಗುರುಗಳ ವೃಂದಾವನವನ್ನು ಕಟ್ಟಿಸಿ ಆರಾಧನೆಯನ್ನು ಉತ್ಸವದಿಂದ ಜರಗಿಸಿ ಹೊಸ ಶ್ರೀಗಳು ಸಂಚಾರ ಕ್ರಮದಿಂದ ಮೈಸೂರಿಗೆ ಪ್ರಾಪ್ತರಾದರು. ಮಠದ ಶಿಷ್ಯರಾಗಿದ್ದ ಅಲ್ಲಿಯ ವಿಷ್ಣುಪಾದಾಚಾರ್ಯರ ದ್ವಾರವಾಗಿ ರಾಜನಿಗೆ ತಮ್ಮ ಬರವನ್ನು ತಿಳುಹಿ ಪರಂಪರೆಯಂತೆ ಕನ್ನಡಿಯ ತೊಟ್ಟಿಯಲ್ಲಿ ಶ್ರೀಗಳು ಮಹಾಪೂಜೆಗೆ ಕುಳಿತರು. ರಾಜನು ಎಂದಿನಂತೆ ಸ್ವಾಮಿಗಳನ್ನು ಬಹು ಮನ್ನಿಸಿದನು. ಶ್ರೀಗಳು ರಾಜನಿಗೆ ಫಲಮಂತ್ರಾಕ್ಷತೆಗಳನ್ನಿತ್ತು

ಅನುಗ್ರಹಿಸಿದರು. ಬಳಿಕ ಶ್ರೀಗಳು ಪಟ್ಟಣದ ಹಳೆಯ ಅಗ್ರಹಾರ ದಲ್ಲಿಯ ಮಠಕ್ಕೆ ಹೋಗಿ ಎರಡೂ ಗುರುವೃಂದಾವನಗಳಿಗೆ ಮಹಾಭಿ ಷೇಕವನ್ನು ಮಾಡಿದರು. ಆ ದಿನ ಮಹಾರಾಜರಿಗೆ ಮಠದಿಂದ ಆಮಂತ್ರಣವು ಹೋಯಿತು. ಮಹಾರಾಜರು ಆನಂದದಿಂದ ಬಂದು ಆ ದಿನದ ಎಲ್ಲ ವೆಚ್ಚದ ಭಾರವನ್ನು ತಾವೇ ವಹಿಸಿಕೊಂಡರು. ೫ ಸಾವಿರ ಬ್ರಾಹ್ಮಣರಿಗೆ ಪಂಚಪಕ್ವಾನ್ನಗಳ ಭೋಜನವು ಆಯಿತು. ತೀರ್ಥದ ಕಾಲಕ್ಕೆ ರಾಜರು ಎರಡೂ ವೃಂದಾವನಗಳಿಗೆ ಒಂದೊಂದು ಮುತ್ತಿನ ಹಾರವನ್ನು ಕೊಟ್ಟರು. ನವರತ್ನ ಭೀಮಾಚಾರ್ಯರನ್ನು ಉಭಯ ಸ್ವಾಮಿಗಳ ವಂಶಜರೆಂದೂ ಪಾಚ್ಛಾಪುರದ ಆಚಾರ್ಯರನ್ನು ಶ್ರೀಪಾದಪುತ್ರರೆಂದೂ ಅರಸರು ಬಹುವಾಗಿ ಸತ್ಕರಿಸಿದರು.

ಬಳಿಕ ಹೋಗುವ ಕಾಲಕ್ಕೆ ಮಹಾರಾಜರು ಕೆಳಗಿನಂತೆ ಶ್ರೀಗಳನ್ನು ಬೇಡಿಕೊಂಡು ಅರಮನೆಗೆ ಹೋದರು:– "ಸಾಲವನ್ನು ತೀರಿಸಲೆಂದು ತಮ್ಮ ಗುರುಗಳು ತಮ್ಮ ಶಿಷ್ಯರಿಂದ ೨ ತಿಂಗಳುಗಳ ಸಂಬಳವನ್ನು ಕೊಡಿರೆಂದು ಒತ್ತಾಯಪಡಿಸಿದರು. ತಾವು ಮಾತ್ರ ಹಾಗೆ ಮಾಡಕೂಡದು. ಅರಮನೆಯ ವರ್ಷಾಶನವಿದೆ; ಹೊಳೆಯ ನರಸಿಂಹಪುರದ ಹಣವಿದೆ; ಮಹಾ ಸಮಾರಾಧನೆಯ ವೆಚ್ಚವೂ ಅರ ಮನೆಯಿಂದಲೇ ಬರುತ್ತಿದೆ; ಕಾರಣ ತಾವು ೬ ತಿಂಗಳು ಸಂಚಾರದ ಲ್ಲಿದ್ದು ಆರು ತಿಂಗಳು ನರಸಿಂಹಪುರದಲ್ಲಿಯೇ ವಾಸವಾಗಿರಬೇಕು. ಅಂದರೆ ಮಠದ ಶಿಷ್ಯರಿಗೆ ಮಠವು ಭಾರವಾಗಲಾರದು; ಮಠದ ಪದಾ ರ್ಥಗಳನ್ನೂ ಶಿಷ್ಯರನ್ನೂ ಸುರಕ್ಷಿತವಾಗಿಟ್ಟುಕೊಳ್ಳುವುದಾಗಬೇಕು"

ಬಳಿಕ **ಬಕ್ಷಿ ನರಸಪ್ಪನವರು,** ಮಂತ್ರಿ ಹಿರಣ್ಯಪ್ಪನವರ ಮಕ್ಕ ಳಾದ **ವ್ಯಾಸರಾಯ**ರು ಮುಂತಾದವರಲ್ಲಿ ಶ್ರೀಮೂಲರಾಮರ ಪೂಜೆ ಯನ್ನು ಮಾಡಿ ರಾಜನ ಅನುಮತಿಯಿಂದ ಶ್ರೀಗಳು ಹೊಳೆ ನರಸಿಂಹ ಪುರಕ್ಕೆ ದಯಮಾಡಿಸಿದರು. ಅಲ್ಲಿ ನಿಂತು ಕೆಲಕಾಲ ಕಳೆಯಿತು. ಮುಂದೆ ಶ್ರೀಗಳು ಸಂಚಾರಕ್ಕೆ ಹೊರಟರು. ಬೇಲೂರ ಕೇಶವದೇವರ ದರ್ಶನವನ್ನು ತೆಗೆದುಕೊಂಡು ಶ್ರೀಗಳು ಹೈದರಾಬಾದಿಗೆ ಬಂದರು. ಅಲ್ಲಿ ಚಂದ್ರಘಾಟದಲ್ಲಿ ಮಠದ ಬಿಡಾರಬಿಟ್ಟಿತು. ಅಲ್ಲಿದ್ದಾಗ ದೇವ

ರಿಗೆಂದು ಬಂಗಾರದ ಕೊಡ, ಬಂಗಾರದ ಸಂಪುಟ, ಬಂಗಾರದ ಪಂಚ ಪಾತ್ರೆ ಮುಂತಾದ ಹೊಸ ಉಪಕರಣಗಳನ್ನು ಸಿದ್ಧಮಾಡಿಸಿಕೊಳ್ಳ ಲಾಯಿತು.

ನಂತರ **ರಾಜಾ ಇಂದ್ರಜಿತ್ತರೂ ರಾಜಾರಾಯನವರೂ** ಶ್ರೀಗಳ ದರ್ಶನಕ್ಕೆಂದು ಬಂದು ತಮ್ಮಲ್ಲಿಗೆ ದಯಮಾಡಿಸುವುದೆಂದು ಬೇಡಿಕೊಂಡು ಆನೆಯಂಬಾರಿಯಲ್ಲಿ ಶ್ರೀಗಳನ್ನು ತಮ್ಮ ಮನೆಗೆ ಕರೆದೊಯ್ದರು. ದೇವತಾರ್ಚನೆಯ ಕಾಲಕ್ಕೆ ಕೆಂಪು ವಜ್ರಪದಕದಿಂದ ಸಹಿತವಾದ ಮುತ್ತಿನ ಕಂಠಿಯನ್ನೂ ೨ ಸಾವಿರ ರೂಪಾಯಿಗಳನ್ನೂ ಕೊಟ್ಟರು. **ಪೇಷಕಾರರಿಂದಲೂ ದಿವಾಣ ಸರಸಾಲಾರಜಂಗರಿಂದ** ಲೂ ಮರುದಿನ ಪಾದಪ್ರಕ್ಷಾಲನೆಯ ಕಾಲಕ್ಕೆ ಇವರು ಮಠಕ್ಕೆ ಕಾಣಿಕೆಯನ್ನು ಕೊಡಿಸಿದರು. ೨ ಕುದುರೆ ೧ ಆನೆ ೬ ಅರಬ ಸಿಪಾಯರು, ಈ ಮುಂತಾದ್ದರಿಂದ ತಾವೂ ಶ್ರೀಗಳನ್ನು ಸತ್ಕರಿಸಿದರು. ಆ ಮೇಲೆ ಶ್ರೀಗಳನ್ನು ಉಭಯ ರಾಯರೂ ಅವರ ಬಿಡಾರಕ್ಕೆ ತಂದುಬಿಟ್ಟರು.

ಇಲ್ಲಿಂದ ಶ್ರೀಪಾದರು ಶಿಕಂದರಾಬಾದಿಗೆ ಹೋದರು. ಅಲ್ಲಿ **ಬಂಡೇಲಿ ಶ್ರೀನಿವಾಸರಾಯ**ರ ಮನೆಯಲ್ಲಿ ಮೂಲರಾಮರ ಪೂಜೆಯಾಯಿತು. ರತ್ನಪದಕದ ಕಂಠಿಯು ಆಗ ರಾಯರಿಂದ ಅರ್ಪಿಸಲಾಯಿತು. ಶ್ರೀಗಳು ಫಲಮಂತ್ರಾಕ್ಷತೆಯನ್ನು ಕೊಟ್ಟು ರಾಯರಿಗೆ ಪುತ್ರೋತ್ಸವವಾಗಲೆಂದು ಹರಸಿದರು. ಆ ಮೇರೆಗೆ ರಾಯರಿಗೆ ಸ್ವಲ್ಪೇ ದಿನಗಳಲ್ಲಿ ಗಂಡುಕೂಸು ಜನನವಾಯಿತು. ಆ ಮೇಲೆ **ಮಹಬೂಬನಗರ**ದ ತಾಲೂಕದಾರ **ಹಣಮಂತರಾಯ**ರು ಮುಂತಾದವರು ೩ ತಿಂಗಳತನಕ ತಮ್ಮಲ್ಲಿ ಸಂಸ್ಥಾನವನ್ನು ಹಿಡಿದರು.

ಒಂದು ದಿನ ಹನುಮಂತರಾಯರು " ಶ್ರೀಮೂಲರಾಮರ ಮಹಿಮೆಯೇ ಇದ್ದುದು ಸತ್ಯವಾದರೆ ನನ್ನ ಹೆಂಡತಿಯ ಪಿಶಾಚ ಬಾಧೆಯನ್ನು ಬಿಡಿಸಿರಿ. ಅಂದರೆ ಒಂದು ವರ್ಷ ಪರ್ಯಂತವಾಗಿ ನಾನು ಸಂಸ್ಥಾನದ ಭಾರವನ್ನು ವಹಿಸುವೆ''ನೆಂದು ದೀನರಾಗಿ ಒತ್ತಿ ನುಡಿದರು. ' **ಈ ಮಾತಿಗೆ ಉತ್ತರವು ನಾಳೆಗೆ;**' ಎಂದು ಶ್ರೀಗಳು ಹೇಳಿದರು. ಉಚ್ಚಾಟನಾದಿಕ್ರಿಯೆಗಳಲ್ಲಿ ಅಭ್ಯಾಸವಿರದ್ದರಿಂದ ಶ್ರೀಪಾದರು

ಚಿಂತೆಗೊಳಗಾಗಿ ಶ್ರೀರಾಮರನ್ನೇ ಶರಣುಹೊಕ್ಕರು. ರಾತ್ರಿ ಕನಸಿನಲ್ಲಿ ದೇವರು:- "ಚಿಂತೆಬೇಡ; **ಚಿನ್ನಪಲ್ಲಿ ಶೇಷದಾಸರೆಂ**ಬವರಿದ್ದಾರೆ; ಅವರು ಅರ್ಜುನಾಂಶರು; ಅವರಿಗೆ ನಾನು ವೆಂಕಟೇಶ ರೂಪದಿಂದ ಉಚ್ಚಾಟನಾದಿ ಕ್ರಿಯೆಗಳನ್ನು ಕಲಿಸಿದ್ದೇನೆ. ಅವರಿಗೀಗ ಬಹಿಷ್ಕಾರವಿದೆ. ಆದರೂ ಅವರನ್ನು ಬರಮಾಡಿಕೊಂಡು ನಿನ್ನ ಕೆಲಸವನ್ನು ಪೂರೈಸಿಕೊ;" ಎಂದು ಶ್ರೀಗಳಿಗೆ ಹೇಳಿದಂತಾಯಿತು.

ಬೆಳಗಾಗುತ್ತಲೇ **ದಳವಾಯಿ ಗುರುಕೃಷ್ಣಾಚಾರ್ಯ**ರಿಗೆ **ಶೇಷದಾಸರ**ನ್ನು ಬಹು ಮರ್ಯಾದೆಯಿಂದ ಬೇಗನೇ ಮಠಕ್ಕೆ ಕರೆತರುವುದೆಂದು ಶ್ರೀಗಳು ಅಪ್ಪಣೆಯನ್ನು ಮಾಡಿದರು. ಆಚಾರ್ಯರು ಕುದುರೆಯ ಮೇಲಿಂದ ಬೇಗನೆ ಹೋಗಿ "ಹಿಂದಕ್ಕೆ ತಿಳಿಯದೇ ಆಗಿ ಹೋದ ಬಹಿಷ್ಕಾರಕ್ಕೆ ಹಳಹಳಿಸದೆ ಶ್ರೀಗಳ ಆಮಂತ್ರಣವನ್ನು ಮನ್ನಿಸಿ ಬೇಗನೇ ಮಠಕ್ಕೆ ಬರುವುದೆಂ"ದು ದಾಸರ ಮನವೊಲಿಸಿದರು. ದಾಸರು ೩೦ ಜನ ಶಿಷ್ಯರಿಂದ ಕೂಡಿಕೊಂಡು ಬಂದು ಶ್ರೀಗಳಿಗೆ ಸಾಷ್ಟಾಂಗವಾಗಿ ಬಾಗಿ ೧೦೦೦ ರೂಪಾಯಿಯ ಶಾಲನ್ನೂ ಮೇಣೆ ಛತ್ರಾದಿಗಳನ್ನೂ ಸಂಸ್ಥಾನಕ್ಕೆ ಅರ್ಪಿಸಿದರು. ಶ್ರೀಗಳು ಸಂತೋಷಬಟ್ಟರು. ದಾಸರು 'ಗುರುವಿಜಯ ವಿಠ್ಠಲ'ವೆಂಬ ಮುದ್ರಿಕೆಯಿಂದ ಮಾಡಿದ ಪದಗಳ ಗರ್ಭಿತವು ಈಗ ತಿಳಿಯಲಾಗಿದೆಯೆಂದು ಬಹಳವಾಗಿ ದಾಸರನ್ನು ಶ್ರೀಪಾದರು ಹೊಗಳಿದರು. ಮತ್ತೆ ಛತ್ರಚಾಮರಗಳೊಡನೆ ಸಂಚರಿಸಲು ಅವರಿಗೆ ಶ್ರೀಗಳಿಂದ ಆಜ್ಞೆಯು ದೊರಕಿತು. ಅಲ್ಲದೆ ಮಠದಿಂದ ಕರದೀಪ, ಕರವಸ್ತ್ರ, ತಲೆಕಟ್ಟು, ಈ ಪ್ರಕಾರದ ಮರ್ಯಾದೆಗಳು ಅವರಿಗೆ ಸಿಕ್ಕುವು. ಆ ದಿನ ದಾಸರ ಊಟವು ಶ್ರೀಗಳ ಪಂಙ್ತಿಯಲ್ಲಿಯೇ ಆಯಿತು. ಬಳಿಕ ರಹಸ್ಯವಾಗಿ ಸ್ವಪ್ನವೃತ್ತಾಂತವನ್ನು ಸ್ವಾಮಿಗಳು ದಾಸರಿಗೆ ತಿಳಿಹೇಳಿದರು. ಆಗ ದಾಸರು ಶ್ರೀಗಳ ಮಾತಿಗೆ ಒಪ್ಪಿದರು. 'ಹಣಮಂತರಾಯರ ಹೆಂಡತಿಯು ನನ್ನ ಪ್ರವಾಸದ ಸಂಗಡ ಏಳು ದಿನ ಬರಲಿ; ಪಿಶಾಚಬಾಧೆಯು ದೇವರ ದಯೆಯಿಂದ ದೂರವಾಗುವುದು;' ಎಂತಾಗಿ ನುಡಿದರು. ಹಣಮಂತರಾಯರಿಗೆ ಈ ಸುದ್ದಿಯನ್ನು ತಿಳಿಸಲಾಯಿತು. ಅವರು

ಸಂತೋಷದಿಂದ ಹೆಂಡತಿಯನ್ನು ದಾಸರ ಸಂಗಡ ಕಳುಹಿದರು. ದಾಸರು ತಮ್ಮೂರಿಗೆ ಹೋಗಿ ಪಿಶಾಚದ ಬಾಧೆಯ ಹೆಣ್ಣುಮಗಳನ್ನು ವೆಂಕಟೇಶದೇವರ ಮುಂದೆ ಕೂಡಿಸಿ ೭ ದಿನಗಳಲ್ಲಿಯೇ ಬಾಧೆಯನ್ನು ಬಿಡಿಸಿ ಆಕೆಯನ್ನು ಆಕೆಯೂರಿಗೆ ಕಳುಹಿಕೊಟ್ಟರು. ಇಷ್ಟಾಗುವ ತನಕ ಶ್ರೀಗಳು ಹಣಮಂತರಾಯರ ಮನೆಯಲ್ಲಿಯೇ ಇದ್ದರು. ರಾಯರು ಸಂತೋಷದಿಂದ ತಮ್ಮ ವಚನವನ್ನು ಪಾಲಿಸಿ ಕಡೆಗೆ ಶ್ರೀಗಳಿಗೆ ಅನೇಕ ವಿಧವಾದ ಕಾಣಿಕೆಗಳನ್ನರ್ಪಿಸಿ ಸಂಸ್ಥಾನವನ್ನು ಮಳಖೇಡದ ಕಡೆಗೆ ಕಳುಹಿಕೊಟ್ಟರು.

ಮಳಖೇಡದಲ್ಲಿ **ಟೀಕಾರಾಯರಿ**ಗೆ ಹಸ್ತೋದಕಾದಿಗಳು ಆದವು. ಬ್ರಾಹ್ಮಣರಿಗೆ ಅನ್ನಸಂತರ್ಪಣೆಯಾಯಿತು. ಆ ಮೇಲೆ ರಾಯಚೂರ ಮುಂತಾದವುಗಳ ಮಾರ್ಗವಾಗಿ ಮಠವು ಕೃಷ್ಣಾತೀರದ **ಅತಕೂರೆಂಬ**ಲ್ಲಿಗೆ ಬಂದಿತು. ಅಲ್ಲಿ ಕೆಲ ದಿನವಿರುತ್ತಿರಲು ಶ್ರೀಪಾದರಿಗೆ ದೇಹಾಯಾಸವಾಯಿತು. ಶ್ರೀಸತ್ಯಪರಾಯಣರ ಕಾಲದಿಂದ ಸಂಸ್ಥಾನದ ಪಂಡಿತರಾಗಿರುತ್ತಿದ್ದ **ಹತ್ತಿಮತ್ತೂರ ನರಸಿಂಹಾಚಾರ್ಯ**ರಿಗೆ ಆಶ್ರಮನ್ನಿತ್ತು ಶ್ರೀಗಳು ಅವರನ್ನು **ಸತ್ಯೇಷ್ಟ**ರೆಂದು ಕರೆದರು. ಪ್ರಣವೋಪದೇಶಾದಿಗಳು ಯಥಾಪ್ರಕಾರವಾಗಿ ಸಾಗಿದುವು. ಆ ದಿನವೇ ಅಂದರೆ ಪ್ರಜೋತ್ಪತ್ತಿ ಸಂವತ್ಸರದ ಪುಷ್ಯವದ್ಯ ೬ ದಿನ ಶ್ರೀಗಳು ಹರಿಧ್ಯಾನತತ್ಪರರಾದರು. ಇವರು **ಸತ್ಯಾಧಿರಾಜರ ಅಂಶದವ**ರೆಂದು ಜನರಲ್ಲಿ ನಂಬಿಗೆಯ ನುಡಿಗಳಿವೆ.

## ೩೩ ಶ್ರೀಸತ್ಯೇಷ್ಟತೀರ್ಥರು

ಪಟ್ಟ: ೨೧-೧೦ ೧೭೯೩ನೇ ಪ್ರಜೋತ್ಪತ್ತಿಯಿಂದ ೧೧-೬-೧೭೯೪ನೇ ಅಂಗಿರಾದ ವರಿಗೆ

ಪಟ್ಟವು ಹೊರಟ ಬಳಿಕ ಗುರುಗಳ ವೃಂದಾವನನ್ನು ಕಟ್ಟಿಸಿ ಆರಾಧನೆಯನ್ನು **ಶ್ರೀ ಸತ್ಯೇಷ್ಟ**ರು ಚನ್ನಾಗಿ ಮಾಡಿದರು. ಮುಪ್ಪಿನವರಾದುದರಿಂದ ಅವರು ಸಂಚಾರಕ್ಕೆಂದು ಹೊರಬೀಳಲಿಲ್ಲ. ಗುರುಗಳ

ವೃಂದಾವನದೆಡೆಯಲ್ಲಿಯೇ ವಾಸವಾಗಿದ್ದರು. ಈಗವರು ಉಗ್ರವಾದ ತಪವನ್ನೇ ಆಚರಿಸುತ್ತಿದ್ದರೆಂಬದಕ್ಕೆ ಸಂದೇಹವಿಲ್ಲ. ಪಾದುಕೆಗಳನ್ನು ಕೂಡ ಅವರು ತೊರೆದಿದ್ದರು.

ಈ ಕಾಲದಲ್ಲಿ ಸಂಸ್ಥಾನದ ಆಡಳಿತವು **ಪಾಚ್ಛಾಪುರದ ಮಧ್ವರಾಯಾಚಾರ್ಯ**ರ ಕಡೆಗಿತ್ತು. ಅವರು ಮನಬಂದಂತೆ ಕೆಲಸಗಳನ್ನು ನಡೆಸಿದ್ದರು. ಇದು ಇತರರಿಗೆ ಸರಿಬೀಳಲಿಲ್ಲ. ಶಾನುಭಾಗ ಶಾಮಾಚಾರ್ಯರೂ ಕಿನ್ಹಾಳ ಲಕ್ಷ್ಮೀಕಾಂತಾಚಾರ್ಯರೂ ನಿಜಾಮ ಸರಕಾರಕ್ಕೆ ಅರ್ಜಿಯನ್ನು ಹಾಕಿಕೊಂಡು ಪಾಚ್ಛಾಪುರದಾಚಾರ್ಯರನ್ನು ಮಠದಿಂದ ಹೊರಕ್ಕೆ ತಳ್ಳಿಸಿದರು.

ಮಠದಲ್ಲಿಯ ಕೆಲವು ಪ್ರಮುಖರ ಸಲಹೆಯನ್ನು ತೆಗೆದುಕೊಳ್ಳುತ್ತ ಶ್ರೀಗಳು ಸಂಸ್ಥಾನದ ಆಡಳಿತವನ್ನು ಸಂಪ್ರದಾಯದಂತೆ ನಡೆಸತೊಡಗಿದರು.

ಶ್ರೀಗಳು ಮುದುಕರಾದಾಗ್ಯೂ ಉತ್ಸವಾದಿಗಳಲ್ಲಿ ಅಲಂಕಾರಾದಿಗಳನ್ನು ಅತಿ ಉತ್ಸಾಹದಿಂದ ಮಾಡುತ್ತಲಿದ್ದರು. ತಮ್ಮ ಪೂರ್ವಾಶ್ರಮದಲ್ಲಿ ಸಂಪಾದಿಸಿದ ಹಣದಿಂದ ಒಂದು ಬಂಗಾರದ ಬಟ್ಟಲವನ್ನು ಮಾಡಿಸಿ ಅದರ ಮೇಲೆ ತಮ್ಮ ತಾಯಿಯ ಹೆಸರನ್ನು ಕೆತ್ತಿಸಿ ಆ ಬಟ್ಟಲದಿಂದಲೇ ಸ್ವಾದೋದಕಾಭಿಷೇಕವನ್ನು ಶ್ರೀಗಳು ಮಾಡುತ್ತಿದ್ದರು.

ಪಟ್ಟವು ಬಂದಾಗಿನಿಂದಲೇ ಶ್ರೀಪಾದರ ವೈರಾಗ್ಯವು ಹೇಳಿಕೊಳ್ಳುವಂತಿತ್ತು. ಮಿತಾಹಾರದಿಂದ ಕೃಷ್ಣಾಜಿನದ ಮೇಲೆ ಮಾತ್ರ ಮಲಗುತ್ತ ಸದಾ ಜಪ ಪಾರಾಯಣಾದಿಗಳಲ್ಲಿ ಅವರು ಕಾಲವನ್ನು ಕಳೆಯುತ್ತಿದ್ದರು. ಮಠದ ವ್ಯವಸ್ಥೆಯ ಕಡೆಗೆ ಅವರು ನೋಡುತ್ತಲೇ ಇರಲಿಲ್ಲ. ಎಲ್ಲವನ್ನೂ ಮಠದವರ ಮೇಲೆಯೇ ಬಿಟ್ಟುಕೊಟ್ಟಿದ್ದರು. ಆಗ ಮಠದಲ್ಲಿ **ವರದ ಶ್ರೀನಿವಾಸಾಚಾರ್ಯ**ರೆಂಬವರಿದ್ದರು. ಅವರು ಶ್ರೀಗಳ ಬಳಿಯಲ್ಲಿ ಋಗರ್ಥದ ಮೇಲೆ ಉಪನ್ಯಾಸಾದಿಗಳನ್ನು ಹೇಳುತ್ತಿದ್ದರು. ಇದನ್ನು ಕೇಳುವುದರಲ್ಲಿ ಶ್ರೀಗಳಿಗೆ ಆಸಕ್ತಿಯು ಹೆಚ್ಚು. ಇದಲ್ಲದೆ ಬ್ರಹ್ಮಸೂತ್ರಗಳಿಗೆ ವಿದ್ವಾಂಸರುಗಳಿಂದ ರಾಮಪರಾರ್ಥವನ್ನು ಮಾಡಿಸುತ್ತ ಕೂಡುವಾಗಲಂತೂ ಶ್ರೀಪಾದರು ಹೊರಗಿನ

ದನ್ನು ಮರೆದೇ ಕುಳ್ಳಿರುತ್ತಿದ್ದರು. ೫೬೪ ಸೂತ್ರಗಳು ಆಗ ಮುಗಿದಿದ್ದುವು.

ಆದರೆ ಇಷ್ಟರಲ್ಲಿ ಶ್ರೀಗಳಿಗೆ ದೇಹಾಯಾಸವಾಯಿತು. ಆಗ ಆಶ್ರಮಕ್ಕಾಗಿ ಬೇರೆ ಬೇರೆಯವರು ಬಗೆಬಗೆಯಾಗಿ ಅಭಿಪ್ರಾಯವನ್ನಿತ್ತರು. **ಕಂಚಿ ಸುಬ್ಬರಾಯರು ನವರತ್ನ ಸತ್ಯಾಧಿರಾಜಾಚಾರ್ಯ**ರಿಗೆ ಆಶ್ರಮ ಕೊಡುವುದೆಂದರು. ಶಾನುಭಾಗ ಶಾಮಾಚಾರ್ಯರು **ಬ್ರಹ್ಮಾಂಡ ವಿಷ್ಣುಪಾದಾಚಾರ್ಯ**ರೇ ಶ್ರೀಗಳಾಗಬೆಂದು ತಿಳುಹಿದರು. ಸತ್ಯಾಧಿರಾಜಾಚಾರ್ಯರು ಸ್ವಾಮಿಗಳ ದರ್ಶನಕ್ಕೆ ಬರಬೇಂದಾಗ ಸರ್ಪವು ಅವರನ್ನು ಅಡ್ಡಗಟ್ಟಿಬಿಟ್ಟಿತು. ವಿಷ್ಣುಪಾದಾಚಾರ್ಯರಿಗೆ ದೇವರು ಅನುಜ್ಞೆಯನ್ನೇ ಕೊಡಲಿಲ್ಲ. ಕಡೆಗೆ ಶ್ರೀವೇದವ್ಯಾಸರು **ವಾಯಿ ಶ್ರೀನಿವಾಸಾಚಾರ್ಯ**ರ ಆಶ್ರಮಕ್ಕೆ ಅಪ್ಪಣೆಯನ್ನು ಕೊಟ್ಟಂತೆ ಕನಸಾಯಿತು. ಕೂಡಲೇ ಅವರನ್ನು ಕರೆಕಳುಹಲಾಯಿತು. ಆಂಗಿರಸ ಸಂವತ್ಸರದ ಭಾದ್ರಪದ ಶುದ್ಧ ೧೧ನೇ ದಿನ ವಾಯಿ ಆಚಾರ್ಯರಿಗೆ ಪ್ರಣವೋಪದೇಶಾದಿಗಳನ್ನು ಮಾಡಿ ಶ್ರೀಗಳು ಅವರನ್ನು **ಸತ್ಯಪರಾಕ್ರಮ**ತೀರ್ಥರೆಂದು ಕರೆದರು. ಅದೇ ದಿವಸವೇ ಶ್ರೀಸತ್ಯೇಷ್ಟರು ನಾರಾಯಣಧ್ಯಾನಪರರಾದರು. ಇವರು **ವಶಿಷ್ಠಾಂಶ**ರೆಂದೆನ್ನುತ್ತಾರೆ.

## ೩೪ ಶ್ರೀ ಸತ್ಯಪರಾಕ್ರಮತೀರ್ಥರು



**ಪಟ್ಟ: ೧೧-೬-೧೭೯೪ನೇ ಆಂಗಿರಸದಿಂದ ೮-೭-೧೮೦೧ನೇ ಪ್ರಮಾಥಿಯ ವರೆಗೆ**

ಇವರ ಪಾಂಡಿತ್ಯಕ್ಕೆ ಸರಿಯಾದವರು ಯಾರು ಇದ್ದಿಲ್ಲವೆನ್ನಬಹುದಾಗಿತ್ತು. ಆದ್ದರಿಂದಲೇ 'ಸತ್ಯಪರಾಕ್ರಮ'ರೆಂಬ ಹೆಸರು ಅವರಿಗೆ ಸಾರ್ಥಕವಾಗಿತ್ತು. ಇವರಿಗೆ ಪಟ್ಟವಾಗುವಾಗ **ಪಾಚ್ಛಾಪುರದ ಆಚಾರ್ಯ**ರಿಂದ ತುಸು ತೊಂದರೆಯು ಬಂದಿದ್ದಿತು. ಆದರೆ ಇವರ ಅಸದೃಶವಾಗಿದ್ದ ಪಾಂಡಿತ್ಯವು ನಿಜಾಮ ಸರಕಾರದ ಬೆಂಬಲವನ್ನು ಪಡೆದು ಬಂದ ತೊಂದರೆಯನ್ನು ಚದರಿಸಿ ಬಿಟ್ಟಿತು. ಸಂಸ್ಥಾನವಾದ

ಮೇಲೆ ಗುರುಗಳ ವೃಂದಾವನವಾಗಿ ಪೊಸ ಶ್ರೀಪಾದರು ಆರಾಧನೆಯನ್ನು ಉತ್ಸವದಿಂದ ಮಾಡಿದರು. 'ಅನ್ನಸಂತರ್ಪಣೆಯಲ್ಲಿ ಉತ್ತರಾದಿ ಮಠವು ಮೇಲು' ಎಂದೆಂಬ ಪರಂಪರೆಯ ಹೆಸರನ್ನು ಇವರಾವರೂ ಚೆನ್ನಾಗಿ ಕಾಯ್ದುಕೊಂಡರು.

ಇಲ್ಲಿಂದ ಮುಂದೆ ಮಠವು ರಾಯಚೂರ ಕಡೆಗೆ ಬಂದಿತು. ಅಲ್ಲಿಯ ಶಿಷ್ಯರು ಇವರನ್ನು ಬಹು ಮನ್ನಿಸಿದರು. ಲೌಕಿಕ ವೈದಿಕಗಳೆರಡರಲ್ಲಿಯೂ ಇದ್ದ ಶ್ರೀಗಳ ನೈಪುಣ್ಯಕ್ಕೆ ಜನರು ಬೆರಗಾಗಿ ಬೊಟ್ಟುಕಚ್ಚಿದರು. ಹೀಗೆಯೇ ಸಂಸ್ಥಾನವು ಸಂಚಾರಕ್ರಮದಿಂದ ಧಾರವಾಡ ಪ್ರಾಂತಕ್ಕೆ ಬಂದಿತು.

ಇಲ್ಲಿಯಂತೂ ಅನೇಕ ವಾದಿಗಳು ಶ್ರೀಗಳನ್ನು ಎದುರಿಸಿದರು. ಆದರೆ ಬಹುಕಾಲ ಎದುರಿನಲ್ಲಿ ನಿಲ್ಲಲಿಕ್ಕೆ ಯಾರಿಗೂ ಶಕ್ಯವಾಗಲಿಲ್ಲ. ಶ್ರೀಗಳ ಪೂರ್ವಾಶ್ರಮದ ತಮ್ಮಂದಿರಾದ **ವಾಯಿ ವಾಸುದೇವಾಚಾರ್ಯ**ರಿಂದಲೇ ಎಷ್ಟೋ ಕಾರ್ಯ ಭಾಗವು ನೆರವೇರುತ್ತಿತ್ತು. ಮೀರಿ ಬಂದಾಗ ಶ್ರೀಗಳು ಇದ್ದೇ ಇದ್ದರು. ಪಾಠಪ್ರವಚನಗಳನ್ನಂತೂ ಶ್ರೀಗಳು ಹೇಳಲಿಕ್ಕೆ ಯಾವಾಗಲೂ ಹುರುಪುಗೊಂಡಿರುತ್ತಿದ್ದರು. **ಕೊರ್ಲಹಳ್ಳಿ ಬೋಧರಾಯಾಚಾರ್ಯರು, ಕನಕಬಂಡಿ ಕೃಷ್ಣಾಚಾರ್ಯರು, ಹಾನಗಲ್ಲ ಭೀಮಾಚಾರ್ಯರು,** ಶ್ರೀಗಳ ಪೂರ್ವಾಶ್ರಮದ ಮಕ್ಕಳಾದ **ಭೀಮಬಾಳಾಚಾರ್ಯರು, ವಿಠೋಬಾಚಾರ್ಯರು, ಕೃಷ್ಣಾಚಾರ್ಯರು** ಮುಂತಾದ ಜನರು ಶ್ರೀಗಳ ಬಳಿಯಲ್ಲಿ ನ್ಯಾಯ, ವೇದಾಂತ, ಮೀಮಾಂಸಾದಿ ಅನೇಕ ಶಾಸ್ತ್ರಗಳನ್ನು ಓದುತ್ತಿದ್ದರು. ಶ್ರೀಗಳ ಪ್ರವಚನಗಳಿಗಂತೂ ಲೆಕ್ಕವೇ ಇರಲಿಲ್ಲ. ಹೋದ ಹೋದಲ್ಲಿ ಶಿಷ್ಯರು ಇವರ ವಾಗ್ಲಹರಿಯಲ್ಲಿ ಆನಂದದಿಂದ ಮುಳುಮುಳುಗಿ ಏಳುತ್ತಿದ್ದರು. ಈ ಪ್ರವಚನ ಪಾಠಾದಿಗಳಿಗೆ ತಡೆಯುಂಟಾಗಬಾರದೆಂದು ಶ್ರೀಗಳು ಲೌಕಿಕ ವ್ಯವಹಾರವನ್ನು ಕಡಿಮೆ ಮಾಡಿ ಇಡೀ ಸಂಸ್ಥಾನದ ಹೊಲದ ಉತ್ಪನ್ನವನ್ನು ಪಾನುಭಾಗ ಶಾಮಾಚಾರ್ಯರೆಂಬವರಿಗೆ ೩೫ ಸಾವಿರ ರೂಪಾಯಿಗಳಿಗೆ ಗುತ್ತಿಗೆಯನ್ನು ಕೊಟ್ಟಿದ್ದರು.

ಶ್ರೀಗಳು ಧಾರವಾಡದಿಂದ ಅಲ್ಲಲ್ಲಿ ಸಂಚರಿಸುತ್ತ ಹೈದರಾಬಾದ ನಗರಕ್ಕೆ ಒಮ್ಮೆ ಪ್ರಾಪ್ತರಾದರು. ಅಲ್ಲಿ ಸಂಸ್ಥಾನವು ಆರು ತಿಂಗಳು ಗಳ ವರೆಗಿದ್ದಿತು. **ರಾಜಾ ಶಿವರಾಜ ಬಹಾದ್ದೂರ, ಕಾರವಾನ ಶ್ರೀನಿವಾಸರಾವ** ಈ ಮುಂತಾದವರ ಮುಖಾಂತರವಾಗಿ ಸರ ಸಾಲರ ಜಂಗ ನವಾಬರಿಂದ ಸಾವೀ ಕುಂಬಾರಿಯೆಂಬ ಹಳ್ಳಿಯನ್ನು ತಿರುಗಿ ಪಡೆದರು.

ಇಲ್ಲಿಂದ ಸಂಸ್ಥಾನವು ಶಿಕಂದರಾಬಾದಿಗೆ ಹೋಗಿ ಅಲ್ಲಿ ಒಂಟೀಲಿ ಶ್ರೀನಿವಾಸರಾವ ಮುಂತಾದವರಿಂದ ಆದರಿಸಲ್ಪಟ್ಟು ಮುಂದೆ ಪುಣೆಯ ಪಟ್ಟಣಕ್ಕೆ ಸಾಗಿತು. ಬುಧವಾರಪೇಟೆಯಲ್ಲಿಯ ಖಾಸಗಿಯವರ ವಾಡೆ ಯಲ್ಲಿಯೇ ಮಠದ ಬಿಡಾರವಾಯಿತು. ಆಗತಾನೆ ಧಾತು, ಈಶ್ವರ ಸಂವ ತ್ಸರಗಳ ಕ್ಷಾಮಬಾಧೆಯಿದ್ದಿತು. ಆದರೂ **ವಕೀಲ ವೆಂಕಟರಾವ, ಗೋಡಬೋಲೆ ತಾತ್ಯಾಸಾಹೇಬರು, ಕರ್ಣಾಡಕರ** ಮುಂತಾದವರು ಶ್ರೀಗಳನ್ನು ಬಲು ಸತ್ಕರಿಸಿದರು. ಇಲ್ಲಿದ್ದಾಗ ಮೈಸೂರ ಸಂಸ್ಥಾನದ ಧರ್ಮಾಧಿಕಾರಿಗಳಾದ **ರಾಮಗಿರಿ ಶಾಮಾಚಾರ್ಯ**ರೆಂಬವರು ಶ್ರೀಗಳ ದರ್ಶನಕ್ಕೆಂದು ದಯಮಾಡಿಸಿದರು. ಆಗ ವಿವಾದಕ್ಕಾಗಿ ಸಭೆಗೂಡಿಸುವುದೆಂದು ವಾಯಿ ವಾಸುದೇವಾಚಾರ್ಯರು ಶ್ರೀಗಳಲ್ಲಿ ಅರಿಕೆಮಾಡಿಕೊಂಡರು. **ಜನಾರ್ದನಾಚಾರ್ಯರು, ಭಿಕ್ಕಾಚಾರ್ಯರು, ರಾಮಶಾಸ್ತ್ರಿಗಳು, ದಾದಾ ದತ್ತೋಪಂತ ಮಹಾಮಹೋಪಾಧ್ಯಾಯ** ಮುಂತಾದ ಘನವಿದ್ವಾಂಸರು ಸಭೆಯಲ್ಲಿ ಸೇರಿದರು. ಸಭೆಯು ಮುರಲೀಧರನ ಗುಡಿಯಲ್ಲಿ ನೆರೆಯಿತು. ಹದಿನಾಲ್ಕು ದಿನ ಗಳ ವರೆಗೆ ವಾಸುದೇವಾಚಾರ್ಯರು, ಶಾಮಾಚಾರ್ಯರು ಇವರಿಬ್ಬರೂ ಅಸ್ಖಲಿತವಾಗಿ ವಿವಾದವನ್ನು ಮಾಡುತ್ತಲಿದ್ದರು. ಇಬ್ಬರಲ್ಲಿ ಆರು ಮೇಲೆಂಬುದನ್ನು ತಿಳಿಯಲು ಸಾಧ್ಯವಾಗುವಂತಿರಲಿಲ್ಲ. ಆಗ ತೋರಿಸಲಾದ ಶ್ರೀಗಳ ಪಾಂಡಿತ್ಯವು ಮಾತ್ರ ಅವರಿಬ್ಬರನ್ನು ಮೀರಿ ದ್ದಾಗಿದ್ದಿತು. ಹದಿನಾಲ್ಕು ದಿನಗಳಲ್ಲಿ ದ್ವೈತ ತತ್ವಗಳ ಅರಿವು ಪುಣೆಯವರಿಗೆ ಚೆನ್ನಾಗಿ ಆದಂತಾಯಿತು. ಎಲ್ಲ ಪಂಡಿತರಿಗೂ ಮಠ ದಿಂದ ಬಹುಮಾನವು ದೊರೆಯಿತು. ಆ ಮೇಲೆ ವೆಂಕಟರಾವ ಮೊದ

ಲಾದವರಿಗೆ ಮಂತ್ರಾಕ್ಷತೆ ಮುದ್ರಾಧಾರಣಾದಿಗಳು ಕೊಡಲ್ಪಟ್ಟು ಮಠವು ಮತ್ತೆ ಸಂಚಾರಕ್ಕೆ ಹೊರಟಿತು.

ನಡುವೆ ಒಮ್ಮೆ ಮಠದ ಮುಖ್ಯಾಧಿಕಾರದ ವಿಷಯದಲ್ಲಿ ವಾಯಿ ವಾಸುದೇವಾಚಾರ್ಯರು, ಶ್ರೀಪಾದಪುತ್ರರಾದ ಭೀಮ ಬಾಳಾಚಾರ್ಯರು ಇವರ ನಡುವೆ ಕಲಹವು ನಡೆಯಿತು. ಶ್ರೀಪಾದಪುತ್ರರು ಅಧಿಕಾರವನ್ನು ತಮಗೇ ಕೊಡಿಸಬೇಕೆಂದು ಹಟತೊಟ್ಟರು. 'ಶ್ರೀಸತ್ಯಸಂಕಲ್ಪ ಗುರುರಾಜ' ಎಂಬ ಮೊಹರಿನುಂಗುರದಿಂದ ವಾಸುದೇವಾಚಾರ್ಯರು ಎಲ್ಲ ಸಂಸ್ಥಾನದ ವ್ಯವಹಾರಗಳನ್ನು ನಡೆಸಿದ್ದರು. ಅದನ್ನು ಕೊಟ್ಟುಬಿಡಲಿಕ್ಕೆ ಅವರು ಒಪ್ಪಲೊಲ್ಲರಾದರು. ಆಗ ಶಾನುಭಾಗ ಶಾಮಾಚಾರ್ಯರು ಕಲಹವನ್ನು ಕೊನೆಗಾಣಿಸಲಿಕ್ಕೆಂದು ಕರೆತರಲ್ಪಟ್ಟರು. ಅವರಿಗೂ ಸಾಧ್ಯವಾಗಲಿಲ್ಲ. ಕಡೆಗೆ 'ದಿಗ್ವಿಜಯ ರಾಮೋವಿಜಯತೆ, ಉತ್ತರಾದಿಮಠ' ಎಂಬುದಾಗಿ ಹೊಸದೊಂದು ಉಂಗುರವಲ್ಲಿ ಕೆತ್ತಿಸಿ ಮುಖ್ಯಾಧಿಕಾರವು ಭೀಮಬಾಳಾಚಾರ್ಯರಿಗೆ ಒಪ್ಪಿಸಲಾಯಿತು. ವಾಸುದೇವಾಚಾರ್ಯರು ಆ ಮೇಲೆ ಸಾಕಷ್ಟು ಹಣವನ್ನು ಪಡೆದು ಸಮಾಧಾನಬಟ್ಟರು.

ಇದಾದ ಮೇಲೆ ಸಂಸ್ಥಾನವು ಗೋದಾವರಿ ತೀರಕ್ಕೆ ಹೋಯಿತು. ಅಲ್ಲಿ ಬಹು ಜನ ಸ್ಮಾರ್ತರು ಮುದ್ರಾಧಾರಣಾದಿಗಳನ್ನು ತಕ್ಕೊಂಡರು. ಇಲ್ಲಿಂದ ಸೊನ್ನಿಯೆಂಬಲ್ಲಿಗೆ ಮಠವು ಹೊರಟಿತು. ಅಲ್ಲಿಯ ದೊಡ್ಡ ಗೃಹಸ್ಥರಾದ **ಭೀಮರಾಯರು** ಅಲ್ಲೊಂದು ಪ್ರಾಣದೇವರ ಪ್ರತಿಷ್ಠೆಯನ್ನು ಮಾಡಿಸಬೇಕೆಂದು ಶ್ರೀಗಳಿಗೆ ಅರಿಕೆ ಮಾಡಿಕೊಂಡರು. ಸಂಸ್ಥಾನದ ಪುರೋಹಿತರಾದ ಬ್ರಹ್ಮಾಂಡ ವಿಷ್ಣುಪಾದಾಚಾರ್ಯರ ಮಕ್ಕಳಾದ ಕೃಷ್ಣಮೂರ್ತ್ಯಾಚಾರ್ಯರಿಂದ ಪ್ರತಿಷ್ಠಾಪನೆಯನ್ನು ಮಾಡಿಸುತ್ತೇವೆಂದು ಶ್ರೀಗಳು ಹೇಳಿದರು. ಆ ಪ್ರಕಾರಕ್ಕೆ ತಂತ್ರಸಾರೋಕ್ತವಾಗಿ ಪ್ರತಿಷ್ಠಾಪನೆಯ ಕಾರ್ಯವು ಉತ್ಸವದಿಂದ ಮುಗಿಯಿತು.

ಮುಂದೆ ತುಳಜಾಪುರದ ಕಡೆಗೆ ಮಠವು ಹೋದಾಗ ಮಠದ ಬಹು ಜನರು ಮಾರಿಕಾ ಬೇನೆಯಿಂದ ಮರಣವನ್ನು ಹೊಂದಿದರು. ಆದರೆ ಎದೆಬಿಡದೆ ಶ್ರೀಗಳು ಹಾಗೆಯೇ ಇಂದೂರಿಗೆ ಸಾಗಿದರು. ಈ

ಊರಲ್ಲಿ ಮಠದಲ್ಲಿಯ ಜನಗಳು ಅನೇಕವಾಗಿ ಆಕ್ಷೇಪಣೆಗಳನ್ನು ತೆಗೆದು ಶ್ರೀಗಳಿಗೆ ತೊಂದರೆಕೊಟ್ಟರು. ಆದರೆ ಸ್ವಾಮಿಗಳು ಶಾಂತತೆಯಿಂದ ಎಲ್ಲವನ್ನೂ ನಯಗೊಳಿಸಿದರು.

ಸಾಗಸಾಗುತ್ತ ಸಂಸ್ಥಾನವು ಬಲಕುಂದ್ರಿಯೆಂಬಲ್ಲಿಗೆ ಬಂದಿತು. ಇಲ್ಲಿ ಶ್ರೀಗಳಿಗೆ ದೇಹಾಯಾಸವಾಯಿತು. ಆಗಲೀ ಶ್ರೀಗಳ ಪೂರ್ವಾಶ್ರಮದ ಪ್ರಿಯ ಶಿಷ್ಯರಾಗಿದ್ದ **ಕೆಂಭಾವಿಹಳ್ಳಿ ಬೋಧರಾಯಾಚಾರ್ಯರಿಗೆ** ಪ್ರಣವೋಪದೇಶವಾಯಿತು. ಆಶ್ರಮವು ಕೊಡಲ್ಪಟ್ಟು **'ಸತ್ಯವೀರ'**ರೆಂದು ಅವರನ್ನು ಕರೆಯಲಾಯಿತು. ಬಳಿಕ ಅದೇ ದಿನವೇ ತಂದರೆ ೧೮೦೧ ಪ್ರಮಾಥಿಯ ಆಶ್ವಿನ ಶುದ್ಧ ೮ಕ್ಕೆ ಶ್ರೀಗಳು ಹರಿಧ್ಯಾನರತರಾದರು. ಶ್ರೀಗಳವರ ವೃಂದಾವನವು **ಕೃಷ್ಣಾತೀರದ ಚಿತ್ತಾಪುರದಲ್ಲಿ** ಆಯಿತು. ಇವರು **ಶೇಷಾಂಶ**ರೆಂದು ಹೇಳಿಕೆಯುಂಟು.

## ೩೫ ಶ್ರೀ ಸತ್ಯವೀರತೀರ್ಥರು



**ಪಟ್ಟ:— ೮-೭-೧೮೦೧ನೇ ಪ್ರಮಾಥಿಯಿಂದ ೧೦-೮-೧೮೦೮ನೇ ಸ್ವಯುವ ವರೆಗೆ**

ಪಟ್ಟವೇರಿದ ಮೇಲೆ **ಚಿತ್ತಾಪುರ**ದಲ್ಲಿ ಗುರುಗಳ ವೃಂದಾವನವನ್ನು ಕಟ್ಟಿಸಿ ಮುಗಿಸಿ ಮಹಾಸಮಾರಾಧನೆಯನ್ನು ಅತಿ ಉತ್ಸವದಿಂದ ಹೊಸ ಶ್ರೀಗಳು ಜರುಗಿಸಿದರು. ತರುವಾಯ **ಜಡ್ಜಿ ತಿರುಮಲರಾಯರು, ಬೆಳಗಾವಿ ಹುಚ್ಚರಾಯ ವಕೀಲ**ರು ಇವರುಗಳನ್ನು ಕರೆಯಿಸಿಕೊಂಡು ಶ್ರೀಗಳು ಮಠದೊಳಗಿನ ಕಲಹಗಳನ್ನು ಶಾಂತಪಡಿಸಿದರು.

ಬಳಿಕ ಸಂಸ್ಥಾನವು ಧಾರವಾಡದ ಕಡೆಗೆ ಬರಲು ಹೊರಟಿತು. ಮಾರ್ಗದಲ್ಲಿ ಶ್ರೀಗಳನ್ನು ನೋಡಿ ಆನಂದದಿಂದ ಸತ್ಕರಿಸದವರು ಇದ್ದಿಲ್ಲವೆಂದರೂ ಸಲ್ಲುವುದು. ಯಾಕಂದರೆ ಪೂರ್ವಾಶ್ರಮದಿಂದಲೂ ಇವರು ಸಕಲರಿಗೂ ಪರಿಚಿತರಾಗಿದ್ದವರಾಗಿದ್ದರು. ಅಲ್ಲದೆ ಇವರು ವ್ಯಾಕರಣ, ಅಲಂಕಾರ, ಕಾವ್ಯ, ವೇದಾಂತಾದಿಗಳಲ್ಲಿ ನಿಪುಣತೆಯನ್ನು

ಹೊಂದಿದ್ದವರಾಗಿದ್ದುದರಿಂದ ಇವರ ವಾಕ್ಚಾತುರ್ಯಕ್ಕೂ ವಾಗ್ಲಹರಿಗೂ ಜನರು ಬಾಯಿಬಿಟ್ಟುಕೊಂಡು ಕೂಡುತ್ತಿದ್ದರು. ಮತ್ತೊಂದೆಂದರೆ, ಇವರು ನಾಲ್ವತ್ತೇ ವಯದವರಾಗಿದ್ದು ಆಶ್ರಮವನ್ನು ಹೊಂದಿ ಶ್ರೀಮೂಲರಾಮದೇವರ ಪೂಜೆಗಾಗಿ ಆತುರಗೊಂಡಿದ್ದರು. ಇದೂ ಅವರ ಬಹುಮಾನಕ್ಕೆ ಕಾರಣವಾಯಿತು.

ಧಾರವಾಡದಲ್ಲಿ, 'ತಪ್ತ ಮುದ್ರಾಧಾರಣವು ಅನವಶ್ಯಕ'ವೆಂಬ ಬಗ್ಗೆ **ಹಾಯಸ್ಕೂಲದ ಸಂಸ್ಕೃತಾಧ್ಯಾಪಕರಾದ ಅಣ್ಣಾಶಾಸ್ತ್ರೀ ಅತಲೇಕರ**ರೆಂಬವರು ವಾದವನ್ನು ಹೂಡಿದರು. ಮದಿಹಾಳವೆಂಬ ಧಾರವಾಡದ ಉಪನಗರದ ನೃಸಿಂಹದೇವಸ್ಥಾನದಲ್ಲಿ ಸಭೆ ಸೇರಿತು. ತಪ್ತ ಮುದ್ರಾಧಾರಣವು ಅವಶ್ಯವೆಂಬುದಕ್ಕೆ ಆಧಾರಗಳ ಮಳೆಯನ್ನೇ ಸುರಿಸಿ ಶ್ರೀಗಳು ವಾದಿಗಳನ್ನು ಶಾಂತಗೊಳಿಸಿದರು. ಆಗಲೇ 'ತಪ್ತ ಚಕ್ರಭೂಷಣ'ವೆಂಬ ಗ್ರಂಥವು ಬರೆದು ಮಠದಿಂದ ಪ್ರಸಿದ್ಧಗೊಳಿಸಿದುದಾಯಿತು.

ಮರುವರ್ಷದ ಮಹಾಸಮಾರಾಧನೆಯ ಹೊತ್ತಿಗೆ ಮಠವು ಹೈದರಾಬಾದಕ್ಕೆ ಬಂದಿದ್ದಿತು. ಅಲ್ಲಿ ಸಮಾರಾಧನೆಯು ವಿಜೃಂಭಣೆಯಿಂದ ಜರುಗಿ ೫೦ ಸಾವಿರ ರೂಪಾಯಿಗಳ ಅನ್ನ ಸಂತರ್ಪಣೆಯಾಯಿತು. ಬ್ರಾಹ್ಮಣರು ದಕ್ಷಿಣೆ ಮರ್ಯಾದೆಗಳಿಂದ ಸಂತುಷ್ಟರಾಗಿ ಹೋದರು.

ಇದರಿಂದ ಶ್ರೀಗಳ ಕೀರ್ತಿಯು ದೇಶದಲ್ಲೆಲ್ಲ ಹಬ್ಬಲಾರಂಭಿಸಿತು. **ಈ ವೇಳೆಗೆ ಮದರಾಸಿನಲ್ಲಿ ದಿವಾಣಬಹಾದ್ದರ ರಘುನಾಥರಾಯ**ರೆಂಬವರು ಇದ್ದರು. ಅವರು ಪುನರ್ವಿವಾಹವು ಶಾಸ್ತ್ರಸಮ್ಮತವೆಂದು ಉಲ್ಲೇಖಿಸಿದ್ದರು. ಶಾಸ್ತ್ರಾಧಾರಗಳನ್ನು ಶ್ರೀಗಳು ತೋರಿಸದೆ ಇದ್ದಲ್ಲಿ ಪುನರ್ವಿವಾಹವು ಪ್ರಚಾರದಲ್ಲಿ ತರಲಾಗುವುದೆಂದು ಅವರಿಂದ ಮಠಕ್ಕೆ ಪತ್ರವು ಬಂದಿತು. ಇದನ್ನು ಶ್ರೀಗಳು ತಾತ್ಸಾರ ಮಾಡಲಿಲ್ಲ. ಕೂಡಲೇ ಅವರು ಮದರಾಸ ಪಟ್ಟಣಕ್ಕೆ ಹೊರಟರು.

ಹೋಗಿ, ಒಂದು ಲಕ್ಷ ರೂಪಾಯಿಗಳನ್ನು ವೆಚ್ಚ ಮಾಡಿ ಒಂದು ದೊಡ್ಡ ಸಭೆಯನ್ನು ಶ್ರೀಗಳು ನೆರೆಸಿದರು. ದೇಶದೇಶದ ಪಂಡಿತರೂ

ಅಲ್ಲಿಗೆ ದಯಮಾಡಿಸಿದ್ದರು. ಅವರಲ್ಲಿ **ಕರ್ಹಾಡ ಗೋಪಾಲಾಚಾರ್ಯರೂ ಉಮರ್ಜೀ ಬಾಳಾಚಾರ್ಯರೂ** ಮುಂತಾದ ವೈಷ್ಣವ ಪಂಡಿತರ ಹೊರತಾಗಿ **ಕಂಚಿ ಸಿಂಗಲಾಚಾರ್ಯರೂ ತಂಜಾವರ ಸಾಂಬಶಾಸ್ತ್ರಿಗಳೂ ಕುಂಭಘೋಣದ ಕೃಷ್ಣಶಾಸ್ತ್ರಿಗಳೂ** ಮುಖ್ಯರಾಗಿದ್ದರು.

ತಾರಣ ಸಂವತ್ಸರ ಭಾದ್ರಪದ ಶುದ್ಧ ೧೪ಕ್ಕೆ ಸಭೆಗೆ ಪ್ರಾರಂಭವಾಯಿತು. ಪ್ರತಿದಿನವೂ ಪಂಡಿತರು ಪುನರ್ವಿವಾಹವು ಅಶಾಸ್ತ್ರೀಯವೆಂದು ಅನುವಾದಿಸಿ ಪ್ರಮಾಣಗಳನ್ನು ಕೊಡುತ್ತಿದ್ದರು. ಪ್ರಮಾಣಗಳನ್ನು ಕೊಡುತ್ತಿರುವಾಗಲೇ 'ನೇರ್ಗೋ' ಎಂಬ ವ್ಯಾಕರಣಸೂತ್ರದ ವಿಷಯವು ಬಂದು ಅದರ ಮೇಲೆ ಕರ್ಹಾಡ ಗೋಪಾಲಾಚಾರ್ಯರ ೩ ದಿನಗಳ ಉಪನ್ಯಾಸವಾಯಿತು. ಅವರ ಈ ಪಾಂಡಿತ್ಯಕ್ಕೆ ಪಂಡಿತರೆಲ್ಲರೂ ಬೆರಗಾದರು. ಪಂಡಿತರು ಅನುವಾದಿಸದ್ದನ್ನು ನಡುನಡುವೆ **ಸರ್. ಟಿ. ಮಾಧವರಾಯರೂ ಕಂಚೀ ಸುಬ್ಬರಾಯರೂ** ಮತ್ತೆ ವಿಶದಪಡಿಸುತ್ತಿದ್ದರು. ಈ ರೀತಿಯಾಗಿ ೩-೪ ದಿನಗಳು ಕಳೆದುವು. ಆದರೆ ಆದರಿಂದ ರಘುನಾಥರಾಯರಿಗೇನೂ ಸಮಾಧಾನವಾಗಲಿಲ್ಲ.

ಆಗ ಎಲ್ಲ ಪಂಡಿತರು ಹೇಳಿದ ಪ್ರಮಾಣಗಳನ್ನು ಒಂದುಗೂಡಿಸಿ ಕ್ರಮವಾಗಿ ಕನ್ನಡದಲ್ಲಿ ಆರಾದರೂ ೧-೨ ಪ್ರಹಾರಗಳವರೆಗೆ ಉಪನ್ಯಾಸವನ್ನು ಮಾಡಿರೆಂದು ಶ್ರೀಗಳು ಅಪ್ಪಣೆ ಮಾಡಿದರು. ಇದಕ್ಕೆ ಶತಾವಧಾನಿಗಳಾದ ತಿರುವಾದಿ **ಲಕ್ಷ್ಮಣಾಚಾರ್ಯ**ರೆಂಬವರು ಸಿದ್ಧರಾದರು. ಈಗ ೫ ದಿನಗಳಿಂದ ಪಂಡಿತರು ಹೇಳಿದುದನ್ನು ಒಂದೊಂದಾಗಿ ಯಾವುದನ್ನೂ ಬಿಡದೆ ಅನುವದಿಸಲಿಕ್ಕೆ ಆಚಾರ್ಯರು ಮೊದಲು ಮಾಡಿದರು. ೨ ಪ್ರಹರಗಳ ವರೆಗೆ ನಡೆದ ಅವರ ಅಸ್ಖಲಿತ ವಾಣಿಯು ಎಲ್ಲರನ್ನು ಬೆರಗುಗೊಳಿಸಿತು. ಮರುದಿನವೂ ಅವರೇ ಅನುವಾದಕರೆಂದು ನಿಶ್ಚಯವಾಯಿತು.

ಸರ ಟಿ. ಮಾಧವರಾಯರು ಮರುದಿನ ಗೌರವೋಕ್ತಿಗಳಿಂದ ರಘುನಾಥರಾಯರಿಗೆ ವಾಕ್ಯಾರ್ಥವನ್ನು ತಿಳಿಹೇಳುವುದಕ್ಕೆ ಮೊದಲಿಸಿದರು. ಆ ಮೇಲೆ ಮತ್ತೆ ಲಕ್ಷ್ಮಣಾಚಾರ್ಯರ ಉಪನ್ಯಾಸವು ಆರಂಭ

ವಾಯಿತು. ಹೀಗೆ ೯ ದಿನಗಳೆದುವು. ಆಗತಾನೆ ರಘುನಾಥರಾಯರಿಗೆ ನಿರುತ್ತರರಾಗುವ ಸಮಯವು ಬಂದಿತು. ಕೂಡಿದ ಸಭೆಯಲ್ಲಿ ಅವರು ತಮ್ಮ ತಪ್ಪನ್ನು ಒಪ್ಪಿಕೊಂಡರು. ತಮ್ಮ ಪರವಾಗಿ ವಾದ ಮಾಡುತ್ತಿದ್ದ ರಾಮಾನುಜೀಯ ಪಂಡಿತರಾದ ಶ್ರೀನಿವಾಸಾಚಾರ್ಯ ಚಿತ್ತಾತ್ತಕ್ಕಾಡುಕಿಡಾಂಬಿ ಇವರ ಕಡೆಯಿಂದಲೂ ಜಯಪತ್ರವನ್ನು ರಾಯರು ಕೊಡಿಸಿದರು. ಬಳಿಕ ಬಂದ ಸಭಿಕರಿಗೆಲ್ಲ ಮಠದಿಂದ ಮರ್ಯಾದೆಯನ್ನು ಮಾಡಿ ಕಳಿಸಲಾಯಿತು ಮತ್ತು ಮುಂದೆ, ನಡೆದ ವಾದವನ್ನೆಲ್ಲ ಮುದ್ರಿಸಿ ಎಲ್ಲ ಕಡೆಗೂ ಹಂಚಲಾಯಿತು. ಪತ್ರಗಳಲ್ಲಿಯೂ ಎಲ್ಲವೂ ಪ್ರಕಟಿಸಲ್ಪಟ್ಟಿತು.

ಮುಂದೆ ಮದರಾಸದಿಂದ ಹೊರಟು ಮಠವು ಮಂಚಾಕೊಪ್ಪ ಪ್ರಾಂತದಲ್ಲಿ ಸಂಚರಿಸತೊಡಗಿತು. ಈ ಕಾಲದಲ್ಲಿ ಶ್ರೀಗಳು ದೇವಪೂಜಾದಿಗಳನ್ನು ಶಿಷ್ಯರಿಗೆ ತೊಂದರೆಯಾಗದಂತೆ ಅದೇನೋ ಬೇಗನೆ ಮುಗಿಸತೊಡಗಿದ್ದರು. ಇದು ಅನೇಕರ ಆಕ್ಷೇಪಣೆಗೆ ಕಾರಣವಾಯಿತು. ಕಂಚೀ ಸುಬ್ಬರಾಯರು 'ಶ್ರೀಗಳಂತಪರೇ ಪೂಜಾ ಪ್ರಕಾರವನ್ನು ಲೋಪಗೊಳಿಸಿದರೆ ನಮ್ಮಂಥತರ ಪಾಡೇನು!' ಎಂದು ಎಷ್ಟೋ ಸಲ ಉದ್ಗಾರಗಳನ್ನು ತೆಗೆದರು.

'ತಂತ್ರ ಸಾರೋಕ್ತವಾದ ಪೂಜೆಯು ಶ್ರೀಗಳಿಗೆ ಬರುವದಿಲ್ಲ; ಅವರು ಲೋಭಿಗಳಾಗಿ ಹಿಂದಿನ ಗುರುಗಳಂತೆ ಮಹಾ ಸಮಾರಾಧನೆಯ ಕಾಲಕ್ಕೆ ಕೂಡ ಚೆನ್ನಾಗಿ ಕೈಬಿಡದೆ, ದುಡ್ಡುಗೂಡಿಸಿ, ತಮ್ಮ ಪೂರ್ವಾಶ್ರಮದ ಮಕ್ಕಳಿಗೆ ಉತ್ಪನ್ನವನ್ನು ಮಾಡಿಡುತ್ತಾರೆ. ಇದರಿಂದ ಮಠದ ಅಪಖ್ಯಾತಿಗೆ ಕಾರಣವಾಗುವುದು;' ಮುಂತಾದ ವಾಕ್ಯಗಳೂ ಸುಬ್ಬರಾಯರವೇ ಎಂಬುದಾಗಿ ಶ್ರೀಗಳ ಕಿವಿಗೆ ಶಿಷ್ಯರಿಂದ ಒಯ್ಯಲ್ಪಟ್ಟುವು.

ಇದಕ್ಕೆ ಶ್ರೀಗಳು ಸಿಟ್ಟಾದರು. ಇನ್ನು ಮುಂದೆ ಕಂಚೀ ಸುಬ್ಬರಾಯರು ಮಾಡುತ್ತಿದ್ದ ತಿರುಪತಿಯ ಸಭೆಗೆ ನಮ್ಮ ಮಠದ ವಿದ್ವಾಂಸರಾರೂ ಹೋಗಕೂಡದೆಂದು ಮಠದ ಸರ್ವಾಧಿಕಾರಿಗಳಾದ ಶಾಮಾಚಾರ್ಯರಿಂದ ಎಲ್ಲ ಕಡೆಗೂ ಅವರು ಪತ್ರಗಳನ್ನು ಬರೆಸಿದರು. ಮತ್ತು ಅಂದಿ

ನಿಂದ ೭೨ ಮಹಾಮಂತ್ರಗಳನ್ನೂ ಮಾಡುವುದಕ್ಕೆ ಮೊದಲು ಮಾಡಿದರು. ಮಹಾಸಮಾರಾಧನೆಯ ಕಾಲಕ್ಕಂತೂ ಆ ಸಾರೆ ೧೦೦,೨೦೦ ರೂಪಾಯಿಗಳ ವರೆಗೆ ದಕ್ಷಿಣೆಯು ಬ್ರಾಹ್ಮಣರಿಗೆ ಸಿಕ್ಕಿತು. ಆಗಲೇ ಒಂದು ಗೃಹಸ್ಥರ ಚಿಕ್ಕ ಸಭೆಗೂಡಿಸಿ 'ಈ ವರೆಗೂ ನಾನು ನನ್ನ ಪೂರ್ವಾಶ್ರಮದ ಹೆಂಡಿರು ಮಕ್ಕಳಿಗೆ ಕೊಂಚವಾದರೂ ಮಠದ ಮುಷ್ಟನ್ನ ಕೊಟ್ಟಿಲ್ಲ'ವೆಂಬುದಾಗಿ ಶ್ರೀಗಳು ತುಸು ಸಿಟ್ಟಿನಿಂದಲೇ ಶಪಥವನ್ನು ಮಾಡಿದರು. 'ತಮಗೆ ಕಂಚಿಯ ಸುಬ್ಬರಾಯರು ಇಂತಹ ನಿಷ್ಠುರ ನುಡಿಗಳನ್ನು ಆಡಿರಲಾರರು; ಸಂಸ್ಥಾನದ ಗೌರವಕ್ಕಾಗಿಯಾದರೂ ತಿರುಪತಿಯ ಸಭೆಗೆ ಹೋಗಲು ಮಠದ ಪಂಡಿತರಿಗೆ ಅನುಜ್ಞೆಯನ್ನು ಕೊಡುವು'ದೆಂದು ಶಾಮಾಚಾರ್ಯರು ಶ್ರೀಗಳನ್ನು ಶಾಂತವಾಗಿ ಕೇಳಿಕೊಂಡರು. ಶ್ರೀಗಳು ಒಪ್ಪಲಿಲ್ಲ. ಆದರೆ ಇವರನ್ನೂ ಮೀರಿ ಎಷ್ಟೋ ಮಠದ ಪಂಡಿತರು ತಿರುಪತಿಯ ಸಭೆಗೆ ಹೋಗಿ ಬಿಟ್ಟರು. ಇದನ್ನು ನೋಡಿಯಂತೂ ಶ್ರೀಪಾದರ ಸಿಟ್ಟು ಉಕ್ಕೇರಿತು. 'ಸಭೆಯಲ್ಲಿ ಪಡೆದ ಹಣದ ೨ಷ್ಟು ಹಣವನ್ನು ಕೊಟ್ಟರೆ ಪಂಡಿತರನ್ನು ಮಠದೊಳಕ್ಕೆ ಬಿಡುವುದು;' ಎಂತೆಂದು ದ್ವಾರಪಾಲಕರಿಗೆ ಶ್ರೀಗಳು ಆಜ್ಞೆಯನ್ನು ಕೊಟ್ಟರು.

ಈ ಸುದ್ದಿಯು ಕಂಚಿಯ ಸುಬ್ಬರಾಯರಿಗೆ ತಿಳಿಯಿತು. **ದಿವಾಣ ಬಹಾದ್ದೂರ ರಘುನಾಥರಾಯರು, ಚಂಚಲರಾಯರು** ಮುಂತಾದವರ ಮುಖಾಂತರವಾಗಿ ಅವರು ಮಠಕ್ಕೆ ಬಂದು ಶ್ರೀಗಳ ಬಳಿಯಲ್ಲಿ ಇದ್ದುದನ್ನು ವಿಶದ ಪಡಿಸಿ ಅವರು ಕ್ಷಮೆಯನ್ನು ಯಾಚಿಸಿದರು. ೧ ಸಾವಿರರೂಪಾಯಿಗಳ ದಂಡವನ್ನು ತೆತ್ತಲ್ಲಿ ಸಭೆಗೆ ಅಪ್ಪಣೆಯು ದೊರೆಯುವುದೆಂದು ಶ್ರೀಗಳು ಇನ್ನೂ ಸಿಟ್ಟಿನಲ್ಲಿಯೇ ಹೇಳಿದರು. ಆಗ ಎಲ್ಲ ಗೃಹಸ್ಥ ಶಿಷ್ಯರೆಲ್ಲರೂ ಕೂಡಿ ಶ್ರೀಗಳನ್ನು ಸಾರಿ ನುಡಿದರು:— 'ಮಹಾಸ್ವಾಮಿ! ಮಧ್ವಮತದ ಪ್ರಚಾರಕ್ಕೆಂದು ಈ ವರೆಗೆ ಕಂಚಿಯ ಸುಬ್ಬರಾಯರಂತೆ ಯಾರೂ ನಿಸ್ವಾರ್ಥ ಬುದ್ಧಿಯಿಂದ ಪ್ರಯತ್ನಬಟ್ಟಿಲ್ಲ. ಅವರು ಮಾಡುವ ಸಭೆಯಿಂದ ಜನರೊಳಗೆ ಮಧ್ವಮತದಲ್ಲಿ ಅಭಿರುಚಿಯೂ ಅಭಿಮಾನವೂ ಹುಟ್ಟುತ್ತಲಿದ್ದುದು ಎಲ್ಲರೂ ಕಂಡ ಮಾತಾ

ಗಿದೆ. ಮಠಾಧಿಪತಿಗಳು ಮಾಡುವ ಕಾರ್ಯವು ಒಬ್ಬ ಮಠದ ಶಿಷ್ಯನಿಂದ ಆಗುತ್ತಿದ್ದಲ್ಲಿ ತಪ್ಪೇನು? ಯಾರೋ ತುಂಟರು ಇಲ್ಲದುದನ್ನು ರಾಯರ ವಿಷಯವಾಗಿ ದೂರಿದ್ದನ್ನು ತಾವು ಮನಕ್ಕೆ ತರಬಾರದು. ಈ ಮೇಲೆ ತಾವು ಹೇಳಿದ ದಂಡವನ್ನು ನಾವೆಲ್ಲರೂ ತೆತ್ತಲಿಕ್ಕೆ ಸಿದ್ಧರಿದ್ದೇವೆ.'

ಬಳಿಕ ಕಂಚಿಯ ಸುಬ್ಬರಾಯರೂ ಶ್ರೀಗಳಿಗೆ ಸಾಷ್ಟಾಂಗವನ್ನು ಹಾಕಿ ಕ್ಷಮೆಯನ್ನು ಬೇಡಿದರು. ಮುಂದೆ ಎಲ್ಲವೂ ಶಾಂತವಾಯಿತು. ಬಳಿಕ ಸುಬ್ಬರಾಯರು ಸಭಿಕರನ್ನುದ್ದೇಶಿಸಿ:— 'ಮಹನೀಯರುಗಳೇ! ನಾನು ತಮ್ಮೆಲ್ಲರ ಸೇವಕನು! ಕೇವಲ ಮಧ್ವತತ್ವಗಳ ವಿಸ್ತಾರಕ್ಕೆ ಪ್ರೋತ್ಸಾಹನೆಯಾಗಬೇಕೆಂದು ನಾನು ಸಭೆಯ ಏರ್ಪಾಡನ್ನು ಮಾಡಿರುವೆನು; ಅಂದಮೇಲೆ ಆ ಸಭೆಯು ನನ್ನದೇ ಅಲ್ಲ; ನಿಮ್ಮೆಲ್ಲರದೂ ಇದೆ; ಅದರ ವ್ಯವಸ್ಥೆಯು ನಿಮ್ಮ ಇಚ್ಛಾನುಸಾರವಾಗಿ ಮಾಡಿಕೊಂಡರೂ ನನ್ನ ಯಾವತರಹದ ಆಕ್ಷೇಪಣೆಯೂ ಇಲ್ಲ' ಎಂತಾಗಿ ಹೇಳಿಕೊಂಡು ಶ್ರೀಗಳ ಆಜ್ಞೆಯನ್ನು ಪಡೆದು ತಮ್ಮೂರಿಗೆ ಹೊರಟು ಹೋದರು

ಇತ್ತ ಮಠವೂ ಕುಂಭಘೋಣ ಮುಂತಾದವುಗಳ ಮಾರ್ಗವಾಗಿ ರಾಮೇಶ್ವರಾದಿ ಯಾತ್ರೆಗಳನ್ನು ಪೂರೈಸಿಕೊಂಡು ಬಂದಿದ್ದಾಯಿತು. ಇಷ್ಟರಲ್ಲಿ ಮಠದ ಕಾರ್ಯದಲ್ಲಿ ಮತ್ತೊಂದು ಬೇಗೆಯು ಎದ್ದಿತು. ಮಠದ ಸರ್ವಾಧಿಕಾರಗಳನ್ನು ಮಠದವರು ಸೇರದಲೇ ಅವರನ್ನು ಕಿತ್ತಿ ಹಾಕಿ ಬಿಟ್ಟರು. ಅವರು ಸರಕಾರದಲ್ಲಿ ವ್ಯಾಜ್ಯವನ್ನು ನಡೆಯಿಸಿದರು. ಮೈಸೂರ ಸರಕಾರದಲ್ಲಿಯೂ ವ್ಯಾಜ್ಯವು ನಡೆಯಿತು. ಅದಕ್ಕಾಗಿ ಮಠದ ಹಣವು ಬಲು ವೆಚ್ಚವಾಗ ತೊಡಗಿತು.

ಈ ವಿಷಯದಲ್ಲಿ ಶ್ರೀಗಳ ಲಕ್ಷವು ಇನ್ನೂ ಅಷ್ಟೊಂದು ಬಿದ್ದಿರಲಿಲ್ಲ. ಅವರು ಸಂಚಾರದಲ್ಲಿಯೇ ಇದ್ದುಕೊಂಡು ಪಾಠಪ್ರವಚನಾದಿಗಳಲ್ಲಿ ಮುಳುಗಿಬಿಟ್ಟಿದ್ದರು. ಅವರ ಮಹಿಮೆಯೂ ದೇಶದಲ್ಲೆಲ್ಲ ಹರಡತೊಡಗಿದ್ದಿತು. ಹೋದಲ್ಲಿ ಅವರಿಗೆ ಮನ್ನಣೆಯು ಸಿಕ್ಕುತ್ತಿತ್ತು.

ಒಮ್ಮೆ **ಆರಣಿಯ ಅರಸನಲ್ಲಿಗೆ** ಶ್ರೀಗಳು ಬಂದಿರಲು ಅರಸ ನಿಗೆ ಪುತ್ರೋತ್ಸವವಾಗುವಂತೆ ಅವರು ಆಶೀರ್ವದಿಸಿದರು. ಅದರಂತೆ ಅರಸನು ವಾಂಛಿತವನ್ನು ಪಡೆದು ಗುರುಗಳಿಗೆ ೧೨ ಸಾವಿರ ರೂಪಾಯಿ ಗಳನ್ನು ಸಮರ್ಪಿಸಿದನು.

ಇಲ್ಲಿಂದ ಮುಂದೆ ಬಳ್ಳಾರಿಯ ಮಾರ್ಗವಾಗಿ ಶ್ರೀಗಳು ತುಂಗ ಭದ್ರಾತೀರದ **ಕೋರ್ಲಹಳ್ಳಿ**ಯೆಂಬ ಹಳ್ಳಿಗೆ ಬಂದರು. ಅಲ್ಲಿಯೇ ಅವರಿಗೆ ದೇಹಾಯಾಸವಾಯಿತು. ಆಗ **ಹೆರಕಲ್ಲ ಭೀಮಸೇನಾಚಾ ರ್ಯರೂ ಮುಂಡರಗಿ ಕನಕರಾಯರೂ** ಮುಂತಾದವರು **ಚಿಕ್ಕೋಡಿ ಜಯರಾಮಾಚಾರ್ಯರಿಗೆ** ಶ್ರೀಗಳಿಂದ ಆಶ್ರಮಕೊಡಿಸಿ ಸಂಸ್ಥಾನಕ್ಕೆ ಪಟ್ಟಗಟ್ಟಿಸಿ ಹೊಸ ಶ್ರೀಗಳನ್ನು '**ಶ್ರೀಸತ್ಯಧೀರ**'ರೆಂದು ಹೊಗಳಿಸಿದರು. ಶ್ರೀಗಳು ೧೮೦೮ನೇ ವ್ಯಯದ ಕಾರ್ತೀಕ ಶುದ್ಧ ೧೦ಕ್ಕೆ ನಾರಾಯಣಧ್ಯಾನರತರಾದರು. ಇವರೂ **ಶೇಷಾಂಶ**ರೆಂದೇ ಪ್ರಸಿದ್ಧಿಯು. ಇವರ ವೃಂದಾವನವು ಕೋರ್ಲಹಳ್ಳಿಯಲ್ಲಿ ಆಗಿ ಅಲ್ಲಿ ಈಗಲೂ ಹಸ್ತೋದಕಾದಿಗಳು ನಡೆಯುತ್ತಲಿವೆ. ಆದರೂ ಶ್ರೀಗಳು ಮಹಾಮಹಿಮರಾದುದರಿಂದ ಮಳಖೇಡದ ಶ್ರೀ ಜಯತೀರ್ಥರು ಕನ ಸಿನಲ್ಲಿ ಪೂಜಾರಿಗೆ ಆಜ್ಞೆಯನ್ನಿತ್ತು ತಮ್ಮಲ್ಲಿಯೂ ಇವರಿಗೆ ಹಸ್ತೋದ ಕಾದಿಗಳು ಸಿಗುವ ಏರ್ಪಾಡನ್ನು ಮಾಡಿರುತ್ತಾರೆ.

## ೩೬ ಶ್ರೀ ಸತ್ಯಧೀರತೀರ್ಥರು.



**ಪಟ್ಟ:— ೧೦-೮-೧೯೦೮ನೇ ವ್ಯಯದಿಂದ ೨೪-೩-೧೮೨೮ನೇ ಪರಾಭವದ ವರೆಗೆ**

ಹೊಸ ಶ್ರೀಪಾದರು ಗುರುಗಳ ವೃಂದಾವನ- ಮಹಾಸಮಾ ರಾಧನೆಗಳನ್ನು ಮುಗಿಸಿಕೊಂಡು ಸಂಸ್ಥಾನದೊಡನೆ ಮುಂಡರಗಿಗೆ ಬಂದರು. ಅಲ್ಲಿ, ಶ್ರೀಗಳಿಗೆ, ಹಿಂದಿನಿಂದಲೇ ಹಬ್ಬುತ್ತ ನಡೆಬಿದ್ದ ಮಠದ ಬೇಗೆಯನ್ನು ನಂದಿಸಲೇ ಬೇಕಾಗಿ ಬಂದಿತು. ಬೆಳಗಾವಿಯ **ಹುಚ್ಚರಾವ ವಕೀಲ**ರನ್ನು ಕರೆಯಿಸಿಕೊಂಡು ಎಲ್ಲವನ್ನೂ ಉಪಾಯ ದಿಂದ ಶ್ರೀಪಾದರು ಶಾಂತ ಮಾಡಿಕೊಂಡರು. ಅಲ್ಲಿಯೇ ಕೆಲವು

ದಿನಗಳ ವರೆಗೆ ಮಠವು ಆತಿಥ್ಯವನ್ನು ಸ್ವೀಕರಿಸುತ್ತಿದ್ದು ಮುಂದೆ ದಕ್ಷಿಣಕ್ಕೆ ಸಾಗಿತು.

ಕ್ರಮೇಣ ಹೈದರಾಬಾದಕ್ಕೆ ಬಂದು ಅಲ್ಲಿ **ವಕೀಲ ಗಿರಿರಾಯ, ಶ್ರೀನಿವಾಸರಾಯ**ರು ಮುಂತಾದ ಗೃಹಸ್ಥರಿಂದ ಸಂಸ್ಥಾನಕ್ಕೆ ಚೆನ್ನಾದ ಮರ್ಯಾದೆಯು ದೊರಕಿತು. ಮುದ್ರಾಮಂತ್ರಾಕ್ಷತಾದಿಗಳಿಂದ ಅಲ್ಲಿಯ ಶಿಷ್ಯರು ಸಂತೆಸಬಟ್ಟರು.

ಮುಂದೆ ಮಠವು ಶಿಕಂದರಾಬಾದದ ಮಾರ್ಗವಾಗಿ ಬೆಂಗಳೂರ ನಗರಕ್ಕೆ ಆಗಮಿಸಿತು. **ಅಲ್ಲಿ ದಿವಾಣ ಕೃಷ್ಣಮೂರ್ತಿ** (ಪೂರ್ಣಯ್ಯನವರ ವಂ ಮುಂತಾದವರಿಂದ ಪೂಜಿತರಾಗಿ ಶ್ರೀಗಳು ಮೈಸೂರಿಗೆ ನಡೆದರು. ಅಲ್ಲಿ ಸಂಪ್ರದಾಯದಂತೆ ಅರಮನೆಯಲ್ಲಿಳಿದು ಮಹಾಪೂಜೆಯನ್ನು ಮಾಡಿ ಅರಸನ ಮನವನ್ನು ತಣಿಸಲಾಯಿತು.

**ದಿವಾಣರಾದ ಶೇಷಾದ್ರಿ ಅಯ್ಯರರೂ** ಸ್ವಾಮಿಗಳ ತಪೋಭಕ್ತಿಗಳಿಗೆ ಮೆಚ್ಚಿ ಶ್ರೀಗಳನ್ನು ಬಹುವಾಗಿ ಮನ್ನಿಸಿದರು. ಸರಕಾರದಿಂದ ಹೇರಳವಾದ ದ್ರವ್ಯವು ಸಿಗುವಂತೆ ಮಾಡಿದರು. ಮತ್ತು ಆಗ ಒಂದು ಸಭೆಗೂಡಿಸಿ ವಾಕ್ಯಾರ್ಥಕ್ಕೂ ಅನುವು ಕೊಟ್ಟರು. ಅಲ್ಲಿ ಶ್ರೀಗಳ ಕಡೆಯ **ಚಿಕ್ಕೇರೂರ ಸ್ವಾಮಿರಾಯಾಚಾರ್ಯರು** ವಿಷಯವನ್ನಾರಂಭಿಸಿ ಬಹು ಚಾತುರ್ಯವನ್ನು ತೋರಿಸಿದರು. ಇದಕ್ಕೆ ಸಭೆಗೆ ಬಂದಿದ್ದ **ಕಸ್ತೂರಿ ರಂಗಯ್ಯಂಗಾರ,** ಬೆಂಗಳೂರ **ಪಂಡಿತರತ್ನ ರಾಮಶಾಸ್ತ್ರಿಗಳು, ಕಾಶೀರಾಮಶಾಸ್ತ್ರಿ**ಗಳು ಮುಂತಾದವರು ತಲೆದೂಗಿದರು. ಸಭೆಯಾದ ಮೇಲೆ ಎಲ್ಲ ಪಂಡಿತರಿಗೂ **ಯೋಗ್ಯ** ಸನ್ಮಾನಗಳು ದೊರೆತುವು.

ಇಲ್ಲಿಂದ ಮುಂದೆ ಶ್ರೀಗಳು ರಾಮೇಶ್ವರದ ಕಡೆಗೆ **ಹೊರಟರು.** ಅದನ್ನು ಪೂರೈಸಿಕೊಂಡು ಬಂದು ಕಾಶೀಯಾತ್ರೆಗೆಂದು ತೆರಳಿದರು. ಅಲ್ಲಿ ಕೆಲವು ದಿನಗಳಿದ್ದು ಉತ್ತರದ ಎಲ್ಲ ತೀರ್ಥಗಳನ್ನು **ಮುಗಿಸಿ**ಕೊಂಡು ಹೈದರಾಬಾದ ಪ್ರಾಂತಕ್ಕೆ ಬಂದರು. ಭಾಗ್ಯನಗರಕ್ಕೆ ಸಮೀಪಿಸಿದ **ನಾರಾಯಣಯ್ಯ ಪೀಠದಲ್ಲಿ** ಶ್ರೀಗಳಿಗೆ ಅಸ್ವಸ್ಥತೆಯು **ತೋರಿ**ದ್ದುದರಿಂದ **ಕಿನ್ನಾಳ ಜಯಾಚಾರ್ಯ**ರಿಗೆ ಪ್ರಣವೋಪದೇಶವಾಗಿ

ಸಂಸ್ಥಾನಕ್ಕೆ ಪಟ್ಟಾಭಿಷೇಕವಾಯಿತು. '**ಶ್ರೀಸತ್ಯಜ್ಞಾನ**'ರೆಂದು ಹೆಸರಿಡಲಾಯಿತು. ೧೮೫೬ನೇ ಕ್ರೋಧಿಯ ಆಶ್ವೀನ ಶುದ್ಧ ೨ ಗೆ ಈ ಕಾರ್ಯವು ಜರುಗಿತು. ಆದರೆ ಶ್ರೀಗಳಿಗೆ ಮುಂದೆ ಗುಣವಾಯಿತು. ಆಗ ಈರ್ವರೂ ಶ್ರೀಗಳು ಕೂಡಿಕೊಂಡು ಸಂಚಾರಕ್ಕೆ ಹೊರಟರು.

ಮುಂದೆ ಮಠವು ರಾಯಚೂರ ಸಮೀಪದ **ಅತಕೂರ**ವೆಂಬಲ್ಲಿಗೆ ಬಂದಾಗ ಮತ್ತೆ **ಶ್ರೀಸತ್ಯಧೀರ**ರಿಗೆ ದೇಹಾಯಾಸವುಂಟಾಗಿ ೧೮೨೮ನೇ ಪರಾಭವ ಸಂವತ್ಸರದ ಜ್ಯೇಷ್ಠ ವದ್ಯ ೯ಗೆ ಅವರು ನಾರಾಯಣಧ್ಯಾನ ಪರರಾದರು. ಇವರು **ರುದ್ರಾಂಶ**ರೆಂಬ ಆಖ್ಯಾಯಿಕೆಯಿದೆ.

## ೩೭ ಶ್ರೀ ಸತ್ಯಜ್ಞಾನತೀರ್ಥರು.

**ಪಟ್ಟ:— ೨-೭-೧೮೨೬ನೇ ಕ್ರೋಧಿಯಿಂದ ೧೧-೧೧-೧೮೩೩ನೇ ವಿರೋಧಿಕೃತುವಿನ ವರೆಗೆ**

ಇವರು ಬಾಲ್ಯದಿಂದಲೇ ಮಠದಲ್ಲಿ ವೈರಾಗ್ಯ ಭಾವದಿಂದ ಅಧ್ಯಯನಕ್ಕಾಗಿ ವಾಸವಾಗಿದ್ದರು. ಶ್ರೀಪಾದಪುತ್ರರಾದ ಸೇತೂ ರಾಮಾಚಾರ್ಯರೂ ಇವರೂ ಕೂಡಿಯೇ ವೇದಾಂತಾದಿ ಸಕಲ ಶಾಸ್ತ್ರ ಗಳನ್ನು **ಶ್ರೀಸತ್ಯಧೀರರ** ಬಳಿಯಲ್ಲಿ ಓದಿದರು. ಇವರ ವೈರಾಗ್ಯ ಭಾವವೇ ಇವರಿಗೆ ೩೨ನೇ ವಯಸ್ಸಿನಲ್ಲಿಯೇ ಆಶ್ರಮವನ್ನು ಕೊಟ್ಟಿತು. ಗುರುಗಳು ಇವರನ್ನು ಅದಕ್ಕೆಂದೇ ಬಹು ಪ್ರೀತಿಸುತ್ತಿದ್ದರು.

ಗುರುಗಳ ವೃಂದಾವನವನ್ನು ಅತಗೂರಲ್ಲಿ ಬಹು ಭಕ್ತಿಯಿಂದ ಮಾಡಿಸಿ ಸಮಾರಾಧನೆಯನ್ನು ಮುಗಿಸಿಕೊಂಡು ಅನ್ನ ಸಂತರ್ಪಣಾದಿ ಗಳಿಂದ ಬ್ರಾಹ್ಮಣರನ್ನು ಯಥೇಚ್ಛೆಯಾಗಿ ತೃಪ್ತಿಪಡಿಸಿ ಹೊಸ ಶ್ರೀಗಳು ಮಳಖೇಡಕ್ಕೆ ಆಗಮಿಸಿದರು. ಇಲ್ಲಿ ಶ್ರೀಗಳು ಅಕ್ಕಿಯನ್ನ ವನ್ನು ಬಿಟ್ಟು ಆಕಳು ತಿಂದು ಗೋಮಯವಾಗಿದ್ದುದರಲ್ಲಿದ್ದ ನವಣಿ ಕ್ಕಿಯ ಅನ್ನವನ್ನುಣ್ಣುತ್ತ ಮಿತಾಹಾರಿಗಳಾಗಿ ಶ್ರೀ ಜಯತೀರ್ಥರ ಸೇವೆಯನ್ನು ಅನೇಕ ದಿನಗಳ ವರೆಗೆ ಮಾಡುತ್ತಲಿದ್ದರು. ಪ್ರತಿ ದಿನವೂ ೧೨ ಸಾವಿರ ಪ್ರಣವ ಮಂತ್ರಗಳನ್ನೂ ೭೨ ಮಹಾಮಂತ್ರ

ಗಳನ್ನೂ ಜಪಿಸುತ್ತ ವೈರಾಗ್ಯದಿಂದಿರುತಿದ್ದರು. ಸುಧಾ ಮಂಗಳ ವನ್ನು ಮಾಡಿಸಿ ಶ್ರೀಪಾದರು ಅನ್ನಸಂತರ್ಪಣೆಯನ್ನು ಬಹುವಾಗಿ ಮಾಡಿದರು. ಸಂಸ್ಥಾನದ ಬೇರೆ ಕಾರಭಾರವನ್ನೆಲ್ಲ ಗುರುಪುತ್ರರಾದ **ಸೇತೂರಾಮಾಚಾರ್ಯರ** ತಲೆಯ ಮೇಲಿರಿಸಿ ತಾವು ಸದಾ ನಾರಾಯಣ ನಾಮಸ್ಮರಣೆಯಲ್ಲಿ ತತ್ಪರರಾಗಿರುತ್ತಿದ್ದರು.

ಒಂದಿನ ಶ್ರೀ ಟೀಕಾಚಾರ್ಯರ ಸನ್ನಿಧಿಯಲ್ಲಿ ಶ್ರೀಗಳು ಪೂಜೆಗಾಗಿ ಕುಳಿತಿದ್ದರು. ಆಗೊಂದು ಸರ್ಪವು ಭೋರ್ಗರೆಯುತ್ತ ಬಂದಿತು. ಉಳಿದವರೆಲ್ಲ ಬೆದರಿ ಓಡಿದರು. ಶ್ರೀಗಳೇನು ಕದಲಲಿಲ್ಲ. ಸರ್ಪವು ಮಂಟಪದ ಬುಡಕ್ಕೆ ಕುಳಿತಿತು. ಪೂಜಾ ನೈವೇದ್ಯಾದಿಗಳು ಮುಗಿದ ಮೇಲೆ ಮೂಲ ಗುರುಗಳ ಅಭಿಷೇಕಾದಿಗಳನ್ನು ತೀರಿಸಿ ಶ್ರೀಗಳು ಒಂದು ದೊಡ್ಡ ಬಟ್ಟಲದಲ್ಲಿ ಹಾಲನ್ನು ತರಿಸಿ ಸರ್ಪದ ಮುಂದಿಟ್ಟರು. ಹಾಲು ಕುಡಿದು ಹಾವು ಮೆಲ್ಲನೆ ಶಾಂತವಾಗಿ ಹೊರಟುಹೋಯಿತು. ಮಠದವರು ಇದೇನೆಂದು ಶ್ರೀಗಳನ್ನು ಕೇಳಿದರು. ನಮಗೆ ಇಲ್ಲಿಂದ ಹೊರಡಲು ಅಪ್ಪಣೆಯಾಯಿತೆಂದು ಅವರು ನುಡಿದರು. ನಡೆದ ಸಂಗತಿಯನ್ನು ನೋಡಿದವರೆಲ್ಲ ಶ್ರೀಗಳ ತಪೋಮಹಿಮೆಗೆ ತಲೆದೂಗಿದರು.

ಮರುದಿನವೇ ಕನಸ್ಸಿನಲ್ಲಿ ಶ್ರೀಗಳು ಶ್ರೀ ಶ್ರೀನಿವಾಸನನ್ನು ಕಂಡರು. ಇದು ತಿರುಪತಿಯ ದೇವರ ಕರೆವೆಂದು ತಿಳಿದು ಶ್ರೀಪಾದರು ಅತ್ತಕಡೆಗೆ ಹೊರಟರು. **ಗೋವಿಂದರಾಜಪಟ್ಟಣಕ್ಕೆ** ಮಠವು ಹೋಯಿತು.

ಈ ಸುದ್ದಿಯು ಬೆಟ್ಟದ ಮೇಲಿನ ಮಹಂತನಿಗೆ ತಿಳಿಯಲು ಆತನು ಬಹು ಆದರಭಾವದಿಂದ ಶ್ರೀಗಳನ್ನು ಮೇಲಕ್ಕೆ ಕರೆದೊಯ್ದನು. ಶ್ರೀಗಳು ದೇವರ ಪಸಿಬೆಯನ್ನು ಮಾತ್ರ ಎಡಬಲದ ಸೇವೆಯವರ ಮೇಲಿರಿಸಿ ಸಕಲ ವಾದ್ಯ ವೈಭವಗಳಿಂದಲೂ ಮೇಲಕ್ಕೆ ಕಳಿಸಿ ತಾವು ಪಂಡಿತರೊಡನೆ ನಡೆಯುತ್ತ ಬೆಟ್ಟವನ್ನು ಹತ್ತಿದರು. ನೃಸಿಂಹ ಮಂಟಪಕ್ಕೆ ಬರುತ್ತಲೇ ಚಿಕ್ಕಮಹಂತನು ಛತ್ರಚಾಮರಾದಿ ವೈಭವದಿಂದ ಶ್ರೀಗಳನ್ನು ಕರೆದುಕೊಂಡು ಧ್ವಜಸ್ತಂಬಕ್ಕೆ ಹೋಗುವಷ್ಟರಲ್ಲಿಯೇ ೧೦—೧೨ ಸಾವಿರ ಬ್ರಾಹ್ಮಣರು ಅಲ್ಲಿ ಕಲೆತರು. ಶ್ರೀಗಳಿಗೆ ಮುಂದೆ

ಸಾಗಲು ಕೂಡ ಹಾದಿಯು ದೊರೆಯದಂತಾಯಿತು. ಆಗ ಮಹಂತೆ ನಾಳುಗಳ ಕೃಷ್ಣಾಜಿನ ಸುರುಳಿಯ ಹೊಡತಕ್ಕೆ ವೊದಲಾಯಿತು.

ಆಗ ಶ್ರೀಗಳು ಭಾಗವತದಲ್ಲಿಯ ೫ನೆಯ ಸ್ಕಂದದ ೨೩ನೆಯ ಶ್ಲೋಕವನ್ನೂ ೧೦ನೆಯ ಸ್ಕಂದದ ೧೬ನೆಯ ಶ್ಲೋಕವನ್ನೂ ಉಚ್ಚರಿಸಿದರು. 'ಬ್ರಾಹ್ಮಣರನ್ನು ಹೊಡೆಯಬೇಡಿರಿ; ಈ ಹೊತ್ತು ಪಕ್ವಾನ್ನ ಮಾಡಿಸಿ ಶ್ರೀನಿವಾಸನಿಗೆ ನೈವೇದ್ಯವಿಟ್ಟು ಈ ಬ್ರಾಹ್ಮಣರಿಗೆ ಹಾಕಿರಿ; ಅಂದರೆ ದೇವರು ಸುಪ್ರೀತನಾಗುತ್ತಾನೆ; ಎಂದು ಮುಂತಾಗಿ ಅಂದರು.

ಶ್ರೀಗಳು ಮಹಾದ್ವಾರದ ಬಳಿಗೆ ಬರುತ್ತಲೇ ಅಲ್ಲಿಂದಲೇ ತಿಮ್ಮಪ್ಪನಿಗೆ ನಮಸ್ಕಾರವನ್ನು ಮಾಡಿದರು. ಈ ಕಾಲಕ್ಕೆ ಗುಡಿಯೊಳಕ್ಕೆ ಒಂದು ಸೋಜಿಗದ ಸಂಗತಿಯು ನಡೆದಿತ್ತು. ವೆಂಕಟರಮಣನ ಹಣೆಯ ಮೇಲೆ ತಿಲಕವೇ ಆಗ ನಿಲ್ಲದಂತಾಗತೊಡಗಿತ್ತು. ಹಲವು ಸಾರೆ ಇಟ್ಟು ಇಟ್ಟು ಅರ್ಚಕರು ಬೇಸತ್ತಿದ್ದರು. ಈ ಸಮಾಚಾರವನ್ನು ತಿಳಿಗಣ್ಣಿನಿಂದ ತಿಳಿದು ನೋಡಿ 'ನಾನು ಬರದ ಹೊರತು ತಿಲಕಧಾರಣವನ್ನು ಮಾಡದಿರುವೆಯೊ?' ಎಂದು ಶ್ರೀಪಾದರು ಉದ್ಗಾರವನ್ನು ತೆಗೆದರು. ಇದನ್ನು ಕೇಳಿ ಹತ್ತಿರದಲ್ಲಿಯೇ ನಡೆದಿದ್ದ ಮಹಾಂತನಿಗೆ ಅಚ್ಚರಿಯಾಯಿತು. ಅವನು ಲಗುಬಗೆಯಿಂದ ಗರ್ಭಾಲಯವನ್ನು ಒಳಹೊಕ್ಕು ನೋಡಿಬಂದನು. ಶ್ರೀಗಳ ಉದ್ಗಾರದಂತೆಯೇ ಅಲ್ಲಿಯ ಸ್ಥಿತಿಯುಂಟಾಗಿದ್ದಿತು. ಕೂಡಲೇ ಆತನು ಹೊರಗೆಬಂದು ಶ್ರೀಗಳನ್ನು ಬಹು ಭಕ್ತಿಯಿಂದ ಬೇಗನೇ ಶ್ರೀನಿವಾಸನ ಸಮ್ಮುಖಕ್ಕೆ ಕರೆದೊಯ್ದು ನಿಲ್ಲಿಸಿದನು. ದೇವರ ದರ್ಶನದಿಂದ ಶ್ರೀಪಾದರ ಮನವು ತಣಿದು ಶಾಂತವಾಯಿತು. ಆ ಮೇಲೆ ಸ್ತೋತ್ರಕ್ಕೆ ಪ್ರಾರಂಭವಾಯಿತು. ಈಗ ತಾನೇ ತಿಲಕವು ಹಚ್ಚಿದೊಡನೆಯೇ ಅಂಟಿಕೊಂಡಿತು. ಬಳಿಕ ಶ್ರೀಗಳು ದ್ವಾದಶಸ್ತೋತ್ರ, ವೇಂಕಟೇಶಸ್ತೋತ್ರಗಳನ್ನು ಭಕ್ತಿಯಿಂದ ಅನ್ನುತ್ತಿದ್ದು ಶೇಷಾಚಲವಾಸನಿಗೆ ಮಂಗಳಾರತಿಯನ್ನೆತ್ತಿಸಿ ಆನಂದ ಬಾಷ್ಪಗಳನ್ನು ದಿರಿಸುತ್ತ ಹೊರಕ್ಕೆ ಬಂದರು.

ಆ ದಿನದ ವೆಂಕಟೇಶದೇವರ ನೈವೇದ್ಯವು ಮಠದ ವೆಚ್ಚದಿಂ

ದಲೇ ಆಯಿತು. ಕೇಶರದನ್ನ, ಪೊಂಗಲು ಮುಂತಾಗಿ ವಿಧವಿಧದ ಪಕ್ವಾನ್ನಗಳ ನೈವೇದ್ಯವಾಗಿ ೧೦ಸಾವಿರ ಬ್ರಾಹ್ಮಣರಿಗೆ ಅನ್ನಸಂತರ್ಪಣೆಯಾಯಿತು. ಆಗ ಎಲ್ಲರ ಬಾಯಿಯಲ್ಲಿಯೂ ಶ್ರೀಗಳ ಸ್ತುತಿಯೇ ಸ್ತುತಿಯು.

ಆ ದಿನ ರಾತ್ರಿ ಗರುಡೋತ್ಸವಾದಿಗಳೂ ಮಠದಿಂದಲೇ ಜರುಗಿದುವು. ಮುಂದೆಯೂ ಶ್ರೀನಿವಾಸನಿಗೆ ಆಮಂತ್ರಣೋತ್ಸವ ಬ್ರಹ್ಮೋತ್ಸವಾದಿಗಳನ್ನು ಮಾಡಿಸಿ ಶ್ರೀಗಳು ಬಳಿಕ ಮಹಾಂತನಿಂದ ಬಹು ಸತ್ಕಾರಗಳನ್ನು ಹೊಂದಿ ಬೆಟ್ಟವನ್ನಿಳಿದರು.

ಗೋವಿಂದರಾಜಪಟ್ಟಣದಲ್ಲಿಯೂ ಒಂದು ಸಂಸ್ಥಾನ ಪೂಜೆಯಾಯಿತು. ಬಳಿಕ ಮಠವು ಪದ್ಮಸರೋವರಕ್ಕೆ ಹೋಯಿತು. ಅಲ್ಲಿ ೪-೮ ದಿನಗಳ ವರೆಗೆ ಪೂಜಾದಿಗಳು ನಡೆದುವು.

ಇಷ್ಟಾದ ಮೇಲೆ ಮಠವು ಧಾರವಾಡ ಪ್ರಾಂತದ ಕಡೆಗೆ ಹೊರಟಿತು. ಬಹು ದಿನದ ಭೆಟ್ಟಿಯಾದುದರಿಂದ ಶಿಷ್ಯಸಮುದಾಯವು ಸಂತಸಗೊಂಡಿತು ಹುಬ್ಬಳ್ಳಿಯಲ್ಲಿ ಮಹಾಸಮಾರಾಧನೆಯಾಯಿತು. ಎಣಿಕೆಯಿಲ್ಲದಷ್ಟು ಬ್ರಾಹ್ಮಣರು ಭೋಜನದಿಂದಲೂ ದಕ್ಷಿಣೆಯಿಂದಲೂ ತುಷ್ಟರಾದರು.

ಇದನ್ನು ತೀರಿಸಿ ಶ್ರೀಗಳು ಉಡಪಿಗೆ ಹೋದರು. ೧೨ಸಾವಿರ ರೂಪಾಯಿಗಳನ್ನು ಸಂಪ್ರದಾಯದಂತೆ ಶ್ರೀಕೃಷ್ಣನಿಗೆ ಸಲ್ಲಿಸಲಾಯಿತು. ಮಠವು ೧೦-೧೫ ದಿನಗಳ ವರೆಗೆ ಅಲ್ಲಿಯೇ ವಾಸವಾಗಿದ್ದಿತು. ಆಗ ಎಷ್ಟೋ ವಿದ್ವಾಂಸರನ್ನು ಕೂಡಿಸಿ ಶ್ರೀಪಾದರು ವಾಕ್ಯಾರ್ಥವನ್ನು ಮಾಡಿಸಿದರು. ಕೊನೆಗೆ, ಬಂದವರಿಗೆಲ್ಲ ಯೋಗ್ಯ ಸತ್ಕಾರವೂ ಆಯಿತು.

ಈ ನಂತರ ಶ್ರೀಗಳು ಬೆಜವಾಡದ ಕಡೆಗೆ ಹೊರಟರು. ಇಷ್ಟರಲ್ಲಿ ಅವರ ಮೈಯಲ್ಲಿ ಆಯಾಸವಾಗತೊಡಗಿದ್ದಿತು. ವೆಲ್ಲೂರಿಗೆ ಬಂದಾಗಂತೂ ಆಯಾಸವು ಅತಿಯಾಯಿತು. ಆದ್ದರಿಂದ ೧೮೩೩ ವಿರೋಧಿಕೃತುವಿನ ಪುಷ್ಯ ಬಹುಳ ೧೦ನೆಯ ದಿವಸ ಗುರುಪುತ್ರರೂ ಜಗದ್ವಿಖ್ಯಾತರೂ ಆದ **ಸೇತುರಾಮಾಚಾರ್ಯ**ರಿಗೆ ಶ್ರೀಗಳು ಆಶ್ರಮ

ವನ್ನಿತ್ತು '**ಸತ್ಯಧ್ಯಾನ**'ರೆಂದವರನ್ನು ಕರೆದರು. ಬಳಿಕ ಪಟ್ಟಾಭಿ ಷೇಕೋತ್ಸವು ವಿಜೃಂಭಣೆಯಿಂದ ಜರುಗಿತು. ಮುಂದೆ ಶ್ರೀಗಳಿಗೆ ಕೊಂಚ ಗುಣವಾಯಿತು. ಆದರೂ ಅವರು ಹೊಸ ಶ್ರೀಗಳ ಕೈಯಿಂ ದಲೇ ಸಂಸ್ಥಾನಪೂಜೆಯನ್ನು ಮಾಡಿಸುತ್ತಿದ್ದು ಸಂತಸಗೊಳ್ಳುತ್ತಿದ್ದರು. **ರಾಜಮಹೇಂದ್ರ**ಕ್ಕೆ ಬರುತ್ತಲೇ ಶ್ರೀ ಸತ್ಯಜ್ಞಾನರಿಗೆ ಆಯಾಸವು ಮತ್ತೆ ಬಲವಾಯಿತು. ಕಡೆಗೆ ವಿರೋಧಿಕೃತುವಿನ ಮಾಘ ಶುದ್ಧ ೧೧ನೇ ದಿನ ತಮ್ಮ ಅವತಾರ ಸಮಾಪ್ತಿಯಾಯಿತೆಂದು ಎಲ್ಲರಿಗೂ ಹೇಳುತ್ತ ಹೇಳುತ್ತ ಶಾಂತವಾಗಿ ನಾರಾಯಣಧ್ಯಾನಪರರಾದರು. ಇವರ ವೃಂದಾವನವು ಅಲ್ಲಿಯೇ ಆಯಿತು. ಶ್ರೀಗಳು **ಅಗ್ನಿಯ ಅಂಶ ದವ**ರೆಂಬ ನಂಬಿಗೆಯು ಇವರ ಶಿಷ್ಯ ಸಮುದಾಯದಲ್ಲಿ ಈಗಲೂ ಇದೆ.

---

## ಶ್ರೀ ವ್ಯಾಸತೀರ್ಥರು

ಇವರು ಶ್ರೀ ಟೀಕಾಚಾರ್ಯರ ಸಾಕ್ಷಾತ್ ಶಿಷ್ಯರು. ಇವರು ತಮ್ಮ ಗುರುಗಳ ಅಪ್ಪಣೆಯಂತೆ ಕೆಳಗೆ ಕಾಣಿಸಿದ ಗ್ರಂಥಗಳಿಗೆ ವ್ಯಾಖ್ಯಾನವನ್ನು ಬರೆದಿದ್ದಾರೆ.

೧ ತಲವಕಾರೋಪನಿಷತ್ ಭಾಷ್ಯಟೀಕಾ
೨ ಅಥರ್ವಣೋಪನಿಷತ್ ,,
೩ ತೈತ್ತಿರೀಯೋಪನಿಷತ್ ,,
೪ ಬೃಹದಾರಣ್ಯಕೋಪನಿಷತ್ ,,
೫ ಕಾಠಕೋಪನಿಷತ್ ,,
೬ ಮಾಂಡೂಕ್ಯೋಪನಿಷತ್ ,,
೭ ಐತರೇಯೋಪನಿಷತ್ ,,
೮ ಛಾಂದೋಗ್ಯೋಪನಿಷತ್ ,,
೯ ಜಯತೀರ್ಥ ವಿಜಯ

ಇವರು ಸುಮಾರು ಶಾಲಿವಾಹನ ಶಕೆಯ ೧೩೦೦ನೇ ವರ್ಷದ ಸ್ಲಿದ್ದಂತೆ ತಿಳಿದುಬರುತ್ತಿದೆ. ಇದಕ್ಕಿಂತಲೂ ಹೆಚ್ಚಾಗಿ ಇವರ ವಿಷ ಯವು ತಿಳಿಯದು.

# ಬೇರೆ ಮಠಗಳು.



## ಶ್ರೀ ವ್ಯಾಸರಾಯರ ಮಠಭೇದವು.



ಶ್ರೀಮದುತ್ತರಾದಿ ಮಠದ **ಏಳನೆಯ ಪೀಠಸ್ಥರಾದ ಶ್ರೀ ವಿದ್ಯಾಧಿರಾಜರು** ಶ್ರೀಮದಾಚಾರ್ಯರ ತತ್ವಗಳನ್ನು ದೇಶದಲ್ಲೆಲ್ಲ ಬಿತ್ತರಿಸುವುದಕ್ಕೋಸುಗ **ರಾಜೇಂದ್ರ**ರೆಂಬವರಿಗೆ ಆಶ್ರಮವನ್ನು ಕೊಟ್ಟಿದ್ದರು. ಗುರುಗಳ ಆಜ್ಞೆಯಂತೆ ರಾಜೇಂದ್ರರು ಸಂಚಾರದಲ್ಲಿದ್ದರು. ಇವರು ಬಳಿಯಲ್ಲಿರದಿರುವಾಗಲೇ ಶ್ರೀವಿದ್ಯಾಧಿರಾಜರಿಗೆ ದೇಹದಲ್ಲಿ ಆಯಾಸವಾಯಿತು. ಆದುದರಿಂದ **ಕವೀಂದ್ರ**ರೆಂಬವರಿಗೆ ಅವರು ಆಶ್ರಮವನ್ನಿತ್ತು ಸಂಸ್ಥಾನಕ್ಕೆ ಪಟ್ಟಗಟ್ಟಿದರು. ಈ ಸುದ್ದಿಯು ತಿಳಿಯಲು ರಾಜೇಂದ್ರರು ಬೇರೊಂದು ಮಠವನ್ನೇ ಉಂಟುಮಾಡಿಕೊಂಡರು. ಶಾಲಿವಾಹನ ಶಕೆಯ ೧೩೫೪ರಲ್ಲಿ ಈ ಸಂಗತಿಯು ಜರುಗಿತು. ಈ ಮಠದಲ್ಲಿ ಮುಂದೆ **ಶ್ರೀ ವ್ಯಾಸರಾಯ**ರೆಂಬವರು ಬಹು ಮಹಿಮೆಯನ್ನು ತೋರಿಸಿದರಾದುದರಿಂದ ಅವರ ಕಾಲದಿಂದ ಈ ಮಠಕ್ಕೆ **ವ್ಯಾಸರಾಯರ ಮಠವೆಂಬ** ಹೆಸರು ಬಂದಿತು. ಮೈಸೂರ ಸಂಸ್ಥಾನದಲ್ಲಿಯ **ಸೋಸಲೆ**ಯೆಂಬುದು ಈ ಮಠದ ಮೂಲಸ್ಥಾನವು. ಇದು ಮೈಸೂರಿನಿಂದ ೪೦ ಮೈಲುಗಳ ಅಂತರದ ಮೇಲಿದೆ. ಮೈಸೂರ ಸಂಸ್ಥಾನದಿಂದ ಈ ಮಠಕ್ಕೆ ಗ್ರಾಮ ಭೂಮಿಗಳ ವರ್ಷಾಶನಗಳಿವೆ.

### ೧ ಶ್ರೀ ವ್ಯಾಸರಾಯರು

ಇವರ ಗುರುಗಳು **ಬ್ರಹ್ಮಣ್ಯತೀರ್ಥರು.** ಒಮ್ಮೆ ಇವರು ಸಂಚಾರ ಮಾಡುತ್ತ ಒಂದು ಊರಿಗೆ ದಯಮಾಡಿಸಿದ್ದರು. ಅಲ್ಲಿ ಒಬ್ಬ ಗೃಹಸ್ಥನು ತೀರಿಕೊಂಡಿದ್ದನು. ಆತನ ಹೆಂಡತಿಯು ಪತಿಯೊಡನೆ ಸಹಗಮನಕ್ಕೆ ಸಿದ್ಧಳಾಗಿದ್ದಳು. ಯತಿಗಳಿರುವುದನ್ನು ತಿಳಿದು ಗಂಡನ ಶವವನ್ನು ಹಿಂಬಾಲಿಸುತ್ತಿರುವ ಆ ಹೆಂಗುಸು ಬಂದವಳೇ ಅವರಿಗೆ

ಸಾಷ್ಟಾಂಗವನ್ನು ಹಾಕಿದಳು. ಸ್ವಾಭಾವಿಕವಾಗಿ ಆಗ 'ಸೌಭಾಗ್ಯವತೀ ಭವ' ಎಂಬ ಉದ್ಗಾರಗಳು ಶ್ರೀತೀರ್ಥರ ಬಾಯಿಯಿಂದ ಬಂದು ಬಿಟ್ಟವು. ಸುತ್ತಲಿನವರು ಆಕೆಯ ಸಮಾಚಾರವನ್ನು ತಿಳುಹಿದರು. ಅದಕ್ಕೆ ತೀರ್ಥರು ಶವವನ್ನು ಕೃಪಾದೃಷ್ಟಿಯಿಂದ ಅವಲೋಕಿಸಿ ಮಡಿದಿದ್ದವನನ್ನು ಎಬ್ಬಿಸಲಿಕ್ಕೆ ಹೇಳಿದರು. ಆ ಹೆಂಗುಸಿನ ಕಡೆಯವರು ಹಾಗೆ ಮಾಡುತ್ತಲೇ ನಿದ್ರೆಯಿಂದೆಚ್ಚತ್ತವನಂತೆ ಆತನು ಎದ್ದು ಕುಳಿತನು. ಆಗ ಆ ಹೆಂಗುಸಿಗೆ ಆದ ಆನಂದವನ್ನು ಬರೆದು ಬಣ್ಣಿಸಲಾಸಲ್ಲ.

ಆಕೆಯು ತಿರುಗಿ ತೀರ್ಥರ ಪಾದಗಳಿಗೆ ಭಕ್ತಿಯಿಂದ ಎರಗಿದಳು. ಕೂಡಲೇ ಆಕೆಗೆ ತೀರ್ಥರು 'ಈರ್ವರು ಗಂಡುಗುವರರಾಗುವರೆ'ಂದು ಹರಸಿ ಮೊದಲಿನ ಕೂಸನ್ನು ಮಠಕ್ಕೆ ಕೊಡುವುದೆಂದು ಆಕೆಯನ್ನು ಕೇಳಿದರು. ಆಕೆಯು ಇದಕ್ಕೆ ಆನಂದದಿಂದ ಒಪ್ಪಿದಳು. ಮುಂದೆ ಗುರುಗಳ ದಯೆಯಿಂದ ಅವಳು ಬಸಿರಾಗಿ ಆಕೆಗೆ ಒಂಬತ್ತು ತಿಂಗಳುಗಳು ತುಂಬುತ್ತಲೇ ಹೆರಿಗೆಯ ಸಮಯವನ್ನು ನಿರೀಕ್ಷಿಸಲಿಕ್ಕೆ ಮಠದಿಂದ ವ್ಯವಸ್ಥೆಯಾಯಿತು. ಗಂಡುಗೂಸು ಜನನವಾಗುತ್ತಲೇ ಅದನ್ನು ಕೆಳಕ್ಕೆ ಬೀಳಗೊಡದಲೇ ಮಠದವರು ಅದನ್ನು ಶ್ರೀಗಳ ಬಳಿಗೆ ತೆಗೆದುಕೊಂಡೊಯ್ದರು. ಆ ಕೂಸಿಗೆ ಮುಂದೆ ಸಮಯೋಚಿತ ಸಂಸ್ಕಾರಗಳು ಮಠದಿಂದಲೇ ಮಾಡಲಾಯಿತು. ದೇವರಿಗೆ ಪ್ರತಿದಿನವೂ ಕ್ಷೀರಾಭಿಷೇಕವನ್ನು ಮಾಡಿ ಆ ಹಾಲನ್ನೇ ಕೂಸಿಗೆ ಕುಡಿಸುವ ಏರ್ಪಾಡಾಗಿತ್ತು.

ಕೂಸು ದೊಡ್ಡದಾಗಿ ಅದಕ್ಕೆ ಉಪನಯನಾದಿಗಳು ಮಾಡಿ ಮುಗಿಯಲು ಶ್ರೀ ಬ್ರಹ್ಮಣ್ಯತೀರ್ಥರು ಹುಡುಗನಿಗೆ ಆಶ್ರಮವನ್ನು ಕೊಟ್ಟು ಆತನನ್ನು **ಶ್ರೀಪದ್ಮನಾಭತೀರ್ಥರ** ಮಠದ **ಶ್ರೀ ಲಕ್ಷ್ಮೀನಾರಾಯಣತೀರ್ಥರ (ಶ್ರೀಪಾದರಾಯರ)** ಬಳಿಯಲ್ಲಿ ವಿದ್ಯಾಭ್ಯಾಸಕ್ಕೆಂದು ಇಟ್ಟರು. ಬಾಲ ಯತಿಗಳು ಗುರುಗಳ ಅನುಗ್ರಹದಿಂದ ೧೨ ವರ್ಷಗಳಲ್ಲಿ ವೇದಾಂತಶಾಸ್ತ್ರದಲ್ಲಿ ಬಲು ಮೇಲ್ಮೆಯನ್ನು ಹೊಂದಿದರು. ಆ ಮೇಲೆ ವಿದ್ಯಾ ಮತ್ತು ಆಶ್ರಮಗುರುಗಳೊಡನೆ ಅವರ ದೇಶಸಂಚಾರವು ನಡೆಯಿತು. ಈ ಮೂವರು ಉದ್ದಾಮ ಪಂಡಿತ

ಯತಿಗಳ ಸಂಚಾರವು ದ್ವೈತಮತ ಪ್ರಚಾರಕ್ಕೆ ಬಲು ಅನುಕೂಲವಾಯಿತು.

ಇವರ ಸಂಚಾರದಲ್ಲಿ ಶ್ರೀಪಾಂಡುರಂಗಕ್ಷೇತ್ರವು ಒಮ್ಮೆ ಇವರಿಗೆ ಹಾದಿಯಲ್ಲಿ ಹತ್ತಿತು. ಅಲ್ಲಿ ಒಮ್ಮೆ ಭೀಮಾ ನದಿಯಲ್ಲಿ ಸ್ನಾನ ಮಾಡುತ್ತಿರುವಾಗ ವ್ಯಾಸರಾಯರಿಗೆ **ರುಕ್ಮಿಣೀ ಸತ್ಯಭಾಮಾ ಸಮೇತವಾದ ಶ್ರೀಗೋಪಾಲಕೃಷ್ಣ** ಪ್ರತಿಮೆಯೊಂದು ತಾನಾಗಿಯೇ ದೊರೆಯಿತು. ಕ್ಷೇಮಕಾಂತರಾಜನೂ ಅವನ ಪೂರ್ವಜರಾದ ಪಾಂಡವರೂ ಶ್ರೀಕೃಷ್ಣಪತ್ನಿಯಾದ ಸತ್ಯಭಾಮೆಯೂ ಪೂಜೆಯನ್ನು ಮಾಡಿದ ಪ್ರತಿಮೆಯಿದು. ಆಗ ಆ ಯತಿಗಳಿಗಾದ ಆನಂದವನ್ನು ವರ್ಣಿಸಲಸಾಧ್ಯ. ಆ ದಿನದಿಂದ ಈ ವರೆಗೆ ಆ ಪ್ರತಿಮೆಯ ಪೂಜೆಯು ಶ್ರೀ ವ್ಯಾಸರಾಯರ ಮಠದಲ್ಲಿ ಆಗುತ್ತಲೇ ಇದೆ.

ಈ ರಾಯರು ಸಂಚಾರದಲ್ಲಿದ್ದಾಗ ಅನೇಕ ಸ್ಥಳಗಳಲ್ಲಿ ಶ್ರೀಪ್ರಾಣದೇವರ ಪ್ರತಿಷ್ಠೆಯನ್ನು ಮಾಡುತ್ತಾ ಹೋಗಿರುತ್ತಾರೆ. ಧಾರವಾಡದ ಶುಕ್ರವಾರ ಪೇಟೆಯಲ್ಲಿ ಶ್ರೀರಾಯರ ಪ್ರಾಣದೇವರೆಂದು ಪ್ರಸಿದ್ಧವಾದ ಮೂರ್ತಿಯು ಇವರಿಂದಲೇ ಪ್ರತಿಷ್ಠಿತವಾಗಿದೆ.

ಭೂವೈಕುಂಠವೆಂದು ಹೆಸರು ಪಡೆದ ತಿರುಪತಿಯಲ್ಲಿಯ ಶ್ರೀ ವೆಂಕಟಪತಿಯನ್ನು ಪೂಜಿಸುವ, ಬೇರೆ ಯಾರಿಗೂ ಈ ವರೆಗೆ ಸಿಕ್ಕದಿರುವ ಭಾಗ್ಯವು ಶ್ರೀವ್ಯಾಸರಾಯರಿಗೆ ಒಮ್ಮೆ ದೊರೆಯಿತು. ವೆಂಕಟರಮಣನ ಪೂಜೆಯು ರಾಮಾನುಜೀಯರೊಬ್ಬರ ವಂಶದಲ್ಲಿ ಗಂಡು ಸಂತಾನವಿಲ್ಲದೆ ಪೂಜೆಯೇ ನಿಲ್ಲುವ ವೇಳೆ ಬಂದಾಗಲೇ ರಾಯರಿಗೆ ಇಂತಹ ಸುಸಮಯವು ಸಿಕ್ಕಿತು. ಮುಂದೆ ಅರ್ಚಕರ ವಂಶದಲ್ಲಿ ಒಬ್ಬಳಿಗೆ ಗಂಡು ಕೂಸು ಜನಿಸಿ ದೊಡ್ಡದಾದ ಮೇಲೆ ಮುನ್ನಿನಂತೆ ಪೂಜೆಯು ಸಾಗಿತು. ಈ ಕಾಲದಿಂದ ಶ್ರೀ ವ್ಯಾಸರಾಯ ಮಠದ ಸ್ವಾಮಿಗಳು ತಿರುಪತಿಗೆ ಹೋದಾಗ ವೆಂಕಟರಮಣನ ಪೂಜೆ ಮಾಡುವ ಮರ್ಯಾದೆಯು ಸಿಗಲಾರಂಭಿಸಿತು. ಆ ನಿಯಮವು ಈಗಲೂ ಇದೆ. ಆದರೆ ಬೇರೆ ಮಠದವರಾರಿಗೂ ಈ ಮರ್ಯಾದೆಯು ಇಲ್ಲ.

ಒಮ್ಮೆ ಶ್ರೀವ್ಯಾಸರಾಯರು ತುಂಗಾತೀರದಲ್ಲಿದ್ದು ತಪವನ್ನಾಚ

ರಿಸುತ್ತಿದ್ದರು. ಆಗ **ಕುಹಯೋಗವು** ಪ್ರಾಪ್ತವಾಯಿತು. ಅದು ಹೋಗುವ ವರೆಗೆ ತಾನು ಪಟ್ಟದ ಮೇಲಿರಬಾರದೆಂದು **ಆನೆಗುಂದಿಯರಸನ** ನಿಯಮ. ತಾನಿಲ್ಲದಾಗ ರಾಜ್ಯಕ್ಕೆ ಬೇಕಾಗುವ ಅರಸನನ್ನು ಹುಡುಕುವುದಕ್ಕೆ ಆತನು ಆನೆಯ ಶುಂಡಲಿನಲ್ಲಿ ಮಾಲೆಯನ್ನಿತ್ತನು. ಆ ಆನೆಯು ಮಾಲೆಯನ್ನು ಈ ತಪವಾಚರಿಸುತ್ತ ಕುಳಿತಿರುವ ಯತಿಗಳ ಕೊರಳಲ್ಲಿ ಹಾಕಿತು. ರಾಜ್ಯಸೂತ್ರಗಳನ್ನೆಲ್ಲ ಕೈಕೊಳ್ಳಲು ಆಗ ಎಲ್ಲರೂ ಯತಿಗಳನ್ನು ಬೇಡಿಕೊಂಡರು. ಆದರೆ ಆ ಕಾಲಕ್ಕೆ ಯತಿಗಳು ಆ ಪಶುವಿನ ಕೃತಿಗೆ ಅಷ್ಟೊಂದು ಮಹತ್ವವನ್ನು ಕೊಡಲಿಲ್ಲ. ಆದರೆ ಮತ್ತೆ ಮಾಲೆಯನ್ನು ಕೊಟ್ಟಾಗಲೂ ಮಾಲೆಯು ಮತ್ತೆ ತಮ್ಮ ಕೊರಳಲ್ಲಿಯೇ ಬಿದ್ದುದನ್ನು ನೋಡಿ ಈಶಚಿತ್ತಕ್ಕೆ ಬಾಗಿ ರಾಜಚಿನ್ಹಗಳೊಡನೆ ಶ್ರೀವ್ಯಾಸರಾಯರು ಆನೆಗುಂದಿಯ ಪಟ್ಟವೇರಿದರು. ಬಳಿಕ ತಮ್ಮ ಆಳಿಕೆಯಲ್ಲಿ ಶ್ರೀಗಳು ಅನೇಕ ಭೂದಾನಾದಿಗಳನ್ನು ಮಾಡಿದರು. ಕುಹಯೋಗವು ಮುಗಿದು ರಾಜನು ತಿರುಗಿ ಬಂದಾಗ ಅವನ ರಾಜ್ಯವನ್ನು ಶ್ರೀಗಳು ಅವನಿಗೊಪ್ಪಿಸಿದರು. ಅರಸರಾಗಿ ಆಳಿದುದರಿಂದಲೇ ಶ್ರೀಗಳಿಗೆ ಶ್ರೀವ್ಯಾಸರಾಯರೆಂದು ಕರೆಯಲಾಯಿತು. ದೇವರ ಸೇವೆಯು ಮುಗಿದ ಮೇಲೆ ಈಗಲೂ ಈ ಮಠದ ಯತಿಗಳು ತಲೆಗೆ ಶಾಟಿಯನ್ನು ಸುತ್ತಿಕೊಂಡು ರಾಜಮರ್ಯಾದೆಯನ್ನು ತಮ್ಮ ಶಿಷ್ಯರುಗಳಿಂದ ತೆಗೆದುಕೊಳ್ಳುವ ರೂಢಿಯಿದೆ.

ಶ್ರೀರಾಜೇಂದ್ರರೇ ಈ ಮಠದ ಮೂಲಪುರುಷರಾಗಿದ್ದರೂ ಶ್ರೀವ್ಯಾಸರಾಯರ ಮಹಿಮಾತಿಶಯದಿಂದ ಅವರ ಹೆಸರೇ ಈ ಮಠಕ್ಕೆ ಬಿದ್ದಿತು. ಶ್ರೀ ವ್ಯಾಸರಾಯರು ಉತ್ತರಾದಿ ಮಠದ **ಶ್ರೀ ರಘುನಾಥತೀರ್ಥ, ರಘುವರ್ಯತೀರ್ಥ, ರಘೂತ್ತಮತೀರ್ಥ, ವೇದವ್ಯಾಸತೀರ್ಥ** ಮತ್ತು **ಶ್ರೀ ರಾಘವೇಂದ್ರರ** ಮಠದ **ಸುರೇಂದ್ರ, ವಿಜಯೀಂದ್ರ** ತೀರ್ಥರ ಸಮಕಾಲದವರು.

ಇವರು ಸಂಸ್ಥಾನ ಪೂಜೆಯನ್ನು ಮಾಡಿದ ೫೦ ವರ್ಷಗಳಲ್ಲಿ ಕೆಳಗಿನ ಗ್ರಂಥಗಳನ್ನು ರಚಿಸಿದ್ದಾರೆ.

೧) ಚಂದ್ರಿಕಾ......................ತತ್ವಪ್ರಕಾಶದ ಟಿಪ್ಪಣಿ

೨) ಮಂದಾರಮಂಜರಿ ............ ಉಪಾಧಿಖಂಡನದ ಟಿಪ್ಪಣಿ
೩) ಮಾಯಾವಾದ ಖಂಡನದ ಟಿಪ್ಪಣಿ
೪) ಪ್ರಪಂಚ ಮಿಥ್ಯಾತ್ವಾನುಮಾನ ಖಂಡನದ ಟಿಪ್ಪಣಿ
೫) ತತ್ವದ್ಯೋತದ ಟಿಪ್ಪಣಿ
೬) ತರ್ಕತಾಂಡವ ............... ಪ್ರಾಚೀನ ನ್ಯಾಯಮತ ಖಂಡನ (ಸ್ವತಂತ್ರ ಗ್ರಂಥ)
೭) ನ್ಯಾಯಾಮೃತ ೪ ಪರಿಚ್ಛೇದ ......... ಪರಮತ ಖಂಡನ ಪೂರ್ವಕವಾದ ಗ್ರಂಥ
೮) ಭೇದೋಜ್ಜೀವನ........... ಭೇದ ಸಾಧನ

**ಸೋದೆಯ ಶ್ರೀ ವಾದಿರಾಜರು** ಇವರ ಬಳಿಯಲ್ಲಿಯೇ ಅಧ್ಯಯನ ಮಾಡಿರುತ್ತಾರೆ. ಇವರು ವೃಂದಾವನಸ್ಥರಾದುದು ೧೫೬೦ನೇ ಶಾರ್ವರಿ ಸಂವತ್ಸರದ ಫಾಲ್ಗುಣ ವದ್ಯ ೪ ಗುರುವಾರ. ಇವರ ವೃಂದಾವನವು ಆನೆಗುಂದಿಯಲ್ಲಿ ತುಂಗಾತೀರದಲ್ಲಿ ಆಗಿದೆ. ಇವರು **ಪ್ರಲ್ಹಾದರ ಅವತಾರ**ವೆಂದು ಪ್ರಸಿದ್ಧಿಯಿದೆ. ಆನೆಗುಂದಿಯು ಬಳ್ಳಾರಿ ಜಿಲ್ಹೆಯ ಹೊಸಪೇಟೆಯಿಂದ ೮-೯ ಮೈಲುಗಳ ಮೇಲಿದೆ.

## ೨ ಶ್ರೀವಿಜಯೀಂದ್ರತೀರ್ಥರು



ಪಟ್ಟ:- ೧೨-೧೦ ೧೪೬೧ನೇ ವಿಕಾರಿಯಿಂದ ೨೮ ೩-೧೫೧೭ನೇ ಸಂವತ್ಸರದ ವರೆಗೆ

ಇವರು ಶ್ರೀರಾಘವೇಂದ್ರ ಸ್ವಾಮಿಗಳ ಪರಮ ಗುರುಗಳು. ಇವರ ತಂದೆಯ ಅಭ್ಯಾಸವು ಶ್ರೀವ್ಯಾಸರಾಯರ ಬಳಿಯಲ್ಲಿ ಆಯಿತು. ಇವರ ತಂದೆಯು ಸಂತತಿಯಿಲ್ಲವೆಂದು ಶ್ರೀವ್ಯಾಸರಾಯರನ್ನು ಪ್ರಾರ್ಥಿಸಿಕೊಳ್ಳಲು ಮೊದಲಿನವನನ್ನು ಮಠಕ್ಕೆ ಕೊಡುವುದೆಂದು ಕಟ್ಟಳೆಯನ್ನು ಹಾಕಿ ಶ್ರೀರಾಯರು ಅವರನ್ನು ಅನುಗ್ರಹಿಸಿದರು. ಮೊದಲ ಮಗನೇ ಮೇಲಿನ **ವಿಜಯೀಂದ್ರರು**. ಅವರ ಪೂರ್ವಾಶ್ರಮದ ಹೆಸರು **ವಿಠ್ಠಲಾಚಾರ್ಯರು.** ಇವರ ಜನನದ ವೇಳೆಯಲ್ಲಿಯ ಎಲ್ಲ ವ್ಯವಸ್ಥೆಯು ಮಠದಿಂದಲೇ ಆಗಿದ್ದಿತು. ಬಂಗಾರದ ಹರಿವಾಣದಲ್ಲಿಯೇ

ಇವರ ಜನನವಾಯಿತು. ಮುಂದೆ ಈ ಕೂಸು ಮಠದಿಂದಲೇ ದೊಡ್ಡ ದಾಗಿ ಬೆಳೆದು ಶ್ರೀವ್ಯಾಸರಾಯರಲ್ಲಿಯೇ ಓದಿ ೬೪ ವಿದ್ಯೆಗಳಲ್ಲಿಯೂ ಪಾಂಡಿತ್ಯವನ್ನು ಪಡೆಯಿತು.

ವಿಠ್ಠಲಾಚಾರ್ಯರ ಆಗಿನ ಮಹಿಮೆಯನ್ನು ಕೇಳುವುದೇನು. ಅಗ್ನಿಸ್ತಂಭಾದಿ ವಿದ್ಯೆಗಳಲ್ಲಿಯೂ ಅವರನ್ನು ಸರಿಗಟ್ಟುವವರಾರೂ ಆಗ ಇದ್ದಿಲ್ಲ. ಅವರಿಗೆ ಚಿಕ್ಕಂದಿನಲ್ಲಿಯೇ ಆಶ್ರಮವಾಗಿದ್ದಿತು. ಇವ ರನ್ನು ತಮ್ಮ ಮುಂದಿನ ಪಟ್ಟಕ್ಕೆ ಕುಳ್ಳಿರಿಸುವುದೆಂದು ಶ್ರೀರಾಘ ವೇಂದ್ರ ಮಠದ ಶ್ರೀಸುರೇಂದ್ರ ಸ್ವಾಮಿಗಳ ಮನೀಷೆಯು. ಇದಕ್ಕಾ ಗಿಯೇ ಅವರೊಮ್ಮೆ ಶ್ರೀರಂಗಕ್ಕೆ ಶ್ರೀವ್ಯಾಸರಾಯರಿದ್ದಲ್ಲಿಗೆ ಬಂದರು. ಒಂದೆಡೆಯಲ್ಲಿಳಿದು ಅರ್ಚನೆಯ ತುಳಸಿಗಾಗಿ ಶ್ರೀವ್ಯಾಸರಾಯರ ತುಳ ಸಿಯ ತೋಟಕ್ಕೆ ಶಿಷ್ಯರನ್ನು ಕಳಿಸಿದರು. ಆ ಶಿಷ್ಯರು ತೋಟಕ್ಕೆ ಹೋದರು. ಆದರೆ ಅವರಿಗೆ ತುಳಸಿಯು ಸಿಕ್ಕಲಿಲ್ಲ. ತೋಟಕಾಯು ವವರು ಅವರನ್ನು ತಡೆದುಬಿಟ್ಟರು. ಶಿಷ್ಯರು ತಿರುಗಿ ಬಂದುದನ್ನು ಕಂಡು ಶ್ರೀಸುರೇಂದ್ರರು ಮನಸ್ಸಿನಿಂದಲೇ ಶ್ರೀವ್ಯಾಸರಾಯರ ತೋಟದ ತುಳಸಿಯನ್ನು ದೇವರಿಗೆ ಏರಿಸಿ ಪೂಜೆಯನ್ನು ಮುಗಿಸಿದರು. ತುಳಸಿಯು ನಿರ್ಮಾಲ್ಯವಾದುದು ಶ್ರೀವ್ಯಾಸರಿಗೆ ಅಪರೋಕ್ಷದಿಂದ ತಿಳಿಯಿತು. ಆಗಲೇ ನಡೆದ ವೃತ್ತಾಂತವನ್ನು ಚೆನ್ನಾಗಿ ತಿಳಿದು ಕೊಂಡು ರಾಯರು ಶ್ರೀಸುರೇಂದ್ರರನ್ನು ಮಠಕ್ಕೆ ಕರೆಯಿಸಿಕೊಂ ಡರು. ಇಬ್ಬರು ಯತಿಗಳ ದೇವರ ಪೂಜೆಯು ಮಾಡಿ ಮುಗಿಯಿತು. ಊಟದ ಕಾಲಕ್ಕೆ ನನಗೆ ಬೇಕಾದ ವಸ್ತುವನ್ನು ನನಗೆ ಕೊಟ್ಟರೆ ನಾನು ಊಟಮಾಡುವೆನೆಂದು ಶ್ರೀಸುರೇಂದ್ರರು ನುಡಿದರು. ಮತ್ತೊ ಮ್ಮೆಯೂ ಅವರು ಬೇಡಿದರು. ಶ್ರೀಸುರೇಂದ್ರರ ಆಗ್ರಹವನ್ನು ಮನ್ನಿಸಿ ಶ್ರೀವ್ಯಾಸರಾಯರು ಶ್ರೀ ವಿಜಯೀಂದ್ರರನ್ನು ಶ್ರೀ ಸುರೇಂದ್ರ ರಿಗೆ ಒಪ್ಪಿಸಿಬಿಟ್ಟರು.

ಇವರು ಪಟ್ಟಕ್ಕೆ ಕುಳಿತು ೫೫ ವರ್ಷ ಸಂಸ್ಥಾನವನ್ನು ಆಳಿದರು. ಆ ಅವಧಿಯಲ್ಲಿ ಮಧ್ವಮತ ಪ್ರಸಾರವನ್ನಂತೂ ಇಂದ್ರರು ಬಹಳ ವಾಗಿ ಮಾಡಿದರು. ಇವರ ಸರಿಜೋಡಿಯ ಪ್ರತಿಸ್ಪರ್ಧಿಯು ಅಪ್ಪಯ್ಯ

ದೀಕ್ಷಿತರು. ಪ್ರತಿಯೊಂದು ವಿದ್ಯೆಯಲ್ಲಿಯೂ ಇವರು ವಿಜಯೀಂದ್ರರಿಂದ ಪರಾಜಯವನ್ನು ಹೊಂದಿದರು. ಇದರಿಂದಲೇ ಇಂದ್ರರ ಕೀರ್ತಿಯು ದಿಗಂತಗಳಲ್ಲಿ ವ್ಯಾಪಿಸಿತು. ಇವರು ಒಟ್ಟಿಗೆ ೧೦೪ ಗ್ರಂಥಗಳನ್ನು ಮಾಡಿರುವರಂತೆ. ಅವುಗಳೊಳಗಿನ ಸಿಕ್ಕ ಗ್ರಂಥಗಳನ್ನು ಕೆಳಗೆ ಕೊಡಲಾಗಿದೆ

೧) ಋಕ್ ಪ್ರಸ್ಥಾನ
೨) ಪ್ರಮೇಯ ದೀಪಿಕಾ ಟಿಪ್ಪಣಿ
೩) ನ್ಯಾಯ ದೀಪಿಕಾ ,,
೪) ಉಪನಿಷತ್ ಪ್ರಸ್ಥಾನ ,,
೫) ಸೂತ್ರ ಪ್ರಸ್ಥಾನ ,,
೬) ಮಾಯಾವಾದ ಖಂಡನ ಮುಂತಾದ ದಶಪ್ರಕರ್ಣಗಳಿಗೆ ,,
೭) ಅಪ್ಪಯ್ಯಕಪೋಲಚಪೇಟಿಕಾ
೮) ಉಪಸಂಹಾರ ವಿಜಯ
೯) ಮಧ್ವತಂತ್ರಭೂಷಣ
೧೦) ನಯಮಂಜರಿ ಬ್ರಹ್ಮಸೂತ್ರ ವ್ಯಾಖ್ಯಾನ
೧೧) ಚಕ್ರಮೀಮಾಂಸ
೧೨) ಆಮೋದ (ನ್ಯಾಯಾಮೃತ ವ್ಯಾಖ್ಯಾನ)
೧೩) ನಾರಾಯಣ ಶಬ್ದಾರ್ಥ ವಚನ
೧೪) ಬ್ರಹ್ಮಸೂತ್ರಾರ್ಥ ಸಂಗ್ರಹ
೧೫) ಕಂಟಕೋದ್ಧಾರ
೧೬) ಪ್ರಮಾಣ ಪದ್ಧತಿ ಟಿಪ್ಪಣಿ
೧೭) ಭೇದವಿದ್ಯಾವಿಲಾಸ
೧೮) ನಯಮುಕುರಾ
೧೯) ಮೀಮಾಂಸಾ ನ್ಯಾಯಮಾಲಾ
೨೦) ನ್ಯಾಯಮೌಕ್ತಿಕಮಾಲಾ
೨೧) ಅಧಿಕರಣಮಾಲಾ (ನ್ಯಾಯಾಮೃತದಲ್ಲಿಯ ಮೀಮಾಂಸದ ವ್ಯಾಖ್ಯಾನ
೨೨) ನಯಚಂಪಕಮಾಲಾ
೨೩) ಪರತತ್ವಪ್ರಕಾಶಿಕಾ

ಶ್ರೀ ವಿಜಯೀಂದ್ರರು ಕಡೆಗೆ ಕುಂಭಘೋಣದಲ್ಲಿ ೧೫೧೭ನೇ ಜೇಷ್ಠ ವದ್ಯ ೧೩ ದಿವಸ ನಾರಾಯಣಧ್ಯಾನಪರರಾದರು.

# ಶ್ರೀ ರಾಘವೇಂದ್ರ ಸ್ವಾಮಿಗಳ ಮತಭೇದವು



ಶ್ರೀಮದುತ್ತರಾದಿ ಮಠದ **೧೦ನೆಯ ಪೀಠದಲ್ಲಿದ್ದ ಶ್ರೀರಾಮ ಚಂದ್ರತೀರ್ಥರು ಶ್ರೀ ವಿಬುಧೇಂದ್ರ**ರೆಂಬವರಿಗೆ ಆಶ್ರಮವನ್ನು ಕೊಟ್ಟು ಸಂಸ್ಥಾನದ ಶ್ರೀಮಟ್ಟೀಕಾಕೃತ್ಪಾದಕರಾರ್ಚಿತ ಜಯರಾಮ ಮುಂತಾದ ಪ್ರತಿಮೆ ಮತ್ತು ಶಾಲಗ್ರಾಮಾದಿಗಳಿಂದ ಸಹಿತವಾಗಿ ಅವರನ್ನು ಸಂಚಾರಕ್ಕೆಂದು ಕಳುಹಿದರೆಂದು ಹಿಂದೆ ಬಂದಿದೆ. ಅವರು ಉದ್ದಾಮ ಪಂಡಿತರಿದ್ದರು. ಗುರುಗಳ ಆಜ್ಞಾಪತ್ರಗಳಿಗೆ ಉತ್ತರ ವನ್ನು ಕೂಡ ಕೊಡದೆ ವಿದ್ಯಾಮದದಿಂದ ಸಂಸ್ಥಾನವನ್ನು ದುರ್ಲಕ್ಷಿಸಿ ಅವರು ಸಂಚರಿಸತೊಡಗಿದ್ದರು. ಗುರುಗಳ ನಿರ್ಯಾಣ ಸಮಯವು ಸಮೀಪಿಸಿದೆಯೆಂದು ತಿಳಿಸಿದಾಗಲೂ ಅವರು ಸಂಸ್ಥಾನಕ್ಕೆ ಬರಲು ಮನಸ್ಸು ಮಾಡಲಿಲ್ಲ. ಆದುದರಿಂದ ಶ್ರೀರಾಮಚಂದ್ರತೀರ್ಥರು ನಿರುಪಾಯರಾಗಿ ಯರಗೋಳೆಂಬ ಹಳ್ಳಿಯಲ್ಲಿ **ಶ್ರೀ ವಿದ್ಯಾನಿಧಿ**ಗಳಿಗೆ ಆಶ್ರಮವನ್ನು ಕೊಟ್ಟುಬಿಟ್ಟರು. ಆದರೆ ವಿಬುಧೇಂದ್ರರು ಆಶ್ರಮ ಜ್ಯೇಷ್ಠರೂ ಭಕ್ತಿವೈರಾಗ್ಯಯುಕ್ತರೂ ದಿಗಂತ ಪಂಡಿತರೂ ಇರುವುದ ರಿಂದ ವಿದ್ಯಾನಿಧಿಗಳಿಗಿಂತ ಪಟ್ಟಕ್ಕೆ ಅವರೇ ಹೆಚ್ಚು ಯೋಗ್ಯರೂ ಬಾಧ್ಯರೆಂಬ ವಿಚಾರದಿಂದ ಶ್ರೀರಾಮದೇವರ ಪೆಟ್ಟಿಗೆಯನ್ನು ಯರ ಗೋಳದ ಧರ್ಮಣ್ಣರೆಂಬವರ ಮನೆಯಲ್ಲಿ ಹೂಳಿಟ್ಟು ಆರು ತಿಂಗಳುಗಳ ಗಳ ಮೇಲೂ ವಿಬುಧೇಂದ್ರರು ಬಾರದಲ್ಲಿ ಅದನ್ನು ವಿದ್ಯಾನಿಧಿಗಳಿಗೆ ಒಪ್ಪಿಸುವುದೆಂದು ನಾಲ್ಕು ಜನ ಪ್ರಮುಖರಿಗೆ ಹೇಳಿ ಅವರು ವೃಂದಾ ವನಸ್ಥರಾದರು. ಜನರು ಆರು ತಿಂಗಳುಗಳ ಒಳಗಾಗಿಯೇ ವಿಬು ಧೇಂದ್ರರನ್ನು ಕಂಡು ಸಂಸ್ಥಾನವನ್ನು ಸ್ವೀಕರಿಸಬೇಕೆಂದು ಬೇಡಿ ಕೊಂಡರು. ತಮ್ಮ ಹೊರತಾಗಿ ಪೀಠಕ್ಕೆ ಯೋಗ್ಯರಾರೂ ಇಲ್ಲವೇ ಇಲ್ಲ; ಯಾವಾಗಲಾದರೂ ತಮಗೇ ಪೀಠವು ಸಿಗುವುದೆಂಬ ವಿಚಾರ ದಿಂದ ವಿಬುಧೇಂದ್ರರು ಈಗಲೂ ಸಂಸ್ಥಾನಕ್ಕೆ ಬರಲು ಅಲ್ಲಗಳೆದರು. ಜನರು ನಿರಾಶರಾಗಿ ಯರಗೊಳಕ್ಕೆ ಬಂದು ಆರು ತಿಂಗಳುಗಳಾಗು ತ್ತಲೇ ವಿದ್ಯಾನಿಧಿಗಳಿಗೆ ಪಟ್ಟವನ್ನೊಪ್ಪಿಸುವ ಕೆಲಸಕ್ಕೆ ಕೈಹಾಕಿದರು.

ಉತ್ಸವಕ್ಕೆ ಆರಂಭವಾಯಿತು. ಈ ಸುದ್ದಿಯನ್ನು ಹೇಗೋ ತಿಳಿದು ವಿಬುಧೇಂದ್ರರು ಅಲ್ಲಿಗೆ ಬಂದರು. ಬಳಿಕ ಆ ಊರ ಪ್ರಮುಖರು ಇಬ್ಬರು ಯತಿಗಳಿಗೂ ಸ್ನಾನಮಾಡಿಕೊಂಡು ಬಂದು ಶ್ರೀರಾಮರ ಪ್ರಾರ್ಥನೆಯನ್ನು ಮಾಡಲಿಕ್ಕೆ ಕೇಳಿಕೊಂಡರು. ಆಗ ಪ್ರಾರ್ಥನೆಯಿಂದ ದೇವರ ಪೆಟ್ಟಿಗೆಯು ತನಗೆ ತಾನೇ ಮೇಲಕ್ಕೆದ್ದು ಬರುತ್ತಿದೆಯೋ ಅವರಿಗೆ ಸಂಸ್ಥಾನವೆಂದು ನಿರ್ಣಯ ಮಾಡಿ ಹೇಳಿದರು. ವಿಬುಧೇಂದ್ರರ ಪ್ರಾರ್ಥನೆಯು ಮುಗಿಯಿತು. ಪೆಟ್ಟಿಗೆಯ ಸುಳಿವು ಕಾಣಲಿಲ್ಲ. ಆದರೆ ವಿದ್ಯಾನಿಧಿಗಳ ಪ್ರಾರ್ಥನೆಯು ಸಾಗಿರುತ್ತಲೇ ಶ್ರೀರಾಮರ ಪೆಟ್ಟಿಗೆಯು ಜಿಗಿದು ಮೇಲಕ್ಕೆದ್ದು ಬಂದಿತು. ಮುಂದೆ ಆಗುವ ವ್ಯವಸ್ಥೆಯು ಆಗಿಹೋಯಿತು. ವಿಬುಧೇಂದ್ರರು ಆಗ ಹೊಸದೊಂದು ಮಠವನ್ನೇ ಸ್ಥಾಪಿಸಿದರು. (ಶಕೆ ೧೪೯೮.) ಈ ಮಠದ ಪೀಳಿಗೆಯಲ್ಲಿ ಮುಂದೆ **ಶ್ರೀ ರಾಘವೇಂದ್ರ**ರು ಬಹು ಖ್ಯಾತಿಯನ್ನು ಹೊಂದಿದುದರಿಂದ ಈ ಮಠಕ್ಕೆ **ರಾಘವೇಂದ್ರಸ್ವಾಮಿಗಳ ಮಠ**ವೆಂದು ಹೆಸರಾಯಿತು. ಈ ಮಠದ ಮೂಲಸ್ಥಳವು **ನಂಜಿನಗುಡಿ.** ಮೈಸೂರಿಂದ ೧೮ ಮೈಲುಗಳ ಮೇಲಿದೆ. ಈ ಊರಿಗೆ **ಗರಳಪುರೀ, ಪರಶುರಾಮ ಕ್ಷೇತ್ರ**ವೆಂದೂ ಪ್ರಸಿದ್ಧಿಯಿದೆ. ಈ ಊರೂ ಇನ್ನೂ ಕೆಲವು ಗ್ರಾಮಗಳೂ ಮಠಕ್ಕೆ ಮೈಸೂರ ಸಂಸ್ಥಾನದಿಂದ ಉಂಬಳಿಯಾಗಿ ದೊರಕಿವೆ. ಮೈಸೂರ ಅರಸರಿಂದ ೪೫೦ ರೂಪಾಯಿಗಳ ಮಾಸಾಶನವು ಈಗಲೂ ಮಠಕ್ಕೆ ದೊರೆಯುತ್ತಲಿದೆ.

## ೧ ಶ್ರೀ ರಾಘವೇಂದ್ರಸ್ವಾಮಿಗಳು

(ಮಂತ್ರಾಲಯ ಮುನಿಗಳು)

**ಸಂಸ್ಥಾನ ಪಟ್ಟ: ೨-೧೨-೧೫೪೫ನೇ ರುಧಿರೋದ್ಗಾರಿಯಿಂದ ೧೭-೫-೧೫೯೩ನೇ ವಿರೋಧಿಕೃತುವಿನ ವರೆಗೆ**

" ಶ್ರೀಮದಾನಂದ ತೀರ್ಥಾಚಾರ್ಯರ ಗ್ರಂಥಗಳಲ್ಲಿಯ ಸುಧೆಯನ್ನು ಸವಿಯಲು ಶ್ರೀಮಟ್ಟೀಕಾಕೃತ್ಪಾದರು ಸಹಾಯವಾದರು. ಈ ಟೀಕಾರಾಯರ ಟೀಕೆಯ ತಿರುಳನ್ನು ಜನರಿಗೆ ತಿನಿಸಿದವರು

ಶ್ರೀರಾಘವೇಂದ್ರರು;'' ಎಂದು ಎಲ್ಲೆಡೆಗಳಲ್ಲಿಯೂ ಖ್ಯಾತಿಯುಂಟು. ಇಂತಹರ ವರ್ಣನೆಯನ್ನು ಎಷ್ಟು ಮಾಡಿದರೂ ಅದು ಮುಗಿಯಲಾರದು. ಇವರು **ಪ್ರಲ್ಹಾದನ ಅವತಾರ**ವೆಂಬ ಪ್ರತೀತಿಯು ಜನರಲ್ಲಿ ದಟ್ಟವಾಗಿ ಹಬ್ಬಿದೆ.

ಇವರ ಪೂರ್ವಿಕರು ಕುಂಭಕೋಣೆಯವರು. ಇವರ ಮುತ್ತಜ್ಜ **ಕೃಷ್ಣಭಟ್ಟರು.** ಅಜ್ಜ **ಕನಕಾಚಲಭಟ್ಟ**ರು. ತಂದೆ **ತಿಮ್ಮಣ್ಣಭಟ್ಟರು.** ತಾಯಿಯು **ಗೋಪಮ್ಮ**. ಇವರ ಮನೆತನವು **ವೀಣೆಯುವರ ಮನೆತನ**ವೆಂದು ಪ್ರಸಿದ್ಧಿ. ಇವರ ಮುತ್ತಜ್ಜ ಕೃಷ್ಣಭಟ್ಟರು ಕುಂಭಕೋಣೆಯು ಸ್ಥಳವನ್ನು ಬಿಟ್ಟು ವಿಜಯನಗರದ ಅರಸರ ಓಲಗದಲ್ಲಿ ಪ್ರಸಿದ್ಧ ವೈಯಾಣಿಕರಾಗಿದ್ದರೆಂದು ಇತಿಹಾಸ. ವಿಜಯನಗರವು ಹಾಳಾಗುವ ಸುಮಾರಿಗೆ ಆ ಪಟ್ಟಣವನ್ನು ತಿಮ್ಮಣಭಟ್ಟರೇ ಬಿಟ್ಟು ಕಂಚಿ, ಮಧುರೆಯ ಕಡೆಗೆ ಹೋದರು.

ಗೋಪಮ್ಮ ತಿಮ್ಮಣಭಟ್ಟರಿಗೆ ಬಹು ದಿನಗಳಾದರೂ ಮಕ್ಕಳಾಗಲಿಲ್ಲ. ಆಗವರು ತಿರುಪತಿಯ ತಿಮ್ಮಪ್ಪನನ್ನು ಅನನ್ಯಭಾವದಿಂದ ಮೊರೆಹೊಕ್ಕರು. ಶ್ರೀನಿವಾಸನ ಅನುಗ್ರಹದಿಂದ **ವೆಂಕಮ್ಮ**ನೆಂಬ ಮಗಳೂ **ಗುರುರಾಜ**ನೆಂಬ ಮಗನೂ ಹೀಗೆ ಇಬ್ಬರು ಮಕ್ಕಳು ಹುಟ್ಟಿದರು. ವೆಂಕಮ್ಮನ ಮದುವೆಯು ಮಧುರೆಯ **ಲಕ್ಷ್ಮೀ ನೃಸಿಂಹಾಚಾರ್ಯ**ರೆಂಬವರೊಡನೆ ಆಯಿತು. ಮಗಳು ಅತ್ತೆಯ ಮನೆಗೆ ಹೋದಳು. ಮುಂದೆ ೭-೮ ವರ್ಷಗಳ ವರೆಗೂ ಗೋಪಮ್ಮನಿಗೆ ಮತ್ತೆ ಮಕ್ಕಳಾಗಲಿಲ್ಲ. ಆಗ ಗಂಡಹೆಂಡಿರಿಗೆ 'ಗುರುರಾಜನು ಗುರುಕುಲಕ್ಕೆ ಹೋಗಿಬಿಟ್ಟರೆ ಮನೆಯು ಬರಿದಾಗುವುದಲ್ಲ, ಎಂಬ ಚಿಂತೆಯು ಬಾಧಿಸತೊಡಗಿತು. ಮತ್ತೆ ಇಬ್ಬರೂ ತಿರುಪತಿಗೆ ಹೋಗಿ ಶ್ರೀನಿವಾಸನನ್ನು ಸೇವಿಸಿದರು. ಒಂದು ವರುಷವಾಯಿತು. ಶ್ರೀ ಶ್ರೀನಿವಾಸನು ಶಂಖಚಕ್ರಗದಾಪದ್ಮಗಳಿಂದ ವನಮಾಲೆಯಾಗಿ ತಿಮ್ಮಣ್ಣಭಟ್ಟರಿಗೆ ಕಾಣಿಸಿಕೊಂಡು "ಭಕ್ತಾಗ್ರಣಿಯೂ ನಿನ್ನ ಕುಲದ ಕೀರ್ತಿಯನ್ನು ಬೆಳಗುವವನೂ ಸಕಲ ವಿದ್ಯಾವಿಶಾರದನೂ ಆದ ಮಗನು ನಿನಗೆ ಹುಟ್ಟುವನು'' ಎಂದು ಹೇಳಿ ಅದೃಶ್ಯನಾದನು. ಸತಿ

ಪತಿಗಳು ಆನಂದಬಾಷ್ಪಗಳನ್ನುದಿರಿಸುತ್ತ ಊರಿಗೆ ಬಂದರು. ಶ್ರೀನಿವಾಸನ ಅನುಗ್ರಹಫಲವಾಗಿ ಗಂಡುಗೂಸು ಹುಟ್ಟಿತು. ಅದರ ಹೆಸರು **ವೆಂಕಣಭಟ್ಟ.**

ತಿಮ್ಮಣ್ಣಭಟ್ಟರು ಬಲು ಬಡವರು. ಆದುದರಿಂದಲೇ ಕೂಸು ಬಡತನದಲ್ಲಿಯೇ ಬೆಳೆಯಿತು. ದುರ್ದೈವದಿಂದ ಭಟ್ಟರು ವೆಂಕಣ್ಣನನ್ನು ಬಿಟ್ಟು ಅವನು ೫-೬ ವರುಷದವನಿರುವಾಗಲೇ ಕಾಲವಶರಾದರು. ಗುರುರಾಜನು ಕುಲಪರಂಪರಾಗತವಾದ ವೀಣೆಯ ವಿದ್ಯೆಯಿಂದಲೇ ಹೊಟ್ಟೆ ಹೊರೆದುಕೊಳ್ಳಲು ದೇಶದೇಶ ತಿರುಗತೊಡಗಿದನು. ತಮ್ಮನ ಉಪನಯನವನ್ನು ಮಾಡಿ ಆತನನ್ನು ಭಾವನ ಕಡೆಗೆ ವಿದ್ಯಾಭ್ಯಾಸಕ್ಕೆಂದು ಒಪ್ಪಿಸಿಬಿಟ್ಟನು. ಅಲ್ಲಿ ವೆಂಕಣ್ಣನು ೧೮ ವರ್ಷ ವ್ಯಾಸಂಗವನ್ನು ಮಾಡಿ ನ್ಯಾಯ, ವೇದ, ವ್ಯಾಕರಣ, ವೇದಾಂತಗಳಲ್ಲಿ ಪಾಂಡಿತ್ಯವನ್ನು ಸಂಪಾದಿಸಿದನು. ಸುಧಾಪಾಠವೊಂದಾಗುವುದು ಉಳಿಯಿತು. ಬಳಿಕ ಆತನು ಅಣ್ಣನೂರಿಗೆ ಬಂದು ವೀಣಾವಿದ್ಯೆಯಲ್ಲಿಯೂ ಪ್ರವೀಣನಾದನು. ಸುಧೆಯ ಕ್ಷುಧೆಯು ಬಲವಾಗಿ ಬಾಧಿಸಿ ಅಣ್ಣನ ಅನುಮತಿಯಿಂದ ಕಡೆಗೆ ವೆಂಕಣಭಟ್ಟನು **ಶ್ರೀ ಸುಧೀಂದ್ರ**ರ ಕಡೆಗೆ ಕುಂಭಘೋಣಕ್ಕೆ ಬಂದನು. ಸುಧೀಂದ್ರರು ಆನಂದದಿಂದ ಭಟ್ಟನನ್ನು ಬರಮಾಡಿಕೊಂಡು ಆತನಿಗೆ ಬೇರೆ ಶಿಷ್ಯರೊಂದಿಗೆ ಸುಧಾಪಾಠಕ್ಕೆ ಮೊದಲು ಮಾಡಿದರು.

ಸಹಪಾಠಿಗಳ ಕಣ್ಣು ಭಟ್ಟನ ಮೇಲೆ ಬಹಳ. ಅವನನ್ನವರು ಪರಿಪರಿಯಿಂದ ಕಾಡುತ್ತಿದ್ದರು. ಇದಾವುದನ್ನೂ ಬಗೆಯದೆ ವೆಂಕಣಭಟ್ಟನು ಸದಾ ತನ್ನ ಅಭ್ಯಾಸಚಿಂತನೆಯಲ್ಲಿಯೇ ಇರುತ್ತಿದ್ದನು. ತರಗೆಲೆಗಳನ್ನು ಕೂಡಿಹಾಕಿ ಅವಕ್ಕೆ ಉರಿಹಚ್ಚಿ ಆ ಬೆಳಕಿನಲ್ಲಿ ತನ್ನ ದಿನದ ಪಾಠವನ್ನು ಚಿಂತಿಸಿ **"ಪರಿಮಳ"**ವೆಂಬ ಹೆಸರಿನ ಪುಸ್ತಕದಲ್ಲಿ ಬರೆದಿಡುತ್ತಿದ್ದನು. ಇತ್ತ ಸಹಪಾಠಿಗಳ ವಿರೋಧವು ಬಲವಾಯಿತು. ಅಲ್ಲದ ಸಲ್ಲದ ದೂರುಗಳನ್ನು ಅವರು ವೆಂಕಣಭಟ್ಟನ ವಿಷಯವಾಗಿ ಗುರುಗಳೆಡೆಯಲ್ಲಿ ತರತೊಡಗಿದರು.

ಒಮ್ಮೆ ಪಾಠದಲ್ಲಿಯ ಒಂದು ಸಂದಿಗ್ಧವಾದ ವಾಕ್ಯಾರ್ಥವನ್ನು ವಿವರಿಸದೆ ಸ್ವಾಮಿಗಳು ಅದನ್ನು ಯೋಚಿಸಿಕೊಂಡು ಬನ್ನಿರೆಂದು ಎಲ್ಲರಿಗೂ ಹೇಳಿಕಳುಹಿದ್ದರು. ನಮ್ಮ ವೆಂಕಣ್ಣನ ಪರಿಮಳಕ್ಕೆ ಆ ರಾತ್ರಿಯೇ ಅದು ವಿಷಯವಾಯಿತು. ಆ ವಿಷಯವನ್ನು ಆತನು ವಿಶದವಾಗಿ ಬರೆದಿಟ್ಟನು. ಬೆಳಕಿಗಾಗಿ ಹೊತ್ತಿಸಿ ಉಳಿದ ತರಗೆಲೆಗಳ ಮಧ್ಯದಲ್ಲಿಯೇ ಬರೆದ ಪುಸ್ತಕವನ್ನಿಟ್ಟುಕೊಂಡು ಆತನು ಆ ರಾತ್ರಿ ಮಲಗಿದ್ದನು. ಆ ದಿನ ಗುರುಗಳು ಯಾರಿಗೂ ಕಾಣದಂತೆ ಅವನಿದ್ದಲ್ಲಿಗೆ ನಡುರಾತ್ರಿಯಲ್ಲಿಯೇ ಬಂದು ಅವನ ಬದಿಗಿಟ್ಟಿರುವ ಪರಿಮಳ ಪುಸ್ತಕವನ್ನು ಎತ್ತಿನೋಡಿ ಬೆರಗಾದರು. ತಾವು ನಿಲ್ಲಿಸಿದ್ದ ಸಂದಿಗ್ಧ ವಿಷಯದ ವಿವರಣೆಯನ್ನು ಆ ಪುಸ್ತಕದಲ್ಲಿ ನೋಡಿದ ಮೇಲಂತೂ ಅವರು ಶಿಷ್ಯನ ಕುಶಲತೆಗೆ ತಲೆದೂಗಿದರು. ಆಗವರು ಆ ಪುಸ್ತಕವನ್ನು ತೆಗೆದುಕೊಂಡು ತಮ್ಮ ಶಾಲನ್ನು ಅವನ ಮೇಲೆ ಹೊದ್ದಿಸಿ ಹೊರಟುಹೋದರು.

ಮರುದಿನ ವೆಂಕಣ್ಣನು ತನ್ನ ಪರಿಮಳವು ಮಾಯವಾಗಿರುವುದನ್ನೂ ತನ್ನ ಮೈಮೇಲೆ ಶ್ರೀಗಳ ಶಾಲು ಬಂದಿರುವುದನ್ನೂ ಕಂಡು ಇದು ತನ್ನ ಸಹಾಧ್ಯಾಯಿಗಳ ಕುಚೋದ್ಯವಾಗಿರಬಹುದೆಂದು ನೆನೆದು ನಿರ್ವಾಹವಿಲ್ಲದೆ ಎಲ್ಲವನ್ನೂ ಸ್ವಾಮಿಗಳಿಗೆ ಹೇಳಿ ಶಾಲನ್ನು ಮುಂದಿಟ್ಟು ಹಿಂದೆ ಸರಿದನು. ಸ್ವಾಮಿಗಳು ಶಾಂತನಾಗಿರುವುದಕ್ಕೆ ಆತನಿಗೆ ಕೈಸನ್ನೆ ಮಾಡಿ ಜಪಕ್ಕೆ ಕುಳಿತರು. ಜಪ ಮುಗಿದ ಮೇಲೆ ಪಾಠಕ್ಕೆ ಮೊದಲಾಯಿತು. ನಿನ್ನೆಯ ಸಂದಿಗ್ಧವಾಕ್ಯಾರ್ಥದ ವಿಷಯವು ಬಂದಿತು. ಎಲ್ಲರೂ ನಿರುತ್ತರರಾದರು. ಆಗ ಶ್ರೀಗಳು ವೆಂಕಣ್ಣನ ಪರಿಮಳವನ್ನು ಹೊರಗೆ ತೆಗೆದು ಅಲ್ಲಿ ಆ ವಾಕ್ಯಾರ್ಥವನ್ನು ವಿಶದವಾಗಿ ವಿವರಿಸಿದುದನ್ನು ಎಲ್ಲರಿಗೆ ಓದಿ ಹೇಳಿ ಎಲ್ಲರನುಮತಿಯಿಂದ ವೆಂಕಣ್ಣನನ್ನು **"ಪರಿಮಳಾಚಾರ್ಯ"**ರೆಂದು ಕರೆದರು.

ದ್ರಾವಿಡ ಸನ್ಯಾಸಿಯೊಬ್ಬನನ್ನು ಮಹಾಭಾಷ್ಯದಲ್ಲಿ ಗೆದ್ದು ವೆಂಕಣಭಟ್ಟರು **ಮಹಾಭಾಷ್ಯಾಚಾರ್ಯ**ರೆಂಬ ಬಿರುದನ್ನೂ ಗುರುಗಳಿಂದ ಪಡೆದರು. ಒಮ್ಮೆ ತಂಜಾವುರ ಸಂಸ್ಥಾನದ ಅರಸನ ಪಂಡಿ

ತೆಮಂತ್ರಿಯಾದ **ಗೋವಿಂದದೀಕ್ಷಿತನ** ಮಗ **ಯಜ್ಞನಾರಾಯಣ ದೀಕ್ಷಿತ**ನೆಂಬ ಕರ್ಮಠನಾದ ಘನಪಾಠಿಯೊಡನೆ ಪರಿಮಳಾಚಾರ್ಯರ ವಾಕ್ಯಾರ್ಥವಾಯಿತು. ಅದರಲ್ಲಿ ದೀಕ್ಷಿತರು ಕಡೆಗೆ ಆಚಾರ್ಯರಿಗೆ ಶರಣು ಬರಬೇಕಾಯಿತು. ಇದರಂತೆ ಪರಿಮಳಾಚಾರ್ಯರ ಮಹಿಮೆಯು ಬೆಳೆಯುತೊಡಗಿತು.

ವೇದದಲ್ಲಿ, ಘನಪಾಠಿಯಾದ ತ್ರಿವೇದಿ; ಶಾಸ್ತ್ರದಲ್ಲಿ, ಷಟ್‌ಶಾಸ್ತ್ರಗಳಲ್ಲಿಯೂ ನೈಪುಣ್ಯ; ಸಂಗೀತದಲ್ಲಿ, ಕೋಕಿಲವಾಣಿಯ ಗಾನಪಟುತ್ವ; ವೀಣಾವಾದನದಲ್ಲಿ, ಹೃದಯವನ್ನೇ ಕಲಕಿಸಿಬಿಡುವಂತಹ ಸವಿಯಾದ ಕೈಚಳಕ; ಕವಿತೆಯಲ್ಲಿಯೋ, ಗಂಗಾಪ್ರವಾಹದಂತೆ ತಡೆಯಿಲ್ಲದ ಹೃದಯಂಗಮತೆ; ವಾದದಲ್ಲಿ, ಪ್ರತಿವಾದಿಭಯಂಕರತ್ವ; ಈ ಎಲ್ಲ ಗುಣಗಳಿಗೂ ಕಳಸವನ್ನಿಟ್ಟಂತೆ ಏಕನಿಷ್ಠ ಬ್ರಹ್ಮಚರ್ಯ, ವಜ್ರಕಾಯ; ಕೇಳುವದೇನು! ಆಚಾರ್ಯರನ್ನು ನೋಡಿ ಆರಾದರೂ ಬೆರಗಾಗಿ ಬೊಟ್ಟುಕಚ್ಚುತ್ತಿದ್ದರು. ಇಂತೆಹರಿಗೆ, ಬಡತನವಿದ್ದರೇನಾಯಿತು? ಕನ್ಯಾದಾನಮಾಡುವವರು ಕಡಿಮೆಯೇ. **ಸರಸ್ವತಿ**ಯೆಂಬ ಸಲಕ್ಷಣಳಾದ ಕನ್ಯೆಯೊಡನೆ ಆಚಾರ್ಯರಿಗೆ **ಭುವನಗಿರಿ**ಯೆಂಬಲ್ಲಿ ಮದುವೆಯಾಯಿತು. ಈ ದಂಪತಿಗಳು **ವಶಿಷ್ಠ-ಅರುಂಧತಿ**ಯರಂತೆ ಎಲ್ಲರ ಕಣ್ಣುಗಳನ್ನು ಕುಕ್ಕಿಸಿದರು. ಇವರ ಉದರದಿಂದ **ಲಕ್ಷ್ಮೀನಾರಾಯಣ**ನೆಂಬ ಮಗನು ಜನಿಸಿದನು. ಭಗವಂತನ ಏಕಾಂತಭಕ್ತರಿಗೆ ದಾರಿದ್ರ್ಯವೆಂಬುದೇ ದೊರೆತನವೆಂಬಂತೆ ಕಾಣುತ್ತದೆ. ಆ ಪ್ರಕಾರಕ್ಕೆ ಆಚಾರ್ಯರು ತಮ್ಮ ಪಾಠದ ಶಿಷ್ಯರೊಡನೆ ತಮ್ಮ ಉದರನಿರ್ವಾಹಕ್ಕೆಂದು ಹೆಣಗುತ್ತಿದ್ದರೂ ಸ್ವಲ್ಪಾದರೂ ಎದೆಗುಂದಿರಲಿಲ್ಲ. ಆದರೆ ಒಮ್ಮೆ ಅವರ ಮನೆಗೆ ಕಳ್ಳರು ಬಿದ್ದು ಮನೆಯಲ್ಲಿಯ ಇದ್ದುಬಿದ್ದುದನ್ನೆಲ್ಲ ದೋಚಿಕೊಂಡು ಹೋಗಿಬಿಡಲು ಆಚಾರ್ಯರು ನಿರುಪಾಯರಾಗಿ ಕುಂಭಘೋಣೆಗೆ ಗುರುಗಳಿದ್ದೆಡೆಗೆ ಬಂದು ಅವರನ್ನು ಮೊರೆಹೊಕ್ಕರು. ಆಗ ಮಠದಲ್ಲಿಯೇ ಇರುವುದಕ್ಕೆ ಆಚಾರ್ಯರಿಗೆ ಗುರುಗಳಿಂದ ಅಪ್ಪಣೆ ದೊರೆಯಿತು. ಪರಿಮಳಾಚಾರ್ಯರ ಜೀವನವು ಈ ಮುಂದೆ ಸೌಖ್ಯದಿಂದ ಸಾಗತೊಡಗಿತು.

ಕೆಲವು ದಿನಗಳು ಈ ರೀತಿಯಾಗಿ ಕಳೆಯುತ್ತಿರಲು ಒಮ್ಮೆ ಶ್ರೀ ಸುಧೀಂದ್ರರಿಗೆ ದೇಹಾಲಸ್ಯವಾಯಿತು. ಬಹು ದಿನಗಳಿಂದ ತಮ್ಮ ಮನದಲ್ಲಿಯೇ ಯೋಚಿಸುತ್ತಿದ್ದ ತಮ್ಮ ವಿಚಾರವನ್ನು ಅವರು ಈ ದಿನ ಪರಿಮಳಾಚಾರ್ಯರ ಮುಂದೆ ಬಿಚ್ಚಿಟ್ಟರು. ಸನ್ಯಾಸವನ್ನು ಸ್ವೀಕರಿಸಲಿಕ್ಕೆ ಶ್ರೀರಾಮರ ಆಜ್ಞೆಯಾಗಿದೆಯೆಂದು ಆಚಾರ್ಯರನ್ನು ಬಲುಮೆಪಡಿಸಿದರು. ಮಹಾಪೀಠಕ್ಕೆ ತಾವು ಯೋಗ್ಯರಲ್ಲವೆಂದು ಆಚಾರ್ಯರು ನಡುಗುವ ದನಿಯಲ್ಲಿ ನುಡಿದರು. ಆಗ ಗುರುಗಳ- ಆಚಾರ್ಯರಿಗೆ ಇನ್ನಿಷ್ಟು ವಿಚಾರ ಮಾಡುವುದಕ್ಕೆ ಅವಸರವನ್ನು ಕೊಟ್ಟರು.

ಇಷ್ಟರಲ್ಲಿ ಒಮ್ಮೆ ರಾತ್ರಿ ಕನಸಿನಲ್ಲಿ ಪರಿಮಳಾಚಾರ್ಯರಿಗೆ **ವಾಗ್ದೇವಿ**ಯ ದರ್ಶನವಾಯಿತು. ‘ನಿನಗೆ ಪ್ರಸನ್ನಳಾಗಿ ನಿನ್ನ ನಾಲಿಗೆಯಲ್ಲಿಯೇ ನಾನು ನೆಲೆಸಿರುತ್ತೇನೆ. ಶ್ರೀಮದಾನಂದತೀರ್ಥಾಚಾರ್ಯ, ಶ್ರೀ ಟೀಕಾಕೃತ್ಪಾದ ಮೊದಲಾದವರಂತೆ ನನ್ನನ್ನು ನೀನು ಸನ್ಯಾಸವನ್ನು ವಹಿಸಿ ಆದರಿಸು’ ಎಂತೆಂದು ಆಕೆಯ ಆಜ್ಞೆಯಾಯಿತು. ಆಗ ಆಚಾರ್ಯರು ಈಶಸಂಕಲ್ಪವನ್ನೇ ನೆನೆದು ಹೆಂಡತಿಯನ್ನು ಒಡಂಬಡಿಸಿ ಗುರುಗಳಿಂದ ಸನ್ಯಾಸವನ್ನು ಸ್ವೀಕರಿಸಿದರು. ೧೫೪೫ನೇ ರುಧಿರೋದ್ಗಾರಿಯ ಫಾಲ್ಗುಣ ಶುದ್ಧ ೨. **ಶ್ರೀರಾಘವೇಂದ್ರ ತೀರ್ಥ**ರೆಂಬುದು ಅವರ ಸನ್ಯಾಸನಾಮವಾಯಿತು.

ವೆಂಕಣಭಟ್ಟರಿಗೆ ಸನ್ಯಾಸವಾಯಿತೆಂಬ ಸುದ್ದಿಯು ಎಲ್ಲೆಡೆಗೂ ಪಸರಿಸಿ ಯಾವತ್ತರಿಗೂ ಆನಂದವಾಯಿತು. ಶ್ರೀಸುಧೀಂದ್ರರು ಇರಇರುತ್ತ ಪರಂಪರೆಯಿಂದ ತಮಗೆ ನಡೆಯುತ್ತ ಬಂದಿರುವ ೬೪ ವಿದ್ಯೆಗಳನ್ನು ಶ್ರೀರಾಘವೇಂದ್ರರಿಗೆ ಹೇಳಿಕೊಟ್ಟರು. ಶ್ರೀ ಸುಧೀಂದ್ರರ ಸಮಕಾಲೀನರಾದ **ಅಪ್ಪಯ್ಯದೀಕ್ಷಿತ**ರಿಗೆ ೬೪ ಕಲೆಗಳ ಜ್ಞಾನವಿದ್ದಿತು. ಆದುದರಿಂದಲೇ ಶ್ರೀ ರಾಘವೇಂದ್ರರ ಯಶಶ್ಚಂದ್ರಿಕೆಯು ಬಲು ಜನರ ಮನವನ್ನು ತಣಿಸಿಬಿಡಲಿಕ್ಕೆ ಕಾರಣವಾಯಿತು. ಮುಂದೆ ಶ್ರೀ ಸುಧೀಂದ್ರರು ಹಂಪೆಗೆ ಬಂದು ಕೆಲ ದಿನ ಕಳೆದ ಮೇಲೆ ಅಲ್ಲಿಯೇ ವೃಂದಾವನಸ್ಥರಾದರು. ಆಶ್ರಮಜೇಷ್ಠರಾದ ಯಾದವೇಂದ್ರ

ರೆಂಬವರು ತುಸು ಅಡ್ಡಬಂದಿದ್ದರೂ ಶಿಷ್ಯರೆಲ್ಲರ ಬಲುಮೆಯಿಂದ ಶ್ರೀ ರಾಘವೇಂದ್ರರೇ ಪೀಠದಲ್ಲಿ ಸ್ಥಿರರಾದರು. ಶ್ರೀರಾಘವೇಂದ್ರರು ಶ್ರೀ ಪ್ರಲ್ಹಾದರ ಅವತಾರ! ಮಹಾಭಗವದ್ಭಕ್ತರು! ಆದುದರಿಂದಲೇ ಅವರ ದೇವಪೂಜೆಯೆಂದರೆ ಎಲ್ಲರೂ ಬೆರಗಾಗಿ ಭಕ್ತಿಭಾವದಿಂದ ಅದನ್ನು ಕಣ್ಣು ಪಿಳಕಿಸದೆ ನೋಡುತ್ತ ಕುಳಿತುಕೊಳ್ಳುತ್ತಿದ್ದರು. ಇವರ ಭಕ್ತಿ ಭಾವನೆಗೆ ಮೆಚ್ಚಿ ಪರಮಾತ್ಮನು **ಶ್ರೀವೇಣುಗೋಪಾಲ**ರೂಪದಿಂದ ಪ್ರತ್ಯಕ್ಷನಾಗಿ ಇವರಿಂದ ಪೂಜೆಗೊಳ್ಳುತ್ತಿದ್ದನು. ಪೂಜೆ ಮುಗಿದ ಕೂಡಲೇ ವೀಣೆಯನ್ನು ಬಾರಿಸುತ್ತ **ಇಂದು ಎನಗೆ ಶ್ರೀಗೋವಿಂದ ನಿನ್ನ ಪದಾರ। ವಿಂದವ ತೋರೋ ಮುಕುಂದ ಇಂದಿರೆರಮಣಾ॥** ಎಂಬ ಪ್ರಾಕೃತ ಪದವನ್ನು ಅನ್ನುತ್ತ ಇವರು ತಾಸಾನುಗಟ್ಲೆ ಧ್ಯಾನ ದಲ್ಲಿ ತಲ್ಲೀನರಾಗಿಬಿಡುತ್ತಿದ್ದರು. ಆ ಪರಿಸ್ಥಿತಿಯನ್ನು ನೋಡುತ್ತ ಅ ನ್ನದ ಪರಿವೆಯಿಲ್ಲದೆ ಅವರೊಡನೆ ಕಾಲಕಳೆಯುತ್ತಿದ್ದ ಜನರು ನಿಜವಾ ಗಿಯೂ ಧನ್ಯರೇ ಸರಿ! '**ಮಂದಭಾಗ್ಯರಿಗೆ ದೊರೆಯದಿವರ ಸೇವೆ** ಎಂದಿದ್ದ ಮೇಲೆ ಇವರು ಭಕ್ತಿಯ ಭರದಿಂದ ಭಗವಂತನಲ್ಲಿ ತಲ್ಲೀನ ರಾಗಿ ಕುಳಿತಂತಹ ದೃಶ್ಯವನ್ನು ಕಂಡವರ ಮೇಲ್ಮೆಯನ್ನಂತೂ ಹೇಳು ವುದೇನು?

ಮುಂದೆ ಶ್ರೀ ರಾಘವೇಂದ್ರರು ದೇಶಸಂಚಾರಕ್ಕೆಂದು ಹೊರ ಹೊರಟರು. ಹೋದಹೋದಲ್ಲಿ ಪರವಾದಿಗಳನ್ನು ನಿರುತ್ತರರನ್ನಾಗಿ ಮಾಡುವುದು, ಅವರ ನಿತ್ಯನಿಯಮವಾಗಿ ಹೋಗಿದ್ದಿತು. ಭಲ್ಲವ ಪುರಿಯ ಭೈರವಭಟ್ಟ, ವೀರಭದ್ರಪಂಡಿತರೆಂಬ ಪ್ರಬಲ ಶೈವವಾದಿ ಗಳಿಗೆ ಇವರೆದುರಿನಲ್ಲಿ ಕಾಲೂರಬೇಕಾಯಿತು. ವಾದದಲ್ಲಿ ಗೆದ್ದ ಕಡೆ ಯಲ್ಲೆಲ್ಲ ಕಾಣಿಕೆಗಳನ್ನೂ ಭೂಮಿಗಳನ್ನೂ ಪಡೆಯುತ್ತ ಶ್ರೀ ರಾಘ ವೇಂದ್ರರು ಅರುಣಾಚಲ, ಮಧುರಾ, ಶ್ರೀರಂಗ, ಕಂಚಿ, ರಾಮೇಶ್ವ ರಾದಿ ಯಾತ್ರೆಗಳನ್ನು ಮಾಡಿ ಮುಗಿಸಿದರು. ಮುಂದೆ ಉಡುಪಿಗೆ ಬಂದಾಗ ಸ್ವಾಮಿಗಳು ಅನಂತೇಶ್ವರ ದೇವಾಲಯದಲ್ಲಿ ಶ್ರೀಮದಾಚಾ ರ್ಯರ ಪಾಠದ ಸ್ಥಳದೆದುರಿನಲ್ಲಿ ೧ ವರ್ಷದ ವರೆಗೆ ಶಿಷ್ಯರಿಗೆ ಪ್ರವ ಚನವನ್ನು ಹೇಳಿದರು. **ಶ್ರೀವ್ಯಾಸತೀರ್ಥ**ರಿಂದ ವಿರಚಿತವಾದ

**ಚಂದ್ರಿಕಾ** ಎಂಬ ಗ್ರಂಥಕ್ಕೆ **ಪ್ರಕಾಶ**ವೆಂಬ ಟೀಕೆಯನ್ನೂ **ತಂತ್ರ ದೀಪಿಕಾ**ಕ್ಕೆ **ನ್ಯಾಯಮುಕ್ತಾವಳಿ**ಯೆಂಬ ವ್ಯಾಖ್ಯಾನವನ್ನೂ ಉಡುಪಿಯಲ್ಲಿದ್ದಾಗಲೇ ರಚಿಸಿ ಶ್ರೀಕೃಷ್ಣನಿಗೆ ಅರ್ಪಿಸಿದರು.

ಮುಂಪೆ ಸಂಚಾರದಲ್ಲಿ ಶ್ರೀ ರಾಘವೇಂದ್ರರ ಮಹಾಮಹಿಮೆಗಳು ಬಹು ಜನರನ್ನು ಬೆರಗುಗೊಳಿಸಿಬಿಟ್ಟವು. ಇವರ ಅನುಗ್ರಹದಿಂದ ಬಡವರು ಬಲ್ಲಿದರಾದರು. ಎಷ್ಟೋ ಜನರ ಬಯಕೆಗಳು ಕೈಗೂಡಿದುವು. ಇದರಿಂದ ರಾಯರ ಹೆಸರನ್ನು ಕೇಳದವನೊಬ್ಬನೂ ದೇಶದಲ್ಲಿ ಉಳಿಯಲಿಲ್ಲ. ಹೋದಹೋದಲ್ಲಿ ಅವರಿಗೆ ಅನೇಕರು ಶಿಷ್ಯರು ಉಂಟಾದರು. ರಾಯರು ಮುಂದೆ ಸುಬ್ರಹ್ಮಣ್ಯ, ಕಾವೇರಿ, ಹರಿಹರ, ಹಂಪೆ ಮುಂತಾದವುಗಳ ಮೇಲಿಂದ ರಾಯಚೂರ ಕಡೆಗೆ ಬಂದರು. ಆಗ ವ್ರತವು ಬಂದಿದ್ದಿತು. ಒಂದೂರ ಹನುಮಂತ ದೇವರ ಗುಡಿಯಲ್ಲಿ ರಾಯರ ಪೂಜೆಯು ನಡೆದಾಗ ಹೊಲೆಯನಾಗಿದ್ದ ಹಿಂದಿನ ಜನುಮದ ಕನಕನು ಅವರನ್ನು ಕಾಣಿಸಿಕೊಂಡು ಭಕ್ತಿಯಿಂದ ತನ್ನಲ್ಲಿ ಕೊಡಲು ಸಾಧ್ಯವಿದ್ದ ಒಂದು ಮುಷ್ಟಿ ಸಾಸಿವೆಯನ್ನೇ ಭಕ್ತಿಯಿಂದ ಪರಮಾತ್ಮನಿಗೆ ಅರ್ಪಿಸಿದನು. ರಾಯರು ಅಂದಿನಿಂದ ವ್ರತವಿದ್ದರೂ ಸಾಸಿವೆಯನ್ನು ತೆಗೆದುಕೊಳ್ಳಬೇಕೆಂದು ತಮ್ಮ ಶಿಷ್ಯರಿಗೆ ವಿಧಿಸಿದರು. ಆ ಸ್ಥಳದಲ್ಲಿಯೇ ಕನಕನಿಗೆ ಮೋಕ್ಷವಾಯಿತು. ಅವನ ಗುರುತಿಗಾಗಿ ಒಂದು ಧ್ವಜವು ಈಗಲೂ ಅಲ್ಲಿದೆ.

ಇಲ್ಲಿಂದ ಮುಂದೆ ಶ್ರೀ ರಾಘವೇಂದ್ರರು ತಿರುಪತಿ, ಕಾಳಹಸ್ತಿ, ಕಂಚಿ ಮುಂತಾದ ಯಾತ್ರೆಗಳನ್ನು ತೀರಿಸಿಕೊಂಡು ಕುಂಭಘೋಣಕ್ಕೆ ದಯಮಾಡಿಸಿದರು. ಇಲ್ಲಿ ರಾಯರ ಗ್ರಂಥರಚನಾಕಾರ್ಯವು ಭರದಿಂದ ಸಾಗಲಿಕ್ಕೆ ಬಹು ಅನುಕೂಲ ಪರಿಸ್ಥಿತಿಯುಂಟಾಯಿತು. ಇವರು ಒಟ್ಟು ೪೬ ಗ್ರಂಥಗಳನ್ನು ರಚಿಸಿದ್ದಾರೆ. ಅವುಗಳೊಳಗಿನ ಚತುರ್ವೇದ ಭಾಷ್ಯವಂತೂ ಮಾಯವಾಗಿ ಬಿಟ್ಟಿದೆ. ಮತ್ತೆಷ್ಟೋ ಗ್ರಂಥಗಳ ಮುದ್ರಣವಿನ್ನೂ ಆಗಿಲ್ಲ.

೧ ಪರಿಮಳ
೨ ಪ್ರಕಾಶ
೩ ತತ್ವಮಂಜರಿ
೪ ಗೀತಾವಿವೃತಿ
೫ ಗೀತಾರ್ಥಮಂಜರೀ
೬ ಭಾವದೀಪಿಕಾ
೧೬ ದಶಪ್ರಕರಣಗಳ ಟಿಪ್ಪಣಿ
೨೬ ದಶೋಪನಿಷತ್ ಖಂಡಾರ್ಥ
೨೭ ನ್ಯಾಯಮುಕ್ತಾವಳಿ
೨೮ ತಂತ್ರದೀಪಿಕಾ
೨೯ ಅಣುಭಾಷ್ಯಟೀಕಾ
೩೦ ಈಶಾವಾಸ್ಯ ವಿವೃತಿ
೩೧ ಅಥರ್ವ ವಿವೃತಿ
೩೨ ಭೇದಬೋಧಿನಿ
೩೩ ವಾದಾವಳಿ ಟಿಪ್ಪಣಿ
೩೪ ಪ್ರಾತಃಸಂಕಲ್ಪಗದ್ಯ
೩೫ ಪುರುಷಸೂಕ್ತ ವ್ಯಾಖ್ಯಾನ
೩೬ ತರ್ಕತಾಂಡವ ಟಿಪ್ಪಣಿ
೩೭ ಅಂಭೃಣೀಸೂಕ್ತ ವ್ಯಾಖ್ಯಾನ
೩೮ ಹಿರಣ್ಯಗರ್ಭಸೂಕ್ತ ವ್ಯಾಖ್ಯಾನ
೪೦ ರಾಮಕೃಷ್ಣ ಚರಿತ್ರಮಂಜರಿ
೪೧ ಭಾವಸಂಗ್ರಹ
೪೪ ತ್ರಿವೇದ ವಿವೃತಿ
೪೫ ಭಟ್ಟಸಂಗ್ರಹಮೀಮಾಂಸ
೪೬ ಮಂತ್ರಾರ್ಥಸಂಗ್ರಹ

ಶ್ರೀ ರಾಘವೇಂದ್ರರ ಆಯುಷ್ಯದ ಕಡೆಕಡೆಯ ಭಾಗದಲ್ಲಿಯಂತೂ ಅವರ ಅದ್ಭುತ ಮಹಿಮೆಗಳಿಗೆ ಎಣಿಕೆಯಿಲ್ಲದಂತಾಯಿತು. ರಾಘವೇಂದ್ರರು **ಅಗಮ್ಯಮಹಿಮ**ರೆಂದು ಖ್ಯಾತಿಯುಂಟಾಯಿತು. ಭಕ್ತರ **ಅಪೇಕ್ಷಿತಪ್ರದಾತ**ರೆಂದು ಇವರನ್ನು ಎಲ್ಲರೂ ಕೊಂಡಾಡಿದರು. ಹೀಗಿರುತ್ತಿರಲೊಮ್ಮೆ ಶ್ರೀಗಳು ಉತ್ತರ ಕರ್ನಾಟಕಕ್ಕೆ ಸಂಚಾರಕ್ಕೆಂದು ಬಂದರು. ಈಗಲೋ ಅಲ್ಲಿ ಮುಸಲಮಾನರ ಹಾವಳಿಯು ಬಹಳವಾಗಿದ್ದಿತು. ಹಿಂದೀಯರ ಮಾನಪ್ರಾಣಗಳು ಅವರ ಕೈಯಲ್ಲಿಯೇ ಇದ್ದವೆಂದು ಹೇಳಬಹುದು. ಆದರೂ ಸ್ವಾಮಿಗಳು ಸರ್ಪದಂಶದಿಂದ ಮೃತನಾದ ಆಗಿನ ತುರುಷ್ಕ ನವಾಬನ ಮಗನ ಪ್ರಾಣವನ್ನು ಗರುಡಮಂತ್ರದಿಂದ ತಿರುಗಿ ತರಿಸಿ ಅವನಿಂದ ಅನೇಕ ಜಹಗೀರುಗಳನ್ನೇ ಪಡೆದರು. ನಮ್ಮ 'ಮಾಬಾಪ' ಸರಕಾರವು ಬಂದಮೇಲೆ ಅವು ಮಠಕ್ಕೆ ಉಳಿಯಲಿಲ್ಲ.

ಸ್ವಾಮಿಗಳು ಮುಂದೆ ಆದವಾನಿಯ ಕಡೆಗೆ ಬಂದಾಗ ಅಲ್ಲಿಯ ನವಾಬನು ಅಹಂಕಾರದಿಂದ ಅವರ ಪರೀಕ್ಷೆಯನ್ನು ಮಾಡಲೆಳಸಿದನು. ಮಾಂಸಪೂರಿತ ತಟ್ಟೆಯೊಂದರ ಮೇಲೆ ಬಟ್ಟೆಯನ್ನು ಹೊದಿಸಿ ನೈವೇದ್ಯಕ್ಕಾಗಿ ತಂದಿರುವನೆಂದು ಶ್ರೀಗಳ ಮುಂದಿರಿಸಿ ಅವರಿಗೆ ಬಗ್ಗಿ ಸಲಾಂ ಮಾಡಿದನು. ನವಾಬನ ಮೋಸವನ್ನು ಸ್ವಾಮಿಗಳು ಈ ಮುಂಚೆಯೇ ತಿಳಿದಿದ್ದರು; ತೀರ್ಥಪ್ರೋಕ್ಷಣೆಯಿಂದ ಮಾಂಸವನ್ನೆಲ್ಲ ಫಲಪುಷ್ಪಗಳನ್ನಾಗಿ ಮಾಡಿ ದೇವರಿಗೆ ನೈವೇದ್ಯ ತೋರಿಸಿದರು. ಆಗ ತನ್ನ ಅಪರಾಧವನ್ನು ಕ್ಷಮಿಸುವುದೆಂದು ನವಾಬನು ಗಾಬರಿಯಾಗಿ ಸ್ವಾಮಿಗಳನ್ನು ಬೇಡಿಕೊಂಡನು. ಕ್ಷಮಾಶೀಲರಾದ ರಾಯರು ನವಾಬನನ್ನು ಕ್ಷಮಿಸಿಬಿಟ್ಟರು. ಇದಕ್ಕೆ ನವಾಬನು ಸಂತುಷ್ಟನಾಗಿ ಬೇಕಾದದ್ದನ್ನು ಸ್ವಾಮಿಗಳು ಬೇಡಬಹುದೆಂದು ಅವರಿಗೆ ತಿಳಿಸಿದನು. ರಾಜ್ಯಕೋಶಗಳನ್ನು ಬೇಡದೆ ಸ್ವಾಮಿಗಳು ಮಂಚಾಲೆಯ ಕಾಡು ಪ್ರದೇಶವನ್ನು ಮಾತ್ರ ಬೇಡಿದರು. ಪ್ರಲ್ಹಾದರು ಯಜ್ಞಮಾಡಿದ ಭೂಮಿಯು ಆದಾದುದರಿಂದಲೇ ಅಲ್ಲಿಯೇ ತಮ್ಮ ವೃಂದಾವನವಾಗತಕ್ಕದೆಂಬ ತಮ್ಮ ಮನೀಷೆಯನ್ನು ಪ್ರಲ್ಹಾದರ ಅವತಾರವೇ ಆಗಿದ್ದ ಶ್ರೀ ರಾಘವೇಂದ್ರರು ಭಕ್ತರಿಗೆ ತಿಳಿಹೇಳಿದರು. ನವಾಬನು ಮಾತ್ರ ತನ್ನ ಸೇವೆಯು ಪೂರ್ತಿಯಾಗಲಿಲ್ಲವೆಂದು ನೊಂದುಕೊಂಡನು.

ನವಾಬನ ಆಜ್ಞೆಯಂತೆ ಮಂಚಾಲೆಯ ಕಾಡು ಬಯಲಾಯಿತು. ಮಠದ ಎಲ್ಲ ಸಿದ್ಧತೆಯಾಯಿತು. ಶ್ರೀರಾಘವೇಂದ್ರರು ಅಲ್ಲಿಗೆ ಬಂದು ಕುಲದೇವತೆ ( ಪ್ರಲ್ಹಾದಾವತಾರದಲ್ಲಿ ) ಯನ್ನು ಸ್ತುತಿಸಿ ಆಕೆಯ ಅನುಗ್ರಹವನ್ನು ಸಂಪಾದಿಸಿದರು. ದುರ್ಗೆಯು ತನ್ನ ಪ್ರಿಯಲಾಂಛನವಾದ ಮೇಷಮಸ್ತಕವನ್ನು ಮಹಾದ್ವಾರದಲ್ಲಿ ಸ್ಥಾಪಿಸುವುದೆಂದೂ ಅವರಿಂದ ಸಕಲ ಆಸುರೀಶಕ್ತಿಯ ಅಪಜಯವಾಗುವದೆಂದೂ ಹೇಳಿ ಅದೃಶ್ಯಳಾದಳು.

ಆದೇ ರೀತಿಯಾಗಿ ಮಠವು ಕಟ್ಟಿ ಮುಗಿಯಿತು. ಅಲ್ಲಲ್ಲಿ ಬೇರೆ ಬೇರೆ ದೇವಮೂರ್ತಿಗಳ ಸ್ಥಾಪನೆಯಾಯಿತು. ಸ್ವಾಮಿಗಳ ಶಿಲಾ ವೃಂದಾವನವು ಸಿದ್ಧವಾಯಿತು. ಅದರಲ್ಲಿ ತುಂಬಲಿಕ್ಕೆ ೭೦೦ ಶಾಲ

ಗ್ರಾಸುಗಳ ವ್ಯವಸ್ಥೆಯಾಯಿತು. ಶ್ರೀ ರಾಘವೇಂದ್ರರು ಯೋಗೀಂ ದ್ರರೆಂಬವರಿಗೆ ಸಂಸ್ಥಾನಕ್ಕೆ ಪಟ್ಟಗಟ್ಟಿ ೧೫೯೩ ನೇ ವಿರೋಧಿಕೃತು ಶ್ರಾವಣ ಬಹುಳ ೨ಗೆ ಸಶರೀರದಿಂದಲೂ ಸಕಲ ರಾಜಮರ್ಯಾದೆಗಳಿಂ ದಲೂ ಪೂರ್ವಾಭಿಮುಖರಾಗಿ ಮಾರುತಿಯನ್ನು ನೋಡುತ್ತ ಜಪಮಣಿ ಯನ್ನು ಹಿಡಿದುಕೊಂಡು ಸಮಾಧಿಸ್ಥರಾದರು. ಅವರ ವೃಂದಾವನ ವಾಗಿ ೭೦೦ ವರ್ಷಗಳ ವರೆಗೆ ತಮ್ಮ ಮಹಿಮೆಯು ದೇಶದಲ್ಲೆಲ್ಲ ಮೆರೆಯುವುದೆಂದು ಶ್ರೀರಾಯರೇ ಹೇಳಿಬಿಟ್ಟಿದ್ದಾರೆ. ಅದರಂತೆ ಈಗ ೩೦೦ ವರ್ಷಗಳಾಗುತ್ತ ಬಂದರೂ ಮಂತ್ರಾಲಯ ಮುನಿಗಳ ಮಹಿ ಮೆಯು ದಿನೇ ದಿನೇ ಎಲ್ಲೆಲ್ಲಿಯೂ ಹಬ್ಬಿ ದೂರದಿಂದಲೂ ಮಂತ್ರಾ ಲಯಕ್ಕೆ ಭಕ್ತರು ಆರಾಧನೆಯ ಕಾಲಕ್ಕೆ ಬಂದು ಸೇವೆಯನ್ನು ಮಾಡಿ ಹೋಗುತ್ತಾರೆ. ಸುರತರುವು ಸಮೀಪದಲ್ಲಿರಲು ಅದರ ಉಪಯೋಗ ವನ್ನು ಮಾಡಿಕೊಳ್ಳುವುದು ಭಕ್ತರ ಕರ್ತವ್ಯವು!

## ೨. ಶ್ರೀ ವಿಜಯಧ್ವಜತೀರ್ಥರು

ಇವರು ಉಡುಪಿಯ ಎಂಟು ಮಠಗಳಲ್ಲಿ **ಪೇಜಾವರ** ಮಠದ ವರು. ಇವರ ಗುರುಗಳ ಹೆಸರು **ಶ್ರೀ ಮಹೇಂದ್ರತೀರ್ಥ**ರು. ಇವರು ಉತ್ತರಾದಿಮಠದ ಶ್ರೀ ರಘುನಾಥತೀರ್ಥರ ಸಮಕಾಲದವರು. ಇವರು ಭಾಗವತ ಟೀಕಾಕಾರರೆಂದು ಬಹು ಖ್ಯಾತಿಯನ್ನು ಪಡೆದಿ ರುವರು. ಭಾಗವತಕ್ಕೆ ಟೀಕೆಯನ್ನು ಬರೆಯಲಿಕ್ಕೆ ಶ್ರೀ ವಿಜಯಧ್ವಜ ರಿಗೆ ಒಂದು ಪ್ರಬಲವಾದ ಕಾರಣವಾಯಿತು. ಸಜ್ಜನರಿಗೆ ಕಾಟವು ಹೆಚ್ಚಿದಾಗಲೇ ಲೋಕೋದ್ಧಾರವಾಗಬೇಕೆಂಬುದು ದೇವರ ಸಂಕಲ್ಪ ವಿದ್ದಂತೆ ತೋರುವುದು. ಆ ಪ್ರಕಾರಕ್ಕೆ ತೀರ್ಥರನ್ನು ದುರ್ದಶೆಯು ಬೆಂಬತ್ತಿ ಅವರನ್ನು ಸಮುದ್ರಯಾನಕ್ಕೆ ಬಲುಮೆಪಡಿಸಿಬಿಟ್ಟಿತು. ಆ ಯಾನದಲ್ಲಿದ್ದಾಗ ತೀರ್ಥರ ಶಿಷ್ಯರನ್ನೂ ಅವರಿಂದ ಅಗಲಿಸಿ ಬಿಟ್ಟು ಅವರನ್ನು ಅಸಹಾಯ ಸ್ಥಿತಿಗೆ ತಂದುಬಿಟ್ಟಿತು. ಶ್ರೀ ಧ್ವಜರು ೧, ೨, ೩ ದಿನ ಉಪವಾಸ ಬಿದ್ದು ಕ್ಷುಧೆಯ ಬಾಧೆಯು ಅನಿವಾರ್ಯವಾಗಿ ಬಿಡಲು ಯತ್ಯಾಶ್ರಮದ ಕಟ್ಟಳೆಗಳನ್ನು ಮೀರಿಹೋಗುವ ಪ್ರಸಂಗವೂ

ಬಂದುಬಿಟ್ಟಿತು. ಆಗವರು ಅಗ್ನಿಯನ್ನು ಪ್ರದೀಪ್ತಗೊಳಿಸಿ ಒಲೆಯ ಮೇಲೆ ಅನ್ನಕ್ಕೆ ಇಟ್ಟುಬಿಟ್ಟರು. ಈ ದೃಶ್ಯವನ್ನು ಶ್ರೀ ರಘುನಾಥ ತೀರ್ಥರೂ ಶ್ರೀಪಾದರಾಯರೂ ಶ್ರೀವ್ಯಾಸರಾಯರೂ ಮೂವರೂ ಕಂಡು ಯತ್ಯಾಶ್ರಮಭಂಗವಾದುದಕ್ಕಾಗಿ ಧ್ವಜರಿಗೆ ಶ್ರೀಮದ್ಭಾಗವತಕ್ಕೆ ಟೀಕೆಯನ್ನು ಬರೆಯಿರೆಂದು ಪ್ರಾಯಶ್ಚಿತ್ತವನ್ನು ವಿಧಿಸಿದರು. ಅವರು ವಿಧಿಸಿದಂತೆ ಶ್ರೀ ಧ್ವಜರು ವ್ರತಸ್ಥರಾಗಿ ಒಂದಾನೊಂದು ಏಕಾಂತವಾದ ಗುಹೆಯಲ್ಲಿದ್ದುಕೊಂಡು ಭಾಗವತಕ್ಕೆ ಜಗನ್ಮಾನ್ಯವಾದಂತಹ ಟೀಕೆಯನ್ನು ಬರೆದರು. ಭಾಗವತತತ್ವದ ಸತ್ಯವಾದ ತಿರುಳನ್ನು ತಿಳಿದುಕೊಳ್ಳುವ ಪ್ರತಿಯೊಬ್ಬನೂ ಶ್ರೀ ವಿಜಯಧ್ವಜರ ಟೀಕೆಯನ್ನು ಓದಲೇ ಬೇಕು. ಶ್ರೀ ಧ್ವಜರು ತಲ್ಲೀನರಾಗಿ ಗಂಗಾಪ್ರವಾಹದಂತೆ ಹರಿಬಿಟ್ಟಿರುವ ವಚೋಲಹರಿಯನ್ನು ಓದುತ್ತ ಕುಳಿತರೆ ಪ್ರತಿಯೊಬ್ಬ ಸಜ್ಜನ ಮನುಷ್ಯನಿಗೂ ರೋಮಾಂಚನಗಳೆದ್ದು ಶಬ್ದರೋಧವಾಗಲಿಕ್ಕೇ ಬೇಕೆಂಬುದು ಕಟ್ಟಿಟ್ಟ ಮಾತು. ಶ್ರೀ ತೀರ್ಥರು ಶಾಲಿವಾಹನ ಶಕದ ೧೨೦೦ ಶತಕದಲ್ಲಿದ್ದಂತೆ ತಿಳಿದುಬರುವುದು.

## ೩. ಶ್ರೀವಾದಿರಾಜಸ್ವಾಮಿಗಳು

ಇವರು ಉಡಪಿಯ ಎಂಟು ಮಠಗಳಲ್ಲಿ **ಸೋದೆಯ** ಮಠದವರು. ಮಧ್ವಮತವೆಂಬ ಮಹಾಸಾಗರಕ್ಕೆ ಚಂದಿರನಂತಿರುವರೆಂದೂ ಕನ್ನಡನುಡಿದೇವಿಯನ್ನು ಬೆಡಗುಗೊಳಿಸಿದವರೆಂದೂ ಇವರ ಪ್ರಸಿದ್ಧಿಯಿದೆ.

ಪಶ್ಚಿಮ ಸಮುದ್ರತೀರದಲ್ಲಿ **ಕುಂಬಕಾಸಿ** ಎಂಬ ಒಂದು ಕ್ಷೇತ್ರವಿದೆ. ಅದಕ್ಕೆ ಸಮೀಪವಾಗಿ **ಹೂವಿನಕೆರೆ**ಯೆಂಬ ಹಳ್ಳಿ. ಅಲ್ಲಿಯೇ ರಾಜರ ಜನನವಾದದ್ದು. ಇವರ ತಂದೆಯ ಹೆಸರು **ದೇವರಭಟ್ಟ**. ಹುಟ್ಟುವಾಗ ಇವರನ್ನು ಕೆಳಗೆ ಬೀಳಗೊಡದೆ ಬಂಗಾರದ ತಳಿಗೆಯಲ್ಲಿಯೇ ಹಿಡಿದು **ಶ್ರೀ ವಾಗೀಶತೀರ್ಥ**ರಿಗೆ ಒಪ್ಪಿಸಲಾಯಿತು. ಇವರ ಮುಂದಿನ ಎಲ್ಲ ಸಂಸ್ಕಾರಗಳು ಶ್ರೀತೀರ್ಥರಿಂದಲೇ ನೆರವೇರಿಸಲ್ಪಟ್ಟವು.

ಪ್ರೌಢರಾದಂತೆ ಇವರ ಪಾಂಡಿತ್ಯವು ಬಲು ಬೆಳೆಯತೊಡಗಿತು. ೬೪ ಕಲೆಗಳಲ್ಲಿ ಇವರು ನಿಷ್ಣಾತರಾದರು. ಆದ್ದರಿಂದ ಇವರನ್ನು ಎದು

ರಿಸುವುದಕ್ಕೆ ಆರಿಗೂ ಆಗ ಸಾಧ್ಯನಿದ್ದಿಲ್ಲ. ವಾದಕ್ಕೆ ಬಂದವರೆಲ್ಲ ಇವರಿಗೆ ಶರಣಾಗತರಾಗಿ ಜಯಪತ್ರವನ್ನೇ ಕೊಟ್ಟು ಹೋಗುತ್ತಿದ್ದರು. ಆದ್ದರಿಂದಲೇ ಇವರು **ವಾದಿರಾಜ**ರೆಂದು ಖ್ಯಾತಿಯನ್ನು ಪಡೆದರು.

ವಾದಮಾಡಿ ಸೋತು **ನಾರಾಯಣಭೂತ**ವೆಂಬ ಬ್ರಹ್ಮರಾಕ್ಷಸವು ಇವರ ಕೈವಶವಾದಾಗಿನಿಂದಂತೂ ಇವರ ಮೇಲ್ಮೆಯು ಬಹಳವಾಯಿತು. ಆ ಭೂತವು ರಾಜರನ್ನು ನೆಳಲಿನಂತೆ ಓಸರಿಸುತ್ತಿದ್ದು ಕಾಯುತ್ತಿದ್ದಿತು. ಅದು ರಾಜರ ಪಲ್ಲಕ್ಕಿಯನ್ನು ಹೊತ್ತು ಒಯ್ಯುವಾಗ ಜನರಿಗೆ ಕಾಣಿಸದೆ ಪಲ್ಲಕ್ಕಿಯು ಅಂತರಿಕ್ಷದಲ್ಲಿಯೇ ಹೋಗುತ್ತಿರುವಂತೆ ಭಾಸವಾಗಿ ರಾಜರ ಮಹಾತ್ಮ್ಯಕ್ಕೆ ಜನರು ತಲೆದೂಗುತ್ತಿದ್ದರು. ನಾರಾಯಣಭೂತವು ಕಡೆಗೆ ರಾಜರ ಸೇವೆಯಿಂದಲೇ ಮುಕ್ತಿಯನ್ನು ಪಡೆಯಿತು.

ಇವರ ವಾಸಸ್ಥಾನವಾದ ಸೋದೆಯು ಘೋರ ಕಾನನದೆಷೆಯಾಗಿ ಹಿಂಸ್ರಪಶುಗಳಿಂದ ತುಂಬಿದ್ದಾಗಿದ್ದರೂ ಮಠದವರಿಗೂ ಆವೂರ ಬೇರೆ ಜನರಿಗೂ ದನಕರುಗಳಿಗೂ ಯಾವ ಭಯವೂ ಇರುತ್ತಿರಲಿಲ್ಲ. ಇದಕ್ಕೆ ಶ್ರೀರಾಜರ ಪ್ರಖರವಾದ ತಪಃಪ್ರಭಾವವೇ ಕಾರಣವು. ಸೋದೆಯು ಕಾರವಾರ ಜಿಲ್ಹೆಯಲ್ಲಿ ಶಿರಸಿಯಿಂದ ೪ ಹರದಾರಿಯ ಮೇಲಿದೆ.

ಇವರು ದೇಶಸಂಚಾರವನ್ನು ಮಾಡಿದಷ್ಟು ಯಾವ ಮಠದ ಶ್ರೀಗಳೂ ಮಾಡಿಲ್ಲವೆಂದನ್ನಬಹುದು. ಹೋದಹೋದಲ್ಲಿ ವಾದಿಗಳನ್ನು ಲೀಲಾಮಾತ್ರದಿಂದ ಗೆಲ್ಲುವುದಂತೂ ಇವರ ದಿನದ ಕೆಲಸವಾಗಿದ್ದಿತು. ಎಲ್ಲ ತೀರ್ಥಗಳನ್ನು ಸಂಚರಿಸಿ "**ತೀರ್ಥಪ್ರಬಂಧ**" ವೆಂಬ ಸಂಸ್ಕೃತ ಗ್ರಂಥವನ್ನೇ ರಾಜರು ಬರೆದಿದ್ದಾರೆ. ಇದನ್ನೋದಿ ಯಾತ್ರಾಸ್ಥಾನಗಳ ಮಹಾತ್ಮ್ಯವನ್ನು ಅರಿದು ಮನುಷ್ಯನು ಭಕ್ತಿಯಿಂದ ಪೂರಿತನಾಗಿ ತನ್ನ ಜೀವಮಾನದಲ್ಲಿ ಒಂದೆರಡು ಯಾತ್ರೆಗಳನ್ನಾದರೂ ಮಾಡಿಯೇ ತೀರುವನು.

ಒಮ್ಮೆ ಸಂಚಾರದಲ್ಲಿ ಆನೆಗುಂದಿಯ ಬಳಿಯಲ್ಲಿ ಶ್ರೀರಾಜರಿಗೆ ಒಬ್ಬ ಅಯ್ಯನವರ ಭೆಟ್ಟಿಯಾಯಿತು. ಇವರಿಗೆ ಅದ್ವೈತ ಶಾಸ್ತ್ರಗಳೆಲ್ಲ ಅವಗತವಾಗಿದ್ದುವು. ಅಲ್ಲದೆ ಇವರು ಸ್ವಲ್ಪ ಮಾಂತ್ರಿಕರಾಗಿದ್ದರು. ಕೆಲವು ಮಂತ್ರಗಳ ಬಲದಿಂದ ಅಯ್ಯನವರು ಜನರು ನೋಡುತ್ತಲೇ ಗಗನಕ್ಕೆ ಅಡರಿ ಅಲ್ಲಿ ಅವರಿಗೆ ಕಾಣವಾಗುತ್ತಿದ್ದರು. ಈ ಕ್ರಮವು ದಿನದ ಅವರ ಪೂಜೆಯು ಮುಗಿದೊಡನೆಯೇ ಆರಂಭವಾಗುತ್ತಿದ್ದಿತು. ಕೈಲಾಸಕ್ಕೆ ಹೋಗಿ ಮಹಾದೇವರನ್ನು ನೋಡಿ ಬರುವೆವೆಂದು ಅಯ್ಯನವರು ಜನರಿಗೆ ಹೇಳುತ್ತಿದ್ದರು. ಇದರಿಂದ ಅಯ್ಯನವರಿಗೆ ಬಹು ಜನರು ಮರುಳಾಗಿ ಅವನ ದಾಸಾನುದಾಸರಾಗಿ ಬಿಟ್ಟಿದ್ದರು. ಶ್ರೀರಾಜರಿದ್ದಾಗಲೂ ಒಮ್ಮೆ ಅಯ್ಯನವರ ಈ ಕ್ರಮವು ಸಾಗಲು ರಾಜರಿಂದ ಕೂಡಲೇ ನಾರಾಯಣಭೂತನಿಗೆ ಆಜ್ಞೆಯು ಹೋಯಿತು. ಬಳಿಕ ತಡವೇನು? ಅಯ್ಯನವರನ್ನು ಮುದ್ದೆಮಾಡಿ ಭೂತವು ಕೆಳಕ್ಕೆ ತಂದುಬಿಸುಟಿತು. ಈ ಸಂಗತಿಯು ಸಂಭವಿಸಿದ ಮೇಲೆ ಅಯ್ಯನವರ ಗುಟ್ಟೆಲ್ಲ ಬಯಲಿಗೆ ಬಿದ್ದಿತು. ಅಯ್ಯನವರು ಸಿಟ್ಟಿಗೆದ್ದು ರಾಜರೊಡನೆ ವಾದಕ್ಕೆ ಆರಂಭಿಸಿದರು. ಆಗಂತೂ ಅವನ ಗತಿಯು ಗಾಳಿಯು ಹಾರಿಸಿ ಒಯ್ಯುತ್ತಿರುವ ಎಲೆಯಂತೆ ಆಗಿಬಿಟ್ಟಿತು. ಆತನ ಮೇಲ್ಮೆಯ ಗುರುತುಗಳಂತಾಗಿ ಬಿಟ್ಟಿದ್ದ ಮುತ್ತಿನ ಆಸನ, ಮುತ್ತಿನ ಶಿರೋವೇಷ್ಟನ, ಕೊರಳಲ್ಲಿ ಗಂಟೆಯಿದ್ದ ಬಸವಣ್ಣನ ಬೊಂಬೆಗಳೆಲ್ಲ ರಾಜರ ವಶವಾಗಿ ಬಿಟ್ಟವು. ಅವನ್ನು ಸೋದೆಯ ಮಠದಲ್ಲಿ ಈಗಲೂ ನೋಡಬಹುದು. ರಾಜರ ಆರಾಧನೆಯ ಕಾಲಕ್ಕೆ ಈ ಪದಾರ್ಥಗಳನ್ನೆಲ್ಲ ಜನರಿಗೆ ತೋರಿಸಲಾಗುತ್ತದೆ. ಇದಲ್ಲದೆ ಅಯ್ಯನವರ ಸೋಲಿನ ಗುರುತಿಗಾಗಿ ಆರಾಧನೆಯ ಕಾಲಕ್ಕೆ ಕೆಲವು ಕಾರ್ಯಗಳು ಈಗಲೂ ಜರಗುತ್ತಲಿವೆ.

ಶ್ರೀರಾಜರು ಒಂದು ವರ್ಷದವರೆಗೆ ೧೫೦೦ ನೇ ಶಾಲಿವಾಹನದಲ್ಲಿ ಧರ್ಮಾನದಿಯ ಉಗಮಸ್ಥಳವಾದ ಇಸಳೂರೆಂಬಲ್ಲಿ ತಪವನ್ನಾಚರಿಸುತ್ತಿದ್ದರೆಂತಲೂ ಆ ಮೇಲೆ ಅವರ ಮಹಿಮೆಯು ಅಲ್ಲಿಯ ಲಿಂಗಾಯತ ಅರಸನೊಬ್ಬನಿಗೆ ತಿಳಿದುಬಂದು ತನ್ನ ಸೀಮೆಯಲ್ಲಿಯ

ಸೋದೆಯ ಸ್ಥಳವನ್ನು ಶ್ರೀರಾಜರಿಗೆ ಆತನು ಕೊಟ್ಟನೆಂತಲೂ ಬಳಿಕ ಅಲ್ಲಿಯೇ ಮಠವೊಂದನ್ನು ಕಟ್ಟಿಸಿಕೊಂಡು ಅಲ್ಲಿಯೇ ರಾಜರು ೧೫೦೧ರಿಂದ ಇರತೊಡಗಿದರೆಂತಲೂ ಮುಂದೆ ೧೫೨೫ ರಲ್ಲಿ ನಾರಾಯಣಭೂತನಿಂದ ಶ್ರೀ ತ್ರಿವಿಕ್ರಮದೇವರ ಗುಡಿಯನ್ನು ಬದರೀಕಾಶ್ರಮದಿಂದ ತರಿಸಿ ಪ್ರತಿಷ್ಠಾಪಿಸಿದರೆಂತಲೂ ಶಿಲಾಲೇಖಗಳಿಂದ ತಿಳಿದುಬರುತ್ತದೆ.

ಶ್ರೀರಾಜರ ಮಹಿಮೆಗಳನೇಕವಾಗಿದ್ದಂತೆ ಗ್ರಂಥಗಳೂ ಅನೇಕವಾಗಿವೆ. ಸಂಸ್ಕೃತ ಗ್ರಂಥಗಳಲ್ಲಿದ್ದ ಉತ್ತಮೋತ್ತಮ ತತ್ವರತ್ನಗಳಿಂದ ಕನ್ನಡ ನುಡಿದೇವಿಯನ್ನಲಂಕರಿಸಿದವರಲ್ಲಿ ಇವರು ಶ್ರೇಷ್ಠರಾದವರೆಂದು ಖ್ಯಾತಿಯಿದೆ. ಇವರು ಮಾಡಿದ ಗ್ರಂಥಗಳಲ್ಲಿ ಗೊತ್ತಾದವು ಕೆಳಗಿನಂತಿವೆ:—

| | | |
|---|---|---|
| ೧ | ಗುರ್ವರ್ಥದೀಪಿಕಾ | ಬ್ರಹ್ಮಸೂತ್ರಭಾಷ್ಯದ ಟಿಪ್ಪಣಿ |
| ೨ | ,, | ಗೀತಾಭಾಷ್ಯದ ಟಿಪ್ಪಣಿ |
| ೩ | ಪ್ರಮೇಯಸಂಗ್ರಹ | ಮಹಾಭಾರತ ತಾತ್ಪರ್ಯನಿರ್ಣಯದ ಟೀಕಾ |
| ೪ | ಗುರುರಾಜೀಯ | ಸುಧಾಕ್ಕೆ ಟಿಪ್ಪಣಿ |
| ೫ | ತಾತ್ಪರ್ಯಪ್ರಕಾಶಿಕಾ | ತತ್ವಪ್ರಕಾಶದ ಟಿಪ್ಪಣಿ |
| ೬ | ಈಶಾವಾಶ್ಯಭಾಷ್ಯ ಟಿಪ್ಪಣಿ | |
| ೭ | ತಂತ್ರಸಾರ ಟೀಕಾ | |
| ೮ | ಲಾಕ್ಷಾಭರಣ | ಶ್ರೀ ಮಹಾಭಾರತದಲ್ಲಿಯ ೧ ಲಕ್ಷ ಕಠಿಣ ಪದಗಳಿಗೆ ಅರ್ಥ |
| ೯ | ರುಕ್ಮಿಣೀಶವಿಜಯ | ಸ್ವತಂತ್ರಗ್ರಂಥ. ಕಾವ್ಯ. ೨-೩ ಅರ್ಥಗಳುಳ್ಳದ್ದಾಗಿ ಮನೋಹರವಾಗಿದೆ. ನೈಷದ ಕಾವ್ಯವನ್ನು ಮೀರುವಂತಿದೆ. |
| ೧೦ | ಸರಸಭಾರತೀವಿಲಾಸ | ಸ್ವತಂತ್ರವಾದ ಪ್ರಮೇಯಗ್ರಂಥ |
| ೧೧ | ಯುಕ್ತಿಮಲ್ಲಿಕಾ | ಸ್ವತಂತ್ರ ಗ್ರಂಥ. ಸ್ವಮತಸಾಧನ ಪರಮತ ಖಂಡನವುಳ್ಳ ಪ್ರಮಾಣ |

| | |
|---|---|
| | ಯುಕ್ತಿಗಳಿಂದ ಕೂಡಿದ ದೊಡ್ಡ ಗ್ರಂಥ |
| ೧೨ ದಶಾವತಾರಸ್ತೋತ್ರ (ಅಶ್ವಧಾಟಿ) | ಸ್ವತಂತ್ರ ಗ್ರಂಥ |
| ೧೩ ತೀರ್ಥಪ್ರಬಂಧ | ಸ್ವತಂತ್ರಗ್ರಂಥ. ಎಲ್ಲ ತೀರ್ಥಗಳನ್ನೂ ಸಂಚರಿಸಿ ಮಾಡಿದ ವರ್ಣನೆ. |
| ೧೪ ಮಹಾಭಾರತ ತಾತ್ಪರ್ಯ ನಿರ್ಣಯ | ೩೨ ಅಧ್ಯಾಯ, ಕನ್ನಡ ಭಾಷಾಂತರ. |
| ೧೫ ವಾಯುಸ್ತುತಿ | ೧೫ ಶ್ಲೋಕದ್ದು |
| ೧೬ ಉಡಪಿಯ ಕೃಷ್ಣ ಸ್ತೋತ್ರ | ೨೯ ಆಪಾದಸ್ತೋತ್ರ |
| ೧೭ ನರಸಿಂಹ ವರಾಹ ಸ್ತೋತ್ರ. | ೩೦ ವಿಷ್ಣುಸ್ತುತಿ |
| ೧೮ ವೃಣಪಾಖಂಡ ಖಂಡನ | ೩೧ ಶ್ರೀಶಗುಣದರ್ಪಣ |
| ೧೯ ವಾಯುಸ್ತುತಿ ಪುನಶ್ಚರಣ ವಿಧಾನ | ೩೨ ರಮೇಶಸ್ತುತಿ |
| ೨೦ ನ್ಯಾಯರತ್ನಾವಲಿ | ೩೩ ವೆಂಕಟೇಶ ಮಂಗಲಾಷ್ಟಕ |
| ೨೧ ಭೂಗೋಲ ವಿವರಣ | ೩೪ ನವಗ್ರಹಸ್ತೋತ್ರ |
| ೨೨ ಹರಿಭಕ್ತಿಸಾರ | ೩೫ ಕೇಶವಾದಿ ಚತುರ್ವಿಂಶತಿ ಮೂರ್ತಿ ಲಕ್ಷಣಾನಿ-ಸ್ತುತಿಃ |
| ೨೩ ಚಕ್ರಮೀಮಾಂಸಾ | ೩೬ ಪ್ರಾರ್ಥನಾದಶಕ |
| ೨೪ ಹಯಗ್ರೀವಸ್ತೋತ್ರ | ೩೭ ದಶಶ್ಲೋಕೀ |
| ೨೫ ಗೀತಾವ್ಯಾಖ್ಯಾನ ವಿವರಣ | ೩೮ ಹಿತೋಪದೇಶ |
| ೨೬ ಕಲ್ಪಲತಾ | ೩೯ ರೌಪ್ಯಪೀಠ ಕೃಷ್ಣಸ್ತೋತ್ರ |
| | ೪೦ ಚಕ್ರಸ್ತುತಿ |
| ೨೭ ಶ್ರುತಿತಲಪ್ರಕಾಶಿಕಾ | ೪೧ ಅಷ್ಟಮಹಿಷೀಕೃಷ್ಣಸ್ತೋತ್ರಂ |
| ೨೮ ತ್ರಿವಿಕ್ರಮಸ್ತೋತ್ರ | ೪೨ ಮಂಗಳಾಷ್ಟಕ |

೪೩ ಹಯಗ್ರೀವಪಂಚಕ ೪೫ ಹರ್ಯಷ್ಟಕ
೪೪ ಅಭಯಸ್ತೋತ್ರಂ ೪೬ ಶ್ಲೋಕತ್ರಯ

ಮೇಲಿನ ಗ್ರಂಥಗಳನ್ನು ಮಾಡುತ್ತ ಸೋದೆಯಲ್ಲಿಯೇ ಶ್ರೀರಾಜರು ಬಹುಕಾಲ ವಾಸವಾಗಿದ್ದರು. ಇವರು ಹಯಗ್ರೀವ ಪರಮಾತ್ಮನ ಉಪಾಸಕರು. ಇವರ ಭಕ್ತಿಗೆ ಒಲಿದು ಭಗವಂತನು ಹಯಗ್ರೀವ ರೂಪದಿಂದ ರಾಜರಿಗೆ ಹಿಂಭಾಗದಿಂದ ಸ್ಪರ್ಶಸುಖವನ್ನು ಕೊಡುತ್ತಿದ್ದನು. ಇವರ ಮಹಿಮೆಯನ್ನು ತೋರ್ಪಡಿಸುವ ಕಾರ್ಯಗಳಂತೂ ಇವರ ಆಯುಷ್ಯದ ಕಡೆಕಡೆಯ ಕಾಲಕ್ಕೆ ಸಂಭವಿಸಿದವು.

ಹೀಗೆ ಬಹುರೀತಿಯಿಂದ ಹೆಸರು ಪಡೆದವರಾಗಿ ಶ್ರೀರಾಜರು ಸೋದೆಯಲ್ಲಿಯೇ ತಮಗಾಗಿ ಮೊದಲೇ ಕಟ್ಟಿಸಿಕೊಂಡಿದ್ದ ವೃಂದಾವನದಲ್ಲಿ ಶಾಲಿವಾಹನ ೧೫೭೦ ಶಾರ್ವರಿ ಸಂವತ್ಸರದ ಫಾಲ್ಗುಣ ವದ್ಯ ೩ ಬುಧವಾರ ನಾರಾಯಣಧ್ಯಾನಪರರಾದರು. ಫಾಲ್ಗುಣ ಶುದ್ಧ ೧೦ ರಿಂದ ಪೌರ್ಣಿಮೆಯ ವರೆಗೆ ಶ್ರೀ ತ್ರಿವಿಕ್ರಮದೇವರ ಉತ್ಸವ ನಡೆದು ರಥೋತ್ಸವವು ಆಗುತ್ತದೆ. ಬಳಿಕ ವದ್ಯ ೩ ದಿವಸ ಶ್ರೀರಾಜರ ಆರಾಧನೆಯಾಗುತ್ತದೆ. ಆಗಿನ ವ್ಯವಸ್ಥೆಗಾಗಿ ಸೋದೇ ಮಠದ ಶ್ರೀಗಳು ಬಂದಿರುತ್ತಾರೆ.

ಉತ್ತರಾದಿ ಮಠದ ಶ್ರೀರಘುವರ್ಯ- ರಘೂತ್ತಮ- ವೇದವ್ಯಾಸತೀರ್ಥರೂ ವ್ಯಾಸರಾಯರ ಮಠದ ವ್ಯಾಸರಾಯರೂ ರಾಘವೇಂದ್ರಸ್ವಾಮಿಗಳ ಮಠದ ಶ್ರೀ ಸುರೇಂದ್ರ- ವಿಜಯೀಂದ್ರ- ಸುಧೀಂದ್ರತೀರ್ಥರೂ ಇವರ ಕಾಲದಲ್ಲಿಯೇ ಇದ್ದರು. ಭೂತರಾಜನ ಸ್ಥಳವೂ ಸೋದೆಯಲ್ಲಿಯೇ ಇದೆ.

---

# ಟೀಕಾ ಟಿಪ್ಪಣಿಕಾರರು.



## ೧ ತ್ರಿವಿಕ್ರಮಪಂಡಿತಾಚಾರ್ಯರು

ಶ್ರೀಮಧ್ವಮತದ ಹಬ್ಬುಗೆಯು ಅರಸನ ಬಲುಮೆಯಿಂದಾಗಲಿ ಅನನ್ಯಗತಿಕವಾದ ಪರಿಸ್ಥಿತಿಯ ಒತ್ತಾಯದಿಂದಲಾಗಲಿ ಆದದ್ದಲ್ಲವೆಂಬುದರ ಸತ್ಯತೆಯು ಈ ಆಚಾರ್ಯರ ಚರಿತ್ರೆಯಿಂದ ಚೆನ್ನಾಗಿ ವ್ಯಕ್ತವಾಗುವಂತಿದೆ. ಇದು ಎಲ್ಲರೂ ಲಕ್ಷದಲ್ಲಿಡತಕ್ಕಂತಹ ಮಾತಾಗಿದೆ.

ಆಚಾರ್ಯರ ವಾಸಸ್ಥಳವು ರಾಣೇಬೆನ್ನೂರ ತಾಲೂಕಿನ **ಕೊಡಿಯಾಲ** ಗ್ರಾಮವು. ಅಲ್ಲಿ ಇವರು ಶಾಲಿವಾಹನ ೧೧೦೦ನೇ ಶಕೆಯಲ್ಲಿದ್ದಂತೆ ತಿಳಿದುಬರುತ್ತಿದೆ. ಇವರು ಮೊದಲು ಅದ್ವೈತಿಗಳು. ಇವರ ತಂದೆಯ ಹೆಸರು **ಸುಬ್ರಹ್ಮಣ್ಯಪಂಡಿತರು**. ಇವರಿಗೆ ಆದ ಅಪತ್ಯಗಳೆಲ್ಲ ಇಲ್ಲದಂತಾದುದರಿಂದ ಮಕ್ಕಳಿಲ್ಲವೆಂಬ ಮರುಕವು ಇವರನ್ನು ಬಲವಾಗಿ ಬಾಧಿಸಿತು. ಆದುದರಿಂದಲೇ ದಂಪತಿಗಳು ಶ್ರೀಹರಿಹರೇಶ್ವರನನ್ನು ಅನನ್ಯಭಾವದಿಂದ ಮೊರೆಹೊಕ್ಕರು. ಅವನ ಅನುಗ್ರಹದಿಂದ ಪಂಡಿತರಿಗೆ ಒಂದು ಗಂಡುಕೂಸು ಜನಿಸಿತು. ಇದರ ಹೆಸರೇ **ತ್ರಿವಿಕ್ರಮಪಂಡಿತಾಚಾರ್ಯ**ರು. ಬಾಲ್ಯವು ಕಳೆಯುತ್ತಲೇ ಆಚಾರ್ಯರಿಗೆ ಅಕ್ಷರಾಭ್ಯಾಸವನ್ನು ಅವರ ತಂದೆಯವರೇ ಮಾಡಿಸಿದರು. ಸಂಸ್ಕಾರಗಳೂ ಸಮಯಕ್ಕೆ ತಕ್ಕಂತೆ ಜರುಗಿದವು. ದೇವರ ಅನುಗ್ರಹದಿಂದ ಹುಟ್ಟಿದ ಕೂಸು ! ಕೇಳುವದೇನು! ಕಾವ್ಯಾದಿಗಳೆಲ್ಲ ಅವರಿಗೆ ನೀರು ಕುಡಿದಂತಾಗಿ ಬಿಟ್ಟವು. ಶಾಸ್ತ್ರಾಭ್ಯಾಸದಲ್ಲಿಯಂತೂ ಒಮ್ಮೊಮ್ಮೆ ತಂದೆಯು ಕೂಡ ಮಗನೆದುರಿಗೆ ಕಾಲೂರಬೇಕಾಗುತ್ತಿದ್ದಿತು. ಎಲ್ಲ ಶಾಸ್ತ್ರಗಳೂ ಪ್ರಮೇಯಗಳೂ ಆಚಾರ್ಯರ ಕರತಲಾಮಲಕವಾದುವು. ಒಂದೂಕಾಲು ಲಕ್ಷ ಅದ್ವೈತ ಗ್ರಂಥಗಳು ಇವರ ನಾಲಿಗೆಯ ಮೇಲೆ ನಲಿದಾಡುತ್ತಿದ್ದುವೆಂದಮೇಲೆ

ಇವರ ಬುದ್ಧಿಯ ಬೆಲೆಯನ್ನು ಕಟ್ಟುವರಾರು! ಬಂದವರೆಲ್ಲರೂ ಇವರಿಗೆ ಶರಣಾಗತರಾಗದ ಹೊರತು ಗತ್ಯಂತರವಿರಲಿಲ್ಲ. ಕೆಲವರು ಇವರನ್ನು ನೋಡಲಿಕ್ಕೆ ಬರುತ್ತಿದ್ದರು; ಹಲವರು ಇವರಲ್ಲಿ ಓದಲಿಕ್ಕೆ ಬರುತ್ತಿದ್ದರು; ಹೀಗಾಗಿ ಆಚಾರ್ಯರ ಮನೆಯಲ್ಲಿ ಗಲಭೆಯೇ ಗಲಭೆ.

ಇಂತು ಶಾಸ್ತ್ರಸಾಗರರಾದಂತಹ ಆಚಾರ್ಯರ ಬುದ್ಧಿಯನ್ನೂ ಸಂಶಯಪರಂಪರೆಗಳು ಆವರಿಸದಿರಲಿಲ್ಲ. ಅದ್ವೈತಾರ್ಥಕ್ಕೆ ಅನುಸಾರವಾಗಿ ಸೂತ್ರಾರ್ಥಗಳಲ್ಲಿ ಆಚಾರ್ಯರಿಗೆ ವಿರೋಧವು ತೋರತೊಡಗಿತು. ಎತ್ತಿತ್ತಲೋ ಹರಿದು, ಹಾಯ್ದು ಅಲೆದಾಡಿದರೂ ವಿರೋಧವು ಹೋಗದಂತಾಯಿತು. ಆದುದರಿಂದ ಆಚಾರ್ಯರು ಡೋಲಾಯಮಾನರಾಗಿ ಯಾವಾಗಲೂ ಎಣಿಕೆಯನ್ನೇ ಹಾಕುತ್ತಿದ್ದರು.

ಒಮ್ಮೆ ಆಚಾರ್ಯರ ತಂದೆ ಸುಬ್ರಹ್ಮಣ್ಯಶಾಸ್ತ್ರಿಗಳು ಮಗನನ್ನು ಏಕಾಂತದಲ್ಲಿ ಕರೆದು:– "ಮಾಯಾವಾದಿಗಳಂತೆ ದೇವರು ನಿರ್ಗುಣನು, ನಿರಾಕಾರನಾದರೆ ಅಂತಹನ ಉಪಾಸನೆಯಿಂದ ಫಲವೇನು? 'ತಂ ಯಥೋಪಾಸತೇ ತಥೈವ ಭವತಿ' ಎಂಬಂತೆ ಉಪಾಸನೆಯಿಂದ ಸಿಗಲಿರುವ ಫಲವಾದರೂ ನಿರ್ಗುಣ, ನಿರಾನಂದವಾದದ್ದೇ ದೊರೆಯುವದಾದ್ದರಿಂದ ಆ ಫಲವು ಯಾರಿಗೆ ತಾನೇ ಬೇಕಾದೀತು? ಈ ವಿಷಯವು ನನಗಂತೂ ತಿಳಿಯುವಂತೆ ಹೊಳೆಯದಾಗಿದೆ'' ಎಂದು ಮುಂತಾಗಿ ಮಾತಾಡಿದರು. ಈ ಮೇಲೆಯಂತೂ ಆಚಾರ್ಯರ ಎಣಿಕೆಯು ಇಮ್ಮಡಿಸಿತು. ಇಪ್ಪತ್ತೊಂದು ಭಾಷ್ಯಗಳನ್ನು ಕಲಕಿಯಾಡಿ ನೋಡಿದರು. ತತ್ವವು ತಿಳಿಯದಾಯ್ತು. ಅವು ಒಂದಕ್ಕೊಂದು ವಿರೋಧವೇ ಇದ್ದುದು ಅವರಿಗೆ ಕಂಡುಬಂದಿತು. ಆಗ ಆಧಾರ ಗ್ರಂಥಗಳನ್ನೆಲ್ಲ ಬಿಟ್ಟುಕೊಟ್ಟು ಆಚಾರ್ಯರು ಸ್ವತಂತ್ರವಾಗಿ ಬ್ರಹ್ಮಸೂತ್ರಗಳಲ್ಲಿ ಒಳಹೊಕ್ಕು ನೋಡತೊಡಗಿದರು.

ಈ ರೀತಿಯಾಗಿ ಅವರ ಎಣಿಕೆಯು ಬಲವಾಗಿ ಸಾಗಿರುವಾಗಲೇ ಇವರೂರ ಬಳಿ ಶ್ರೀಮದಾಚಾರ್ಯರ ಆಗಮನವಾಯಿತು. ಕಂಡೆಡೆಗಳಲ್ಲೆಲ್ಲ ಅದ್ವೈತವಾದಿಗಳನ್ನು ಗೆಲ್ಲುತ್ತ ತಮ್ಮ ಮತಮಾರ್ತಾಂಡನ ಪ್ರಕಾಶದಿಂದ ಅವರು ಜನರ ಕಣ್ಣುಗಳನ್ನು ಕುಕ್ಕಿಸು

ತ್ತಿರುವುದು ಅನೇಕ ಮಾಯಾವಾದಿಗಳಿಗೆ ಅಸಹ್ಯವಾಗಿದ್ದಿತು. ಎಷ್ಟೋ ಜನರು ತಾಗುತ್ತಿದ್ದರು; ಆದರೆ ಅವರವಸ್ಥೆಯು ದೀಪದ ಹುಳಗಳಂತಾಗಿಬಿಡುತ್ತಿತ್ತು. ಆದ್ದರಿಂದ ತ್ರಿವಿಕ್ರಮಪಂಡಿತಾಚಾರ್ಯರಿಗೆ ಎಲ್ಲರೂ ಮರೆಹೊಕ್ಕರು. ಪ್ರಬಲ ಶತ್ರುವನ್ನು ಯಥಾಯೋಗ್ಯವಾಗಿ ಎದುರಿಸುವುದಕ್ಕೆ ನೀವಲ್ಲದೆ ಅನ್ಯರಾರಿಲ್ಲವೆಂದು ಅವರನ್ನು ಬೇಡಿಕೊಂಡರು. ಇಷ್ಟರಲ್ಲಿ ಅವರ ತಮ್ಮಂದಿರಾದ **ಶಂಕರಶಾಸ್ತ್ರಿ**ಗಳು ಶ್ರೀಮದಾಚಾರ್ಯರ ಶಿಷ್ಯರಾಗಿ ಬಿಟ್ಟಿದುದನ್ನು ಕಂಡಂತೂ ಶ್ರೀಮದಾಚಾರ್ಯರನ್ನು ಎದುರಿಸುವ ಉತ್ಕಟೇಚ್ಛೆಯು ಪಂಡಿತಾಚಾರ್ಯರನ್ನು ಒತ್ತರಿಸಿತು. ಎದುರಾದರು; ಆದರೆ ಅವರ ಅನುಗ್ರಹಕಾಲವು ಸಮೀಪಿಸಿದ್ದುದರಿಂದಲೇ ಸೂರ್ಯನು ಬರುತ್ತಲೇ ಸದ್ದಿಲ್ಲದೆ ಸರಿದುಹೋಗುವ ಕತ್ತಲೆಯಂತೆ ಪಂಡಿತಾಚಾರ್ಯರ ಸಂಶಯಗಳೆಲ್ಲ ಪರಿಹಾರವಾಗಿ ಅವರೂ ಶ್ರೀಮದಾಚಾರ್ಯರಿಗೆ ಶರಣು ಹೋಗಿಬಿಟ್ಟರು. ಮಧ್ವಮತದಲ್ಲಿ ಸತ್ಯ ತತ್ವಗಳೇ ಬಿತ್ತರಿಸಲಾಗಿವೆಯೆಂದು ಬರಬರುತ್ತ ಪಂಡಿತಾಚಾರ್ಯರಿಗೆ ಮನದಟ್ಟಾಗಿಯೇ ಹೋಯಿತು. ಎಲ್ಲ ದ್ವೈತಶಾಸ್ತ್ರವನ್ನು ಅವರು ಶ್ರೀಮದಾಚಾರ್ಯರ ಬಳಿಯಲ್ಲಿ ಅಧ್ಯಯನಮಾಡಿ ಮುಗಿಸಿದರು. ಆ ಮೇಲೆ ತಮ್ಮವರೆಲ್ಲರಿಗೂ ದ್ವೈತಮತದ ತಿರುಳನ್ನು ತಿಳಿಹೇಳಿದರು. ಆಗ ದ್ವೈತಮತವು ಬಲು ಪ್ರಬಲಿಸಿತು.

ಮುಂದೆ ಪಂಡಿತಾಚಾರ್ಯರು ತಮ್ಮ ಆಯುಷ್ಯವನ್ನೆಲ್ಲ ದ್ವೈತಬೋಧಕ ಗ್ರಂಥಗಳನ್ನು ಬರೆವಲ್ಲಿಯೇ ಕಳೆದುಬಿಟ್ಟರು. ಅವರು ಕೆಳಗಿನ ಗ್ರಂಥಗಳನ್ನು ರಚಿಸಿದ್ದಾರೆ.

೧) ಉಷಾಹರಣಕಾವ್ಯ
೨) ತತ್ವಪ್ರದೀಪ — ಶ್ರೀಮದಾಚಾರ್ಯರ ಭಾಷ್ಯಕ್ಕೆ ಮೊದಲನೆಯ ಟೀಕಾ
೩) ವಾಯುಸ್ತುತಿ
೪) ನೃಸಿಂಹಸ್ತುತಿ
೫) ಮಧ್ವಮತಾಮೃತ ಮಹಾರ್ಣವ

ಇವರ ತಮ್ಮಂದಿರಾದ ಶಂಕರಶಾಸ್ತ್ರಿಗಳ ಮಕ್ಕಳಾದ **ನಾರಾಯಣಪಂಡಿತಾಚಾರ್ಯ**ರೂ ಕಕ್ಕನಂತೆ ಮುಂದೆ ಹೆಸರು ಪಡೆದರು.

## ೨ ನಾರಾಯಣಪಂಡಿತಾಚಾರ್ಯರು

ಇವರು ತ್ರಿವಿಕ್ರಮಪಂಡಿತಾಚಾರ್ಯರ ತಮ್ಮಂದಿರ ಮಕ್ಕಳೆಂದು ಹಿಂದೆ ಬಂದಿದೆ. ಹೊಸದಾಗಿ ಮತಸ್ವೀಕಾರವಾಗಿದ್ದುದರಿಂದ ಇವರ ತಂದೆಯ ಉತ್ಸಾಹವು ಬಹುವಾಗಿದ್ದಿತು. ಆದುದರಿಂದಲೇ ಅವರು ಮಗನ ಅಭ್ಯಾಸವ ಭಾರವನ್ನೆಲ್ಲ ತಮ್ಮ ಮೇಲೆಯೇ ತೆಗೆದುಕೊಂಡು ಅವನನ್ನು ಅದ್ವಿತೀಯ ಪಂಡಿತನನ್ನಾಗಿ ಮಾಡಿದರು. ಮಗನು ಹೊಸ ಹುರುಪಿನಿಂದ ದ್ವೈತತತ್ವಗಳನ್ನು ಎಲ್ಲೆಡೆಯಲ್ಲಿಯೂ ಉತ್ಸಾಹದಿಂದ ಬಿತ್ತಿದನು.

ಶ್ರೀಮದಾಚಾರ್ಯರು ಮತಪ್ರಸಾರಕ್ಕೆಂದು ಸಂಚಾರಮಾಡಿದುದನ್ನು ಕಣ್ಣಾರೆ ಕಂಡು ಆಗ ವರ್ತಿಸಿದ ಎಲ್ಲ ಸಂಗತಿಗಳನ್ನು ನಾರಾಯಣಪಂಡಿತಾಚಾರ್ಯರು "**ಸುಮಧ್ವವಿಜಯ**'' ವೆಂಬ ಗ್ರಂಥವಲ್ಲಿ ೧೬ ಸರ್ಗಗಳಲ್ಲಿ ವಿಸ್ತಾರವಾಗಿ ವರ್ಣಿಸಿದ್ದಾರೆ. ಆ ಗ್ರಂಥದ ಮಹಾತ್ಮೆಯು ಅತಿ ಬೆಳೆದು ಜನರೆಲ್ಲರೂ ಅದನ್ನು ನಿತ್ಯ ಪಾರಾಯಣಮಾಡಲಿಕ್ಕಾರಂಭಿಸಿದರು. ಪಂಡಿತಾಚಾರ್ಯರ ತಾಯಿಯಂತೂ ಆದರ ೧೬ ಸರ್ಗಗಳನ್ನು ಪಾರಾಯಣಮಾಡದೆ ಊಟವನ್ನೇ ಮಾಡುತ್ತಿರಲಿಲ್ಲ. ಆದರೆ ಒಮ್ಮೆ ಸಾಧನೆಯ ದ್ವಾದಶಿ ಬಂದು ಪಾರಾಯಣವು ಪೂರ್ಣವಾಗುವುದು ದುಃಸಾಧ್ಯವಾಗಿ ತೋರಿತು. ಈ ವಿವರವನ್ನು ತಾಯಿಯವರಿಂದ ಅರಿತು ಆ ಕೂಡಲೇ ಅತಿ ಭಕ್ತಿಯಿಂದ ಒಂದೊಂದು ಸರ್ಗಕ್ಕೆ ಎರಡೆರಡು ಶ್ಲೋಕಗಳಂತೆ ೩೨ ಶ್ಲೋಕಗಳುಳ್ಳ "**ಅಣುಮಧ್ವವಿಜಯ**'' ವೆಂಬ ಗ್ರಂಥವನ್ನು ಅಲ್ಲಿಯೇ ರಚಿಸಿ ತಾಯಿಯವರ ಪಾರಾಯಣಕ್ಕೆ ಅನುಕೂಲವನ್ನು ಮಾಡಿಕೊಟ್ಟರು. ಇದರಿಂದ ಇವರ ಪಾಂಡಿತ್ಯವು ವ್ಯಕ್ತವಾಗುತ್ತದೆ. ಇವೆರಡಲ್ಲದೆ ಕೆಳಗಿನ ಗ್ರಂಥಗಳನ್ನೂ ಅವರು ಬರೆದಿದ್ದಾರೆ.

೩) ಸಂಗ್ರಹ ರಾಮಾಯಣ
೪) ಮುಕಭಾರತ ಟಿಪ್ಪಣಿ

| | | |
|---|---|---|
| ೫) | ಮಣಿಮಂಜರಿ | ಕೃಷ್ಣಕಥಾ. ಶ್ರೀಮದಾಚಾರ್ಯರ ಅವತಾರಕ್ಕೆ ಮೊದಲಿನ ಜನರ ಸ್ಥಿತಿಯ ವರ್ಣನೆ |
| ೬) | ಲಘುತಾರತಮ್ಯ | |
| ೭) | ಮಧ್ವಮಂತ್ರಾರ್ಥಮಂಜರಿ | |
| ೮) | ಅದ್ವೈತಕಾಲಾನಲ | |
| ೯) | ಶಿವಸ್ತುತಿ | |
| ೧೦) | ಅಣುವ್ಯಾಖ್ಯಾನ ಟಿಪ್ಪಣಿ | ನಯಚಂದ್ರಿಕಾ |
| ೧೧) | ತಿಥಿತ್ರಯ ಮೀಮಾಂಸಾ | (೧೦-೧೧-೧೨) ದಶಮೀ, ಏಕಾದಶಿ, ದ್ವಾದಶಿಯ ನಿರ್ಣಯ |

ಇವರು ೧೧೧೦-೧೨೦೦ ನೇ ಶಕೆಯ ಸುಮಾರಿಗೆ ಇದ್ದರು.

## ೩ ಆದ್ಯ ಮನೆತನದ ಚರಿತ್ರೆ

**ಶೇಷನಾಯಕ**ರೆಂಬ ಈ ಮನೆತನದೊಬ್ಬರಿಗೆ **೧) ವರದರಾಜಾಚಾರ್ಯ**ರೆಂಬ ಮಕ್ಕಳಿದ್ದರು. 'ಆದ್ಯ' ಎಂದು ಮನೆತೆನಕ್ಕೆ ಹೆಸರು ಬರಲು ಈ ಆಚಾರ್ಯರೇ ಕಾರಣರಾದರು. ಇವರು ಉತ್ತರಾದಿ ಮಠದ ಶ್ರೀರಘುನಾಥತೀರ್ಥರಲ್ಲಿ ಅಧ್ಯಯನವನ್ನು ಮಾಡಿ ಚತುಃಶಾಸ್ತ್ರದಲ್ಲಿ ಪಾಂಡಿತ್ಯವನ್ನು ಸಂಪಾದಿಸಿದರು. ಇವರಿಗೆ ಶಿಷ್ಯರು ಬಹು ಜನರಿದ್ದರು. ಪರವಾದಿಗಳನ್ನು ಗೆಲ್ಲುತ್ತ ಯಾವಾಗಲೂ ಸಂಚಾರಮಾಡುವುದೊಂದು ಚಟವೇ ಆಚಾರ್ಯರಿಗೆ ಬಿದ್ದಿದ್ದಿತು. ಈ ರೀತಿಯಾಗಿ ಸಂಚಾರದಲ್ಲಿರುತ್ತಿರುವಾಗ ಇವರ ಪಾಠಪ್ರವಚವನಗಳಿಗಂತೂ ಲೆಕ್ಕವೇ ಇರಲಿಲ್ಲ. ಇದರಿಂದ ಇವರ ಕೀರ್ತಿಯು ಬಹುಕಡೆಯಲ್ಲಿ ಪಸರಿಸಿತು.

ಒಮ್ಮೆ ಇವರು ಮಠದಲ್ಲಿಯೇ ಇದ್ದಾಗ ಶ್ರೀವ್ಯಾಸರಾಯ ಸ್ವಾಮಿಗಳು ಅಲ್ಲಿಗೆ ದಯಮಾಡಿಸಿದರು. ಆಗ ಆಚಾರ್ಯರದು ಅವರ ಮುಂದೆ ಶಾಸ್ತ್ರಾರ್ಥವಿಚಾರವಾಯಿತು. ಆಗ ಉಭಯ ಸ್ವಾಮಿಗಳೂ ಆಚಾರ್ಯರ ವಾಗ್ಲಹರಿಯನ್ನು ಕಂಡು ಬೆರಗಾದರು. ಆಗ ಶ್ರೀ

ರಘುನಾಥತೀರ್ಥರು ತಮ್ಮ ಮಠಕ್ಕೆ ಆಚಾರ್ಯರು ಬಹು ಭೂಷಣಾಸ್ಪದರೆಂದು ಮನಗಂಡು ಅವರನ್ನು ಅಂದಿನಿಂದ **"ಆದ್ಯ"** ರೆಂಬ ಬಹುಮಾನದ ಹೆಸರಿನಿಂದ ಕರೆಯತೊಡಗಿದರು. ಮತ್ತು ಈ ದಿನದಿಂದ ಮಠದಲ್ಲಿ ತೀರ್ಥ ಮೊದಲಾದ ಮಾನಗಳು ಇವರಿಗೇ ಮೊದಲು ದೊರೆಯಲಾರಂಭಿಸಿದುವು. ಆ ರೀತಿಯು ಆದ್ಯ ಮನೆತನದವರಿಗೆ ಈಗಲೂ ನಡೆಯುತ್ತಿದೆ. ಇವರು ಮಹಾಭಾರತ ತಾತ್ಪರ್ಯ ನಿರ್ಣಯಕ್ಕೆ "ವರದ ರಾಜೀಯ" ವೆಂಬ ವ್ಯಾಖ್ಯಾನವನ್ನು ರಚಿಸಿದ್ದಾರೆ. ಇವರು ಶಾಲಿವಾಹನ ಶಕೆಯ ೧೪೦೦-೧೫೨೦ ರಲ್ಲಿ ಇದ್ದರೆಂದು ತಿಳಿಯುತ್ತದೆ.

ಇವರಿಗೆ ನರಹರಾಚಾರ್ಯ, ಗುರುರಾಜಾಚಾರ್ಯ, ಆನಂದತೀರ್ಥಾಚಾರ್ಯ, ಕೇಶವಾಚಾರ್ಯರೆಂಬ ನಾಲ್ವರು ಮಕ್ಕಳಿದ್ದರು. ಇವರಾದರೂ ಸರ್ವಜ್ಞಶಾಸ್ತ್ರದಲ್ಲಿ ಮಹಾಪಂಡಿತರಾಗಿದ್ದರು. ಇವರೊಳಗಿನ **ನರಹರಾಚಾರ್ಯ**ರೆಂಬವರು ಕೆಳಗಿನ ಗ್ರಂಥಗಳನ್ನು ಬರೆದಿದ್ದಾರೆ.

೧) ಭಾಗವತ ತಾತ್ಪರ್ಯ ೧೨ ಸ್ಕಂದಗಳಿಗೆ ಟಿಪ್ಪಣಿ.
೨) ವಿಷ್ಣುಪುರಾಣ ಟಿಪ್ಪಣಿ.
೩) ಸ್ಮೃತಿಕೌಸ್ತುಭ.

ಮೂಲ ವರದರಾಜಾಚಾರ್ಯರಿಂದ ೪ನೆಯ ತಲೆಯಲ್ಲಿ ಅದೇ ಹೆಸರಿನ ಮತ್ತೊಬ್ಬ ಪಂಡಿತರು ಈ ಮನೆತನದಲ್ಲಿ ಆಗಿಹೋದರು. ಅವರು ಭಾಷ್ಯತಾತ್ಪರ್ಯಗಳನ್ನನುಸರಿಸಿ ಗೀತೆಗೆ ಕನ್ನಡದಲ್ಲಿ ಟೀಕೆಯನ್ನು ಬರೆದಿದ್ದಾರೆ. ಅವರಿಗೆ ರಘುನಾಥಾಚಾರ್ಯ, ೧ ಶೇಷದಾಸಾಚಾರ್ಯರೆಂಬ ಇಬ್ಬರು ಮಕ್ಕಳಿದ್ದರು. ಇವರೊಳಗಿನ ೧ ಶೇಷದಾಸಾಚಾರ್ಯರಿಗೆ ಮಕ್ಕಳಿಬ್ಬರು. ಅವರ ಹೆಸರು ೨ ವರದರಾಜಾಚಾರ್ಯ, ಕೃಷ್ಣದ್ವೈಪಾಯನಾಚಾರ್ಯರು. **ಈ ೨ ವರದರಾಜಾಚಾರ್ಯ**ರೂ ಕುಂಭಘೋಣದಲ್ಲಿ ಶಾಸ್ತ್ರಾಭ್ಯಾಸವನ್ನು ಮಾಡಿ ಮಹಾ ವಿದ್ವಾಂಸರಾದರು. ಆಗ ಮೈಸೂರತ್ತಣಿಂದ ಬಂದ **ಸದಾ**

**ಶಿವಶಾಸ್ತ್ರಿ**ಯೆಂಬವರನ್ನು ವಾದದಲ್ಲಿ ಸೋಲಿಸಿ ಇವರು ಅವರಿಂದ ಜಯಪತ್ರವನ್ನು ಪಡೆದುದಲ್ಲದೆ ಅವರಿಗೆ ಸಿಕ್ಕವುಗಳನ್ನೆಲ್ಲ ಅವರಿಂದ ಕಿತ್ತಿಕೊಂಡರೆಂದು ಆಖ್ಯಾಯಿಕೆಯಿದೆ. ಈ ಸಂಗತಿಯು ಜರುಗಿದುದರಿಂದಲೇ ಇವರಿಗೆ ಕುಂಭಘೋಣದ ರಾಜನಿಂದ ಬಹುಮಾನ ಧನವಸ್ತ್ರಾದಿಗಳು ದೊರೆತವಂತೆ. ಆ ಮೇಲೆ ಇವರು ತಮ್ಮೂರಿಗೆ (ಮಣ್ಣೂರಿಗೆ) ದಯಮಾಡಿಸಿದರು. ಇವರು ತತ್ವಪ್ರಕಾಶಕ್ಕೆ **ಸುಬೋಧಚಂದ್ರಿಕೆ**ಯೆಂಬ ಟಿಪ್ಪಣಿಯನ್ನು ಬರೆದಿದ್ದಾರೆ. ಆ ಗ್ರಂಥವು ಕುಂಭಘೋಣದಲ್ಲಿಯೇ ಉಳಿದು ಇದೀಗ ಬೇರೆ ಯಾರದೋ ಹೆಸರಿನಲ್ಲಿ ಹೊರಬಿದ್ದಂತೆ ತಿಳಿಯುತ್ತದೆ.

ಇವರು ಸಾತಾರೆಯ **ಶಾಹು ಛತ್ರಪತಿ**ಯ ಸಭೆಗೆ ಹೋಗಿದ್ದರು. ಅಲ್ಲಿದ್ದ **ವಜ್ರಟಂಕ**ರೆಂಬ ಪ್ರಸಿದ್ಧ ಪಂಡಿತರನ್ನು ಸಹಜವಾಗಿ ಸೋಲಿಸಿ ಛತ್ರಪತಿಯಿಂದ ಮನ್ನಣೆಯನ್ನು ಹೊಂದಿದರು. ಈ ಮುಂದೆ ಭೂಯಾರದ ೧/೪ವನ್ನೂ ದಿಗಸಂಗಿ, ಜಂಗಲಗಿ, ಪಡಗಾನೂರ ಗ್ರಾಮಗಳನ್ನೂ ಸಂಪಾದಿಸಿದರೆಂದು ಗೊತ್ತಾಗುತ್ತಿದೆ. ಇವರ ಅಂತ್ಯವು ಪುಣೆಯಲ್ಲಿ ಆಯಿತು. ಮೂರನೆಯ ದಿನ ಬೂದಿಯನ್ನು ಬಳಿಯಲು ಹೋದಾಗ ಬೂದಿಯು ಕಾಣದೆ ದಹನದ ಸ್ಥಳದಲ್ಲಿ ಒಂದು ಅಶ್ವತ್ಥವೃಕ್ಷವು ಕಂಡಿತೆಂತಲೂ ಆ ವೃಕ್ಷವು ಅಲ್ಲಿ ಈಗಲೂ ಇದೆಯೆಂತಲೂ ಬಲ್ಲವರು ಹೇಳುತ್ತಾರೆ. ಇವರ ಕಾಲವು ೧೬೩೦ನೇ ಶಾಲಿವಾಹನವೆಂದು ತಿಳಿಯುತ್ತದೆ.

ಈ ೨ ವರದರಾಜಾಚಾರ್ಯರ ಮಕ್ಕಳು ೨ **ಶೇಷದಾಸಾಚಾರ್ಯ**ರು. ಇವರ ಅಭ್ಯಾಸವು ಕಕ್ಕಂದಿರಾದ ಕೃಷ್ಣದ್ವೈಪಾಯನಾಚಾರ್ಯರಲ್ಲಾಯಿತು. ಇವರಾದರೂ ಮನೆತನದ ಮಾನವನ್ನು ಮುಂದೆ ತರುವಂತಹ ಯೋಗ್ಯತೆಯನ್ನು ಪಡೆದರು. ಚಂದ್ರಿಕಾಕ್ಕೆ ಕೆಲವು ಟಿಪ್ಪಣಿಗಳನ್ನೂ ಜಗನ್ಮಿಥ್ಯಾತ್ವವನ್ನು ನಿರಾಕರಿಸಿ ಶ್ರೀಟೀಕಾಕೃತ್ಪಾದರ ಸ್ತೋತ್ರವನ್ನು ಅಷ್ಟಕದಲ್ಲಿಯೂ ಮಾಡಿದ್ದಾರೆ. ಬಳ್ಳೊಳ್ಳಿ ಪರಗಣೆಯ ಹಲಸಂಗಿ, ನಂದಿಕೂರ ಪರಗಣೆಯ ಕಲಕುರ್ಗಾ, ವಡ್ಡನಹಳ್ಳಿ ಪರಗಣೆಯ ಯಾತಗಿರಿಯೆಂಬ ಗ್ರಾಮಗಳನ್ನು ಸಂಪಾ

ದಿಸಿ ಇವರು ತಮ್ಮ ಕಕ್ಕ ಕೃಷ್ಣದ್ವೈಪಾಯನಾಚಾರ್ಯರ ಮಕ್ಕಳು **ವೆಂಕಟಾಚಾರ್ಯ**ರೆಂಬವರ ಹೆಸರಿನಲ್ಲಿ ದಾನಪತ್ರಮಾಡಿಸಿದಂತೆ ತಿಳಿಯುತ್ತದೆ. ಅಗರಖೇಡ ಗ್ರಾಮದ ದಾನಪತ್ರದಲ್ಲಿ ಶೇಷದಾಸಾಚಾರ್ಯರ ಹೆಸರೇ ಇದೆ.

**ಕೃಷ್ಣದ್ವೈಪಾಯನಾಚಾರ್ಯ**ರು ತಮ್ಮ ಅಣ್ಣಂದಿರಾದ ೨ ವರದರಾಜಾಚಾರ್ಯರಲ್ಲಿ ಶಾಸ್ತ್ರಾಧ್ಯಯನವನ್ನು ಮಾಡಿ ಪಂಡಿತರಾದರು. ಪುಣೆಯ ಸಭೆಯಲ್ಲಿ ಇವರ ವಿದ್ವತ್ತೆಯು ಬಹಳ ಪ್ರದರ್ಶಿತವಾಯಿತೆಂದು ತಿಳಿಯುತ್ತದೆ. ಇವರು **"ಅನುಗತಸಾಮಾನ್ಯ ಖಂಡನಪೂರ್ವಕ ಸ್ವಮತರೀತ್ಯಾ ಸಾಮಾನ್ಯವ್ಯವಸ್ಥಾಪಕಸಾಮಾನ್ಯ ವಾದ"** ಮತ್ತು ಪ್ರಮಾಣಪದ್ಧತಿಗೆ ವ್ಯಾಖ್ಯಾನ ಈ ಎರಡು ಗ್ರಂಥಗಳನ್ನು ಬರೆದಿದ್ದಾರೆ.

ಇವರು ಜ್ಞಾನಭಾಂಡಾರದಂತೆ ಧನಭಾಂಡಾರವನ್ನೂ ಬೆಳೆಸಿದ್ದಾರೆ. **ಶ್ರೀಮಂತ ಬಾಳಾಜೀ ಬಾಜೀರಾವ ಊರ್ಫ ನಾನಾಸಾಹೇಬ ಪೇಶವೆ**ಯವರಿಂದ ಅಗರಖೇಡವೂ ಭೂಯಾರದ ಉಳಿದ ೩/೪ ವೂ ಇವರಿಗೆ ಉಂಬಳಿಯಾಗಿ ದೊರಕಿವೆ. ಆ ಉಂಬಳಿಯು ಆಚಾರ್ಯರ ಮಕ್ಕಳ ಮತ್ತು ಅಣ್ಣಂದಿರಾದ ೨ ವರದರಾಜಾಚಾರ್ಯರ ಮಕ್ಕಳು ಶೇಷಾಚಾರ್ಯರ ಹೆಸರಲ್ಲಿದೆ. ತಮ್ಮ ಅಣ್ಣಂದಿರು ತಾವು ದೊರಕಿಸಿದ ಗ್ರಾಮಗಳ ದಾನಪತ್ರದಲ್ಲಿ ತಮ್ಮ ಹೆಸರನ್ನು ಹಾಕಿಸಿದ್ದು ದನ್ನು ಸ್ಮರಿಸಿಯೇ ಕೃಷ್ಣದ್ವೈಪಾಯನಾಚಾರ್ಯರು ಈ ರೀತಿ ಮಾಡಿದ್ದಾರೆ. ಈ ದಾನಪತ್ರವು ತುಂಗಾತೀರದ ಹರಿಹರ ಕ್ಷೇತ್ರದಲ್ಲಿ ಶಾ. ಶಕೆ ೧೭೭೪ರಲ್ಲಿ ಆಯಿತು. ಇವರಿಗೆ ಐವರು ಮಕ್ಕಳು. ಅವರಲ್ಲಿ ಮೂರನೆಯವರು **ರಾಯಕೇಶವಾಚಾರ್ಯ**ರೆಂಬವರು ದೊಡ್ಡ ಪಂಡಿತರು. ಅವರು ೧) **ಆದ್ಯವಂಶಪ್ರದೀಪ** ೨) **ಗ್ರಸ್ತಾಸ್ತನಿರ್ಣಯ** ೩) **ಕೃಷ್ಣಾಷ್ಟಮೀನಿರ್ಣಯ** ಎಂಬ ಗ್ರಂಥಗಳನ್ನು ಬರೆದಿದ್ದಾರೆ.

ಈ ಆದ್ಯಮನೆತನದವರು ಈಗ ಮಣ್ಣೂರ, ಅಗರಖೇಡ, ಭೂಯಾರ, ಪಡಗಾನೂರುಗಳಲ್ಲಿರುತ್ತಾರೆ. **ಮನೆತನಸ್ಥ** ಆಚಾರ್ಯರಲ್ಲಿ ಇವರೇ ಬಹು ಪುರಾತನರು.

## ೪ ಆನಂದಭಟ್ಟ ಪಾಂಡುರಂಗಿ

ಇವರು ಪಾಂಡುರಂಗಿಯವರ ಮೂಲಪುರುಷರು. ಇವರ ಮೂಲಸ್ಥಳವು ಅಹಮುದನಗರ,ಜಿಲ್ಹೆಯ ಪುಣ್ಯಸ್ತಂಭ (ಪುಣತಾಂಬಾ) ಎಂಬೂರು. ಏನೋ ಮನೆಜಗಳದ ಮೂಲಕ ಇವರು ತಮ್ಮೂರನ್ನು ಬಿಟ್ಟು ಒಮ್ಮೆ ಕೊಲ್ಹಾಪುರಕ್ಕೆ ಹೊರಟಿದ್ದು ಹೋದರು. ಆಗ ಅವರು ಅಷ್ಟೊಂದು ಅಕ್ಷರಸ್ಥರೂ ಇರಲಿಲ್ಲ; ಧನವಂತರೂ ಇರಲಿಲ್ಲ. ಆದುದರಿಂದ ಅವರು ಶ್ರೀಲಕ್ಷ್ಮೀದೇವಿಯ ಸೇವೆಯನ್ನು ೧೨ ವರ್ಷಗಳ ವರೆಗೆ ಬಹು ಭಕ್ತಿಯಿಂದ ಮಾಡಿದರು. ಲಕ್ಷ್ಮೀದೇವಿಯು ಅವರ ಸೇವೆಗೆ ಮೆಚ್ಚಿ ರಾತ್ರಿ ಕನಸಿನಲ್ಲಿ ಒಮ್ಮೆ "ಸರ್ಪರೂಪದಿಂದ ನಾಳೆ ನಾನು ನಿನಗೆ ಕಾಣಿಸಿಕೊಳ್ಳುವೆನು. ಆಗ ನನ್ನನ್ನು ನೀನು ಮುಟ್ಟಿಬಿಡು. ಅದರಿಂದ ನಿನಗೆ ಮುಂದೆ ಎಲ್ಲ ಅಭೀಷ್ಟೆಗಳೂ ಪೂರ್ತೈಸುವವು'' ಎಂದು ಅನುಗ್ರಹವಚನವನ್ನು ನುಡಿದು ಹೇಳಿದಳು. ಕನಸಿನಿಂದೆಚ್ಚತ್ತು ಭಟ್ಟರು ಬಲು ಆನಂದಭರಿತರಾಗಿ ಬೆಳಗಾಗುವ ಸಮಯವನ್ನೇ ನಿರೀಕ್ಷಿಸುತ್ತ ಕುಳಿತರು.

ಮುಂಜಾವು ಬರುತ್ತಲೇ ಭಟ್ಟರು ಸ್ನಾನಾದಿಗಳನ್ನು ಮುಗಿಸಿಕೊಂಡು ನಿತ್ಯದಂತೆ ಲಕ್ಷ್ಮೀದೇವಿಯ ದೇವಸ್ಥಾನಕ್ಕೆ ಹೋಗಿ ಸೇವೆಗೆ ಮೊದಲುಮಾಡಿದರು. ಇಷ್ಟರಲ್ಲಿ ಒಂದೆಡೆಯಿಂದ ಒಂದು ದೊಡ್ಡ ಹಾವು ಬೋರ್ಗರೆಯುತ್ತ ಭಟ್ಟರ ಮುಂದೆ ಬಂದಿತು. ಅದನ್ನು ನೋಡುತ್ತಲೇ ಅವರ ಕೈಕಾಲೇ ಹೋದುವು. ಮೈಬೆವರಿತು. ನಡುಗತೊಡಗಿದರು. ಕಣ್ಣಿಗೆ ಕತ್ತಲೆಗವಿಯಿತು. ಮುಂಗಾಣದೆ ಕನಸನ್ನು ಸ್ಮರಿಸಿಕೊಳ್ಳದೆ ಸುಮ್ಮನೆ ಬೆಪ್ಪನಂತೆ ಕುಳಿತುಬಿಟ್ಟರು. ಹಾವು ಕೆಲಕಾಲ ಒಂದೆಡೆಯಲ್ಲಿ ನಿಂತು ಮುಂದೆ ಬಿಲದಲ್ಲಿ ಸೇರತೊಡಗಿತು. ಅದು ಬಿಲದಲ್ಲಿ ಅರ್ಧ ಸೇರಿದ್ದಿತೋ ಇಲ್ಲವೋ ಅಷ್ಟರಲ್ಲಿ ಭಟ್ಟರಿಗೆ ಕನಸಿನ ನೆನಪಾಯಿಯಿತು. ಕೂಡಲೇ ಅವರು ಎದ್ದವರೇ ಬಿಲದಲ್ಲಿ ಸೇರುತ್ತಿರುವ ಆ ಸರ್ಪವನ್ನು ಶ್ರೀಲಕ್ಷ್ಮೀನಾರಾಯಣನ ಧ್ಯಾನ ಮಾಡುತ್ತ ಹಿಡಿದುಬಿಟ್ಟರು. ಅವರ ಏಳು ಬೆರಳುಗಳು ಮಾತ್ರ ಆ ಸರ್ಪಕ್ಕೆ ತಗಲಿದುವು. ಅಂದಿನಿಂದ ಅವರ ಬುದ್ಧಿಯು ಬೆಳಗಲಾ

ರಂಭಿಸಿತು. ಅದರ ಆ ಬೆಳಕೇ ಅವರನ್ನು ಒತ್ತರದಿಂದ ಕಾಶಿಗೆ ಕಳಿಸಿ ಬಿಡಲು ಕಾರಣವಾಯಿತು. ಕಾಶಿಯಲ್ಲಿ ಭಟ್ಟರಿಗೆ ಸಕಲ ಶಾಸ್ತ್ರ ಗಳೂ ಶ್ರೀಲಕ್ಷ್ಮಿಯ ಅನುಗ್ರಹದಿಂದ ಸುಲಭವಾಗಿ ಅವಗತವಾದುವು.

ಕಾಶಿಯಲ್ಲಿಯ ಅಧ್ಯಯನವನ್ನು ಮುಗಿಸಿಕೊಂಡು ಆನಂದಭ ಟ್ಟರು ಮನೆಗೆ ಬರಲು ಹೊರಟರು. ಅವರಿಗೆ ಮಾರ್ಗದಲ್ಲಿ ಒಂದೂ ರಲ್ಲಿ ಒಬ್ಬ ಅದ್ವೈತ ಘನ ವಿದ್ವಾಂಸನ ಭೆಟ್ಟಿಯಾಯಿತು. ಈ ವಿದ್ವಾಂಸನಿಗೂ ಶ್ರೀವಾದಿರಾಜರಿಗೂ ಈ ಪೂರ್ವದಲ್ಲಿ ಒಮ್ಮೆ ವಾಗ್ವಾ ದವಾಗಿದ್ದಿತು. ಉಡಪಿಯಲ್ಲಾಗುವ ಪರ್ಯಾಯವು ಅತಿ ಸಮೀಪಿಸಿ ದ್ದುದರಿಂದ ಈ ವಾಗ್ವಾದಕ್ಕಿಂತ ಅದು ಮಹತ್ವವೆಂದು ಬಗೆದು ಶ್ರೀರಾಜರಿಗೆ ಆ ವಿದ್ವಾಂಸನೊಡನೆ ಪೂರ್ಣವಾಗಿ ವಾದಮಾಡುವು ದಾಗಿದ್ದಿಲ್ಲ. ನಿರ್ವಾಹವಿಲ್ಲದೆ ಅವರಿಗೆ ಜಯಪತ್ರವನ್ನು ಕೊಟ್ಟು ಹೋಗಬೇಕಾಗಿ ಬಂದಿದ್ದಿತು. ಆದ್ದರಿಂದ "ನಮ್ಮ ಶಿಷ್ಯರಾರಾದರೂ ನಿನ್ನನ್ನು ನಿರುತ್ತರನನ್ನಾಗಿ ಮಾಡಬಹುದು.'' ಎಂದು ಹೇಳಿ ಅತಿ ತ್ವರೆಯಿಂದ ಅವರು ಹೊರಟುಹೋಗಿದ್ದರು. ರಾಜರ ಜಯಪತ್ರ ದಿಂದ ಸ್ವಲ್ಪ ಉಬ್ಬಿ ಆ ವಿದ್ವಾಂಸನು ಭಟ್ಟರನ್ನು ಚೆನ್ನಾಗಿ ಆದ ರಿಸಲಿಲ್ಲ. ಆದರೂ ಅವರು ವಿದ್ವಾಂಸನನ್ನು ಕೆಣಕಿ ಎಷ್ಟೋ ದಿನ ವಾದಮಾಡಿ ಅವನನ್ನು ಸಂಪೂರ್ಣವಾಗಿ ಸೋಲಿಸಿ ಅವನಿಂದ ಜಯ ಪತ್ರವನ್ನು ಪಡೆದದ್ದಲ್ಲದೆ ರಾಜರು ಅವನಿಗೆ ಕೊಟ್ಟ ಜಯಪತ್ರ ವನ್ನು ತೆಗೆದುಕೊಂಡು ನೆಟ್ಟಗೆ ಅವರು ಉಡಪಿಗೆ ಬಂದು ಶ್ರೀವಾದಿ ರಾಜರಿಗೆ ಸಾಷ್ಟಾಂಗವಾಗಿ ಎರಗಿದರು. ನಡೆದ ವಿಷಯವನ್ನು ಅವರಿಗೆ ವಿವರಿಸಿ ಹೇಳಿದರು. ಇದರಿಂದ ಶ್ರೀರಾಜರಿಗೆ ಆನಂದವು ತುಂಬಿ ಬಂದಿತು. ನನ್ನಂತಹ ಮಗನೊಬ್ಬನು ನಿಮಗಾಗಲಿಯೆಂದು ಅನುಗ್ರಹಿಸಿ ಭಟ್ಟರನ್ನು ರಾಜರು ಬಹುವಾಗಿ ಮನ್ನಿಸಿದರು. ಶ್ರೀ ರಾಜರ ಅನುಗ್ರಹದಿಂದಲೇ ಭಟ್ಟರ ಮಕ್ಕಳಾದ ನೃಸಿಂಹಾಚಾರ್ಯ ರೆಂಬವರೇ **ಶ್ರೀವಿದ್ಯಾಧೀಶ**ರೆಂಬ ಉತ್ತರಾದಿ ಮಠದ ಸ್ವಾಮಿಗಳಾ ದರು. ಭಟ್ಟರ ವಂಶಜರು ಪಾಂಡುರಂಗ ಕ್ಷೇತ್ರದಲ್ಲಿ ಬಹುಕಾಲ ವಾಸವಾಗಿದ್ದುದರಿಂದ ಅವರ ಮನೆತನಕ್ಕೆ **ಪಾಂಡುರಂಗಿ** ಎಂಬ

ಉಪನಾಮವು ಪ್ರಾಪ್ತವಾಯಿತು. ಅವರಿಗೆ ಶ್ರೀನಿವಾಸಾಚಾರ್ಯ, ನೃಸಿಂಹಾಚಾರ್ಯ (ಶ್ರೀವಿದ್ಯಾಧೀಶ) ಕೇಶವಾಚಾರ್ಯರೆಂಬ ಮೂವರು ಮಕ್ಕಳು. ಅವರ ಕಾಲದಲ್ಲಿ **"ನ್ಯಾಯಾಮೃತಖಂಡನ ಅದ್ವೈತ ಸಿದ್ಧಿ"** ಯೆಂಬ ಗ್ರಂಥವು ಹೊರಟಿದ್ದಿತು. ಅದನ್ನು **ಕಂಟಕೋದ್ಧಾರ**ವೆಂಬ ಗ್ರಂಥದಿಂದ ಭಟ್ಟರು ಖಂಡಿಸಿದರೆಂದು ಪ್ರಸಿದ್ಧಿಯಿದೆ. ಇವರ ಗ್ರಂಥಗಳು 'ಗುರುರಾಜೀಯ' ವೆಂಬ ಹೆಸರಿನಿಂದ ಪ್ರಸಿದ್ಧವಾಗಿವೆ. ಭಟ್ಟರು ೧೫೦೦-೧೬೦೦ ರಲ್ಲಿದ್ದರೆಂದು ತಿಳಿಯುತ್ತದೆ.

## ೫ ಗುರುರಾಜರು

(ಕೇಶವಾಚಾರ್ಯ ಪಾಂಡುರಂಗಿ)

ಇವರು ಪಾಂಡುರಂಗೀ ಆನಂದಭಟ್ಟರ ಕಡೆಯ ಮಕ್ಕಳು. ಶ್ರೀವಿದ್ಯಾಧೀಶತೀರ್ಥರ ಪೂರ್ವಾಶ್ರಮದ ತಮ್ಮಂದಿರು. ಇವರು ಚತುಃಶಾಸ್ತ್ರಗಳಲ್ಲಿಯೂ ಉದ್ದಾಮ ಪಂಡಿತರಾಗಿದ್ದರು. ಅಲ್ಲದೆ ಅಣ್ಣಂದಿರು ಉತ್ತರಾದಿಪೀಠವನ್ನಲಂಕರಿಸಿದುದರಿಂದ ಲಕ್ಷ್ಮಿಯಂತೂ ಇವರೆಡೆಯಲ್ಲಿ ತಾಂಡವವಾಡುತ್ತಿದ್ದಳು. ಅಂದಮೇಲೆ ಕೇಳುವದೇನು! ಎಷ್ಟೋ ದಿನಗಳವರೆಗೆ ಪಾಂಡಿತ್ಯದಿಂದಲೂ ವೈಭವದಿಂದಲೂ ಜನರಲ್ಲೆಲ್ಲ ಮೆರೆದುಬಿಟ್ಟರು.

ಒಮ್ಮೆ ಇವರೂ ಯಾದವಾಚಾರ್ಯರೂ ಒಂದೇ ಊರಲ್ಲಿ ಇರುತ್ತಿರುವ ಪ್ರಸಂಗವು ಬಂದಿತು. ಗುರುರಾಜರ ಪಾಂಡಿತ್ಯದ ಬಲುಮೆಯನ್ನು ಆರ್ಯರು ಬಲ್ಲವರಾಗಿದ್ದರೂ ದಿನಾಲು ಬೆಳಗಿನ ಝಾವದಲ್ಲಿ ಪ್ರಾತಃಸ್ನಾನಕ್ಕೆಂದು ನದಿಗೆ ಹೋಗುವಾಗ ಅವರು ರಾಜರ ಮನೆಯ ಬಾಗಿಲ ಮುಂದೆ ನಿಂತು ಅವರನ್ನು ಹೊರಗೆ ಕರೆದು ಭಾಗವತವನ್ನು ನೋಡಿಕೊಳ್ಳುವುದೆಂದು ತಪ್ಪದೇ ಅವರಿಗೆ ಹೇಳಿ ಹೋಗುತ್ತಿದ್ದರು. ಆದರೆ ರಾಜರು ಭಾಗವತವು ವಿಧವೆಯರದೆಂದು ನುಡಿದು ಆರ್ಯರ ನುಡಿಗಳನ್ನು ನಗೆಮಾಡಿಬಿಡುತ್ತಿದ್ದರು. ಆದರೂ ಆರ್ಯರ ನಿತ್ಯನಿಯಮವು ತಪ್ಪಿದ್ದಿಲ್ಲ. ಭಾಗವತ ವಾಚನದಿಂದ ರಾಜರಲ್ಲಿ ವೈರಾಗ್ಯವು ಅಂಕುರಿಸಿ ವಿದ್ಯೆಯು ವೈರಾಗ್ಯವಿನಯಗ

ಳಿಂದ ಶೋಭಿಸುತ್ತದೆಂಬ ವಚನವು ಅವರಲ್ಲಿ ದಿಟವಾಗುವುದೆಂಬುದೇ ಆರ್ಯರ ಅಭಿಪ್ರಾಯ.

ಮುಂದೆ ಯಾದವಾರ್ಯರು ಗತಿಸಿಹೋದರು. ಅವರ ಅಸ್ಥಿಗಳನ್ನು ಕೃಷ್ಣೆಯಲ್ಲಿ ಚೆಲ್ಲಿಕೊಡಲೆಂದು ಅವರ ಶಿಷ್ಯರು ಶೂರ್ಪಾಲಯಕ್ಕೆ ಸಾಗಿಬಂದರು. ಈ ಸುದ್ದಿಯನ್ನು ಕೇಳುತ್ತಲೇ ಗುರುರಾಜರಿಗೆ ಎಂತೋ ಎನಿಸಿತು. ಅಸ್ಥಿಯನ್ನು ತಂದವರನ್ನು ತಮ್ಮಲ್ಲಿಗೆ ಬರಮಾಡಿಕೊಂಡು 'ಆರ್ಯರು ನನ್ನ ಗುರುಗಳು; ಅವರ ಅಸ್ಥಿಗಳನ್ನು ನನಗೊಪ್ಪಿಸಿರಿ; ನಾನವುಗಳ ವ್ಯವಸ್ಥೆಯನ್ನು ಮಾಡುವೆನು' ಎಂದು ಹೇಳಿದರು. ಶಿಷ್ಯರಿಗೆ ರಾಜರ ಮಾತನ್ನುಲ್ಲಂಘಿಸುವದಾಗದೆ ಅಸ್ಥಿಗಳನ್ನವರಿಗೇ ಒಪ್ಪಿಸಿಬಿಟ್ಟರು. ಆಗ ರಾಜರು ಸ್ನಾನವನ್ನು ತೀರಿಸಿಕೊಂಡು ಹಾಲಿನಿಂದ ಆ ಅಸ್ಥಿಗಳಿಗೆ ಭಕ್ತಿಯಿಂದ ಅಭಿಷೇಕವನ್ನು ಮಾಡಿ ಅವನ್ನು ನದಿಯಲ್ಲಿ ಎಸೆಯಲು ಅವೆಲ್ಲ ಚಕ್ರಾಂಕಿತಗಳಾಗಿಬಿಟ್ಟವೆಂದು ಐತಿಹ್ಯವಿದೆ. ಆರ್ಯರು ಭಾಗವತವನ್ನು ನೋಡಿಕೊಳ್ಳಲು ಹೇಳುತ್ತಿದ್ದ ಮರ್ಮವು ಈಗ ರಾಜರಿಗೆ ಹೊಳೆಯಿತೆನ್ನುತ್ತಾರೆ. ಬಳಿಕ ಅವರು ಯಾದವಾರ್ಯರ ಭಾಗವತದ ಟಿಪ್ಪಣಿಯನ್ನು ನೋಡಿ ಎಷ್ಟೋ ಕಠಿಣ ವಾಕ್ಯಗಳ ಅರ್ಥಮಾಡಿಕೊಂಡು ವಿರಾಗಿಗಳಾದರೆಂದೂ ಹೇಳುತ್ತಾರೆ.

ಇವರ ಪಾಂಡಿತ್ಯವೇನೋ ಅಸಾಮಾನ್ಯವಾದದ್ದು. ಆದರೆ ಇವರು ರಚಿಸಿದ ಗ್ರಂಥಗಳನ್ನು ಸಾಮಾನ್ಯರು ತಿಳಿದುಕೊಳ್ಳಲು ಕಠಿಣವಾಗಿರುವುದರಿಂದ ಅವುಗಳು ರೂಢಿಯಲ್ಲಿ ಬಹಳವಾಗಿ ಬಳಿಸಲ್ಪಟ್ಟಿಲ್ಲ.

## ಗ್ರಂಥಗಳು.

| | |
|---|---|
| ೧) ತತ್ವಸಂಖ್ಯಾನ | ಟಿಪ್ಪಣಿ. |
| ೨) ತತ್ವವಿವೇಕ | ,, |
| ೩) ತತ್ವೋದ್ಯೋತ | ,, |
| ೪) ತತ್ವನಿರ್ಣಯ | ,, |
| ೫) ಮಾಯಾವಾದಖಂಡನ | ,, |

| | | |
|---|---|---|
| ೬) | ಪ್ರಪಂಚಮಿಥ್ಯಾತ್ವಾನುಮಾನಖಂಡನ | ಟಿಪ್ಪಣಿ |
| ೭) | ಉಪಾಧಿಖಂಡನ | ,, |
| ೮) | ಕಥಾಲಕ್ಷಣ | ,, |
| ೯) | ಪ್ರಮಾಣಲಕ್ಷಣ | ,, |
| ೧೦) | ಕರ್ಮನಿರ್ಣಯ | ,, |
| ೧೧) | ತತ್ವಪ್ರಕಾಶ | ,, |
| ೧೨) | ಋಗ್ ಭಾಷ್ಯ | ,, |
| ೧೩) | ಗೀತಾಭಾಷ್ಯಟೀಕಾದ ೨ನೇ ಅಧ್ಯಾಯಕ್ಕೆ (ಪ್ರಮೇಯದೀಪಿಕಾ) | ,, |
| ೧೪) | ಶೇಷವಾಕ್ಯಾರ್ಥಚಂದ್ರಿಕಾ | ಸುಧಾದ ಟಿಪ್ಪಣಿ ೬ನೇ ಅಧಿಕರಣದಿಂದ |
| ೧೫) | ವಾಕ್ಯಾರ್ಥಮಂಜರೀ | ಸುಧಾವ್ಯಾಖ್ಯಾನ |
| ೧೬) | ಚಂದ್ರಿಕಾವ್ಯಾಖ್ಯಾನ | ಲಘು ಮತ್ತು ಗುರು |

ಇವರು ಶೂರ್ಪಾಲಯದಲ್ಲಿ ಪಾಠಪ್ರವಚನಗಳನ್ನು ಮಾಡು ತ್ತಿರುತ್ತಿದ್ದರು. **ಗಲಗಲಿ**ಯವರೂ **ವಾಯಿ**ಯವರೂ ಇವರ ಮುಖ್ಯ ಶಿಷ್ಯರು. ಆದರೆ ಗಲಗಲಿಯವರು ಇತ್ತೀಚೆಗೆ ಪಾಂಡುರಂಗಿಯವ ರನ್ನು ಗುರುಸ್ಥಾನದಲ್ಲಿಟ್ಟುಕೊಂಡಂತೆ ತೋರುವುದಿಲ್ಲ. ಇವರ ದೇಹ ಸಂಸ್ಕಾರದಲ್ಲಿ ಒಂದು ಅಶ್ವತ್ಥವೃಕ್ಷವು ಈಗಲೂ ಇದೆ. ಇವರು ೧೫೦೦ ಶತಕದಲ್ಲಿದ್ದರಂತೆ.

## ೬ ಶ್ರೀಯಾದವಾರ್ಯರು

ಕೇವಲ ನೀಚ ಸ್ಥಿತಿಯಲ್ಲಿದ್ದವರು ಕೂಡ ಯೋಗ್ಯ ಮಾರ್ಗಾ ನುವರ್ತಿಗಳಾಗಿ, ಉಚ್ಚಸ್ಥಿತಿಗೆ ಏರಬಹುದೆಂಬ ಸಿದ್ಧಾಂತವನ್ನು ದೃಢೀ ಕರಿಸಲೋ ಏನೋ, ಮಹಾಪುರುಷರ ಪೂರ್ವೇತಿಹಾಸವೆಲ್ಲ ಸರ್ವ ಸಾಧಾರಣವಾಗಿಯೇ ಇರುತ್ತದೆ. ಆ ತೆರನಾಗಿ ಭಾಗಪ್ಪಯ್ಯನವರ ಪುತ್ರರು ನಮ್ಮ ಯಾದವಾರ್ಯರು. ಮೊದಲು ಯಾದಪ್ಪನಾಯ ಕರೆಂಬ ಚಿನಿವಾಲರಾಗಿ, ವಿಜಾಪುರಜಿಲ್ಲೆಯ, ಇಂಡೀ ತಾಲೂಕಿನ,

ಭೀಮಾತೀರದ ಮಣ್ಣೂರೆಂಬ ಗ್ರಾಮದಲ್ಲಿ ಬಡ್ಡಿಯ ವ್ಯವಹಾರ ವನ್ನು ಸಾಗಿಸುತ್ತಿದ್ದರು. ಈ ಕಾರಣದ ಸಲುವಾಗಿಯೇ ಅವರಿಗೆ ಮೇಲಿಂದ ಮೇಲೆ ದಿವರಾತ್ರಿಗಳೆನ್ನದೆ ಊರೂರಿಗೆ ತಿರುಗಾಡುವ ಪ್ರಸಂಗವು ಬರುತ್ತಿತ್ತು. ಆಗಿನ ಮಾರ್ಗವಂತೂ ದುರ್ಗಮವಾಗಿ ದ್ದದ್ದು ಸರಿಯೇ. ಆದರೆ ನಾಯಕರು ಹೊರಹೊರಡುವಾಗೆಲ್ಲ

**"॥ ಅಗ್ರತೋ ನಾರಸಿಂಹಶ್ಚ ಪೃಷ್ಠತೋ ಗೋಪಿನಂದನಃ ।**
**ಉಭಯೋಃ ಪಾರ್ಶ್ವಯೋರಾಸ್ತಾಂ ಸಶರೌ ರಾಮಲಕ್ಷ್ಮಣೌ ॥"**

ಎಂಬ ಶ್ಲೋಕವನ್ನು ಭಕ್ತಿಪುರಸ್ಸರವಾಗಿ ಉಚ್ಚರಿಸಿ ಹಾದಿಯನ್ನು ಹಿಡಿಯುತ್ತಿದ್ದರು. ಆಗ ನಾಲ್ವರು ಅಜಾನುಬಾಹು ಧನುರ್ಧಾರಿ ಪುರುಷರು, ಅವರನ್ನು ಹಿಂಬಾಲಿಸುತ್ತಿದ್ದರು. ಅವರ ಈ ಕ್ರಮವು ಏಕಪ್ರಕಾರವಾಗಿ ಸಾಗಿದ್ದಿತ್ತು. ಎಷ್ಟೋ ಸಾರೆ, ಇವರನ್ನು ಸುಲಿ ಯುವ ಇಚ್ಛೆಯಿಂದ, ಅನೇಕ ಕಳ್ಳರು ವಿಶ್ವಪ್ರಯತ್ನಬಟ್ಟು, ಇವರ ಕಾವಲಿನ ಪುರುಷರ ದರ್ಶನದಿಂದ ಗರ್ಭಭೇದವಾದಂಥವರಾಗಿ ಬಂದಹಾದಿಗೆ ಸುಂಕವಿಲ್ಲವೆಂದು ತಿರುಗಿ ತೆರಳಿಹೋಗುತ್ತಿದ್ದರು. ಕಡೆಗೊಂದಾನೊಂದು ದಿನ ಮುಚ್ಚಂಜೆಯ ಸಮಯ; ಅಮಾವಾ ಸ್ಯೆಯ ಕತ್ತಲೆಯು ಸುತ್ತಲೂ ತನ್ನ ಭೀಕರರೂಪವನ್ನು ಬೀರುತ್ತಿದೆ; ಮೋಡಗಳ ಓಡಾಟದಿಂದಲೂ ನೋಟವು ಮತ್ತಿಷ್ಟು ಭಯಾನಕ ವಾಗುತ್ತಿದೆ. ಇಂಥ ಸಮಯದಲ್ಲಿ ನಮ್ಮ ನಾಯಕರು ಪರಊರ ಕೆಲಸ ತೀರಿಸಿಕೊಂಡು, ಹೆಗಲ ಮೇಲೆ ಹಸಿಬೆಯನ್ನು ಹಾಕಿಕೊಂಡು ತಮ್ಮ ಊರಕಡೆಗೆ ಸಾಗಿದ್ದರು. ಇದನ್ನು ನೋಡಿದವರೇ ಕೆಲವು ಜನ ಕಳ್ಳರು ತಮಗಿದು ತಕ್ಕ ಸಮಯವೆಂದು ಬಗೆದು, ಒಗ್ಗಟ್ಟಿ ನಿಂದ ನಾಯಕರ ಮೇಲೆ ಏರಿಹೋಗಲು ಪ್ರಯತ್ನಿಸಿದರು. ಆದ ರೇನು? ನಾಯಕರ ಶರೀರರಕ್ಷಕರು ಅಜಾಗ್ರತರೇ ? ಸಾಮಾನ್ಯರೇ? ಸರ್ವಜಗನ್ನಿಯಾಮಕನಾದ ಪರಮಾತ್ಮನೇ ತನ್ನ ಭಕ್ತರನ್ನು ಕಾಯಲು ಟೊಂಕಕಟ್ಟಿದರೆ, ಇಂತಹದೊಂದೇಕೆ, ಅನೇಕ ಸಂಕಟ ಪರಂಪರೆಗಳೊಳಗಿಂದಲೂ ಪಾರಾಗಿ ಹೋಗಬಹುದು. ಭಜಕರ ಮೇಲಿನ ಭಗವಂತನ ಪ್ರೇಮವೇ ಅಂತಹದು. ಇರಲಿ; ಇತ್ತ ಕಳ್ಳ ರಿಗೆ ಈ ಭೀಕರರೂಪದ ಸೇವಕರ ನೋಟದಿಂದ ಕೈಕಾಲೇಹೋದವು.

ಆಗ ಅವರು ಅಂಜಲಿಬದ್ಧರಾಗಿ ನಾಯಕರೆದುರಾಗಿ ನಿಂತು:- ನಾಯಕರೇ ತಾವಾದರೋ ಸಾಮಾನ್ಯರಂತೆ ತೋರುವಿರಿ; ಈ ನಿಮ್ಮ ರಕ್ಷಕನಾದರೊ ಈಕ್ಷಿಸಲಿಕ್ಕಾಗದಂಥವರಾಗಿರುವರು; ಇವರನ್ನೆಲ್ಲಿಂದ ಕರೆತಂದಿರಿ? ಎಂದು ಪ್ರಶ್ನೆಮಾಡಿದರು ಯಾದಪ್ಪನವರು ಇದಕ್ಕೆ ಪ್ರತಿಯಾಗಿ ಮಾತಾಡಲೊಲ್ಲರು; ಸುಮ್ಮನೆ ಕೆಲಹೊತ್ತು ನಿಂತಕೊಂಡು, ಕಂಪಿತಗಾತ್ರರಾಗಿ ಕಳ್ಳರಿಗೆ— "ಅಪ್ಪಗಳಿರಾ, ನೀವು ವರ್ಣಿಸುವ ಪುರುಷರೇ ನನಗೆ ಕಾಣರು. ಅಂದಮೇಲೆ ನಾನೇನು ಹೇಳಲಿ. ನೀವು ಮಾತ್ರ ನನ್ನ ಹಸಿಬೆಗೆ ಬಹು ದಿನಗಳಿಂದ ಹವಣಿಸಿ ಕುಳಿತಂತೆ ಕಾಣುತ್ತದೆ. ಆದ್ದರಿಂದ ಇಕೊಳ್ಳಿರಿ ನನ್ನ ಹಸಿಬೆಯನ್ನು ಸ್ವಿಕರಿಸಿರಿ, ಸಂತುಷ್ಟರಾಗಿರಿ;" ಎಂದವರೇ ಹಸಿಬೆಯನ್ನು ಅವರ ಮುಂದಿಟ್ಟು ಹಿಂದಕ್ಕೆ ಸರಿದರು. ಆದರೆ ಕಳ್ಳರಿಗೆ ಒಮ್ಮೆಲೆ ಆ ಚೀಲ ತೆಗೆದುಕೊಳ್ಳುವದಾಗಲೊಲ್ಲದು. ಕೆಲ ಹೊತ್ತಿನ ಮೇಲೆ ನಾಯಕರೇ ಅವರನ್ನು ಒಡಂಬಡಿಸಿ, ಹಸಿಬೆಯೊಡನೆ ಅವರನ್ನು ಮುಂದೆ ಸಾಗಿಸಿ ತಾವೂ ತಮ್ಮ ಗ್ರಾಮದ ಮಾರ್ಗವನ್ನು ಹಿಡಿದರು. ಕಳ್ಳರು ನಾಯಕರ ದೊಡ್ಡ ಮನಸ್ಸನ್ನು ಕೊಂಡಾಡುತ್ತಲೂ ನಾಯಕರು ದೇವರ ಅಗಾಧ ಮಹಿಮೆಯೊಂದೊಂದನ್ನು ನೆನಪುಗೊಳ್ಳುತ್ತಲೂ ಸಾಗಿದ್ದರು. ಮುಂದೆಮುಂದೆಯಂತೂ ನಾಯಕರ ಕಣ್ಣೊಳಗಿಂದ ತಮ್ಮಷ್ಟಕ್ಕೆ ತಾವೇ ನೀರು ಉದಿರತೊಡಗಿದವು; ಕಂಠವು ಗದ್ಗದವಾಯಿತು. ಆಗ ಅವರು ದೇವರ ಧ್ಯಾನದಲ್ಲಿ ರತರಾಗಿ- ದೇವಾಧಿದೇವಾ, ನಾನೆಂಥ ಪಾಮರನು! ಪಾಪದ ಪಂಜರದೊಳಗಿಂದ ಇನ್ನು ನನ್ನ ಬಿಡುಗಡೆಯಾಗಲೊಲ್ಲದೇ! ಆ ಕಳ್ಳರಿಗೆ ಕಾಣಿಸಿಕೊಂಡ ರೂಪವು ನನಗೆ ಕಾಣಿಸಲಿಲ್ಲವೇ! ಜಗದೀಶನೇ ನೀನೆಂದು ನನಗೆ ನಿನ್ನ ರೂಪವನ್ನು ತೋರುವೆ? ಹೀಗಾಗಿ ಯಾದಪ್ಪನವರಿಗೆ ವೈರಾಗ್ಯವಂತೂ ಉತ್ಪನ್ನವಾಯಿತು. ಮನೆಗೆ ಬಂದರು. ಹೆಂಡತಿಗೆ ಕಾರ್ಯಾಂತರವಿದೆಯೆಂದು ಹೇಳಿದವರೇ ತಟ್ಟನೇ ಹೊರಟುಬಿಟ್ಟರು. ಅಹಹ! ಪರಮಾತ್ಮನೆಂಥ ಕಾರುಣಿಕನೋ! ಕರ್ಮಪ್ರವಾಹಕ್ಕೆ ಶಿಲುಕಿ ಕೊಚ್ಚಿಕೊಂಡು ಹೋಗುವ ತನ್ನ ನಿಜಭಕುತರನ್ನು ತಡೆದು ನಿಲ್ಲಿಸಿ, ಅವರನ್ನು ಸನ್ಮಾರ್ಗಕ್ಕೆ ಹಚ್ಚಿ, ಕಡೆಗೆ ಅವರನ್ನು ತನ್ನೆಡೆಗೇ ಬರಮಾ

ಡಿಕೊಳ್ಳುವನು. ಅವನು ಭಕ್ತರನ್ನು ಬಹುದಿನ ಬಿಟ್ಟಿರಲಾರನು. ಇಂಥ ದಯಾಸಂಪಾದಿ ಗುಣಗಳಿಂದ ಭರಿತನಾದ ಪರಮಾತ್ಮನನ್ನು ತಿಳಿಯದೆ ವಿಪರೀತ ಕಲ್ಪನೆಗಳಿಂದ . ಜಗತ್ತಿನಲ್ಲಿ ಎಷ್ಟೋ ಜನರು ಒರಲುತ್ತಿರುವರು. ಅಹಹ! ಇಂಥವರ ಗತಿಯೇನು? ಇತ್ತ ನಾಯಕರು ಮನೆಬಿಟ್ಟು ತೆರಳಿದವರು ನೆಟ್ಟನೆ ಕಾಶೀಪಟ್ಟಣದ ಹಾದಿಯನ್ನು ಹಿಡಿವರು. ವಿದ್ಯಾಗಾರವೆಂದು ಮೆರೆಯುತ್ತಿರುವ ಆ ಪುರವನ್ನು ಸೇರಿ, ತಮ್ಮ ವಯಸ್ಸಿನ ೩೦ನೇ ವರ್ಷದಿಂದ ೫೦ನೇ ವರ್ಷದವರೆಗೆ ಅಲ್ಲಿ ನ್ಯಾಯವ್ಯಾಕರಣಗಳನ್ನು ಅಭ್ಯಾಸಿಸಿದರು. ವೇದಾಂತಕ್ಕೆ ಸಿವೇಶನ ಉಂಟಾಯಿತೆಂದು ತಿಳಿದವರೇ ತಿರುಗಿ ತಮ್ಮ ಗ್ರಾಮಕ್ಕೆ ತೆರಳಿ ಬಂದರು.

ಇವರು ಬರುವದರಲ್ಲಿಯೇ ಇವರ ಅಣ್ಣಂದಿರಾದ ರಾಮಪ್ಪಯ್ಯನೆಂಬವರು ಉತ್ತರಾದಿ ಮಠದ ಸ್ವಾಮಿಗಳಾದ ಶ್ರೀ ವೇದವ್ಯಾಸತೀರ್ಥರಿಂದ ಸನ್ಯಾಸವನ್ನು ಸ್ವೀಕರಿಸಿದ್ದರು. ಬಂದನಂತರ ನಾಯಕರ ಮುಂದಿನ ವೇದಾಂತದ ಅಭ್ಯಾಸವೆಲ್ಲ ಇವರ ಬಳಿಯಲ್ಲಿಯೇ ಆಯಿತು. ಕಡೆಗೆ ಇವರು ಸಕಲ ಶಾಸ್ತ್ರಗಳಲ್ಲಿ ಪಾರಂಗತರಾಗಿ ಭಗವದನುಗ್ರಹಕ್ಕೆ ಪಾತ್ರರಾದರು. ಭಗವದ್ಭಕ್ತರು ಬೂದಿ ಮುಚ್ಚಿದ ಕೆಂಡದಂತಿರುವರೆಂಬದು ಸುಳ್ಳಲ್ಲ. ಏನೋ ಕರ್ಮವಶಾತ್ತಾಗಿ ಅವರನ್ನು ಆವರಿಸಿದ ಅಜ್ಞಾನರೂಪವಾದ ಭಸ್ಮವು ಕಾಲಾನುರೋಧದಿಂದ ಹಾರಿಹೋಗಲು ಅವರು ಮತ್ತೆ ಪ್ರಜ್ವಲಿಸತೊಡಗುತ್ತಾರೆ.

ಮುಂದೆ ಯಾದವಾರ್ಯರು ಏಕಾಂತವಾಸವನ್ನು ಬಯಸಿದರು. ಆ ವಾಸವೇ ತಾವು ಮುಂದೆ ಮಾಡಲಿಚ್ಛಿಸುವ ಪರಮಾತ್ಮಸೇವೆಗೆ ಯೋಗ್ಯವೆಂದು ಅವರು ಬಗೆದರು. ಆಯಿತು, ಆ ಸ್ಥಳವನ್ನು ಹುಡುಕಲಾರಂಭಿಸಿದರು. ಅವರು ಮಾರ್ಗಕ್ರಮದಿಂದ ಪಂಢರಪುರಕ್ಕೆ ಬಂದರು. ಅಲ್ಲಿ ಅವರು ಕೆಲವು ದಿನ ವಾಸವಾಗಿದ್ದರು. ಅದೇ ಊರಲ್ಲಿ ಪಾಂಡುರಂಗಿಯವರ ವಂಶಸ್ಥರೂ, ವಿದ್ಯಾಧೀಶಸ್ವಾಮಿಗಳ ತಮ್ಮಂದಿರೂ ಆದ ಗುರುರಾಜರು ವಾಸವಾಗಿದ್ದರು. ಅವರು ಚತುಃ

ಶಾಸ್ತ್ರಗಳಲ್ಲಿಯೂ ಪಂಡಿತರಿದ್ದರು. ಅಣ್ಣಂದಿರು ಮಠದ ಪೀಠದ ಮೇಲಿರುವದರಿಂದ ಕಾಂಚನಕ್ಕೇನು ಅವರಿಗೆ ಕೊರತೆ ಇರಲಿಲ್ಲ. ಸಂಪತ್ತಿನ ಸುಳಿಗಾಳಿಯಿಂದ ಸೋಂಕಿದವರಾಗಿಯೂ ಅವರು ಅನೇಕ ಗ್ರಂಥಗಳನ್ನು ರಚಿಸಿದ್ದಾರೆ. ಯಾದವಾರ್ಯರು ದಿನಾಲು ನದಿಯ ಸ್ನಾನಕ್ಕೆ ಹೋಗುವಾಗ ರಾಜರನ್ನು ಹೊರಗೆ ಕರೆದು "ನೀವು ಭಾಗವತವನ್ನು ಓದಿರೆಂ''ದು ಹೇಳುತ್ತಿದ್ದರು. ಆದರೆ ಇವರ ಈ ಉಪದೇಶದ ಪರಿಣಾಮವು ಇವರ ನಿರ್ಯಾಣದನಂತರವಾಯಿತು. ಯಾದವಾರ್ಯರು ಬರೆದ ಭಾಗವತದ ಟಿಪ್ಪಣಿಯನ್ನು ನೋಡಿಯೇ ಗುರುರಾಜರು ತಮ್ಮ ಎಷ್ಟೋ ಸಂಶಯಗಳನ್ನು ಛೇದಿಸಿಕೊಂಡರು. ಅಲ್ಲಿಯವರೆಗೆ ಭಾಗವತವು ವಿಧವೆಯರಿಗೆ ಓದಲು ಯೋಗ್ಯವಾದ ಗ್ರಂಥವೆಂದೇ ಅವರ ಅಭಿಪ್ರಾಯವಿತ್ತು.

ಈ ಸ್ಥಳದಿಂದ ಯಾದವಾರ್ಯರು ಹೊರಟವರು ಅನೇಕ ಸ್ಥಳಗಳನ್ನು ನೋಡುತ್ತ ಅವು ಮನಸ್ಸಿಗೆ ಬಾರದೆ, ಯಜ್ಞಕುಂಡ ಅಥವಾ ಈಗ ಯಕ್ಕುಂಡಿಯೆಂದು ಕರೆಯಲ್ಪಡುವ ಗ್ರಾಮಕ್ಕೆ ಬಂದು ತಲುಪಿದರು. ಈ ಸ್ಥಳವು ಅವರ ಮನಸ್ಸಿಗೆ ಬಂದಿತು. ಈ ಗ್ರಾಮವು ಪರಮ ರಮಣೀಯವಾಗಿದೆ. ಇದು ಮಲಾಪಹಾರಿಯ ತೀರದ ಮೇಲಿದೆ. ಮೊದಮೊದಲು ಯಾದವಾರ್ಯರು ನದಿಯ ತೀರದ ಮೇಲಿರುವ ಒಂದು ಅಶ್ವತ್ಥವೃಕ್ಷದ ಕಟ್ಟೆಯ ಮೇಲೆ ತಮ್ಮ ಕಾಲವನ್ನು ಕಳೆಯಲಾರಂಭಿಸಿದರು. ಅವರ ಪಾಠಪ್ರವಚನಗಳೆಲ್ಲ ಆ ಕಟ್ಟೆಯ ಮೇಲೆಯೇ ಸಾಗಿದ್ದವು. ಈ ಕಟ್ಟೆಯನ್ನು ಈಗಲೂ ಯಕ್ಕುಂಡಿಯಲ್ಲಿ ನೋಡಬಹುದು. ಆರ್ಯರು ತಮ್ಮ ಉಪಾಸನೆಗೆಂದು ತಂತ್ರಸಾರೋಕ್ತ ಪ್ರಕಾರ ಬಾದರಾಯಣ ಪ್ರತಿಮೆಯೊಂದನ್ನು ಮಾಡಿಕೊಂಡಿದ್ದರು. ಇದು ಎರಕಹೊಯ್ದುದ್ದಿದ್ದಿತು. ಅದನ್ನು ಮಾಡುವ ಮುಂದೆ, ಮೂರ್ತಿಯನ್ನು ಸ್ವಲ್ಪ ತಿದ್ದಲು ಪ್ರಯತ್ನಿಸಲು, ಯಾದವಾರ್ಯರಿಗೆ ರಕ್ತವು ದೃಗ್ಗೋಚರವಾಯಿತೆಂದು ಆಖ್ಯಾಯಿಕೆಯಿದೆ. ಹರಿಭಕ್ತರ ಮಹಿಮೆಯೇ ಅಂತಹದು! ತಮಗಲ್ಲದೆ ತಮ್ಮ ಎಂಟು ಜನ ಶಿಷ್ಯರಿಗೂ ಒಂದೊಂದು ಪ್ರತಿಮೆಯನ್ನು ಅವರು ಮಾಡಿಕೊಟ್ಟಿದ್ದರು. ಅವರ ಮುಖ್ಯರಾದ ಶಿಷ್ಯರು ಕೆಳಗಿನವರು.

೧) ಬಿದರಹಳ್ಳಿಯವರು
೨) ಲಿಂಗೇರಿಯವರು
೩) ಬಂಕಾಪುರದವರು
೪) ಗುಜ್ಜಾರಿಯವರು
೫) ಉಪುರ್ಜಿಯವರು
೬) ಆಯಿಯವರು
೭) ಕಾಡಣಿಯವರು
೮) ಶರ್ಕರಾದವರು

ಇವರೆಲ್ಲರೂ ಬಹುತರ ವ್ಯಾಖ್ಯಾನಟಿಪ್ಪಣಿಕಾರರೇ ಇರುತ್ತಾರೆ. ಇವರಿಂದೊಡಗೂಡಿ ಯಾದವಾರ್ಯರು ಭಿಕ್ಷಾನ್ನದಿಂದಲೇ ಎಷ್ಟೋ ದಿನಗಳೆದರು. ಕಡೆಗೊಂದು ದಿನ ಅವರಿಗೆ ಮಧ್ಯಾಹ್ನದ ಅಶನಕ್ಕೆಯೇ ಅಭಾವವಾಯಿತು. ಆಗ ಅವರು ಶಿಷ್ಯರಿಂದೊಡಗೂಡಿ ಒಂದೊಂದು ಮುಷ್ಟಿ ಮಣ್ಣನ್ನು ನೈವೇದ್ಯ ಇಡಿಸಿ ಮೆದ್ದು ಶಾಂತಚಿತ್ತರಾಗಿ ನಿತ್ಯದಂತೆ ಪಾಠವನ್ನು ಸಾಗಿಸಿದರು. "ಬಿಡರೋ ನಿನ್ನಲ್ಲಿಯ ಮನವೇನು ಬಂದರೂ'' ಎಂಬಂತೆ ಭಗವದ್ಭಕ್ತರನ್ನು ತಡೆಯುವವರಾರು? **ಅನನ್ಯಾಶ್ಚಿಂತಯಂತೋ ಮಾಂ ಏ ಜನಾಃ ಪರ್ಯುಪಾಸತೇ। ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ।** ಎಂಬ ಭಗವಂತನ ಉಕ್ತಿಯಂತೆ ಬೆಳಗಾಗುವದರಲ್ಲಿಯೇ ಧೂಪದಾಳವೆಂಬ ಗ್ರಾಮದ ದೇಸಾಯರು ಬಂದು ಇವರಿಗೆ ೮ ಮಾರು ಭೂಮಿಯನ್ನು ದಾನವಾಗಿ ಕೊಟ್ಟರು. ಈ ಉಂಬಳಿಯು ಈಗಲೂ ಅವರ ಮನೆತನಕ್ಕೆ ನಡೆಯುತ್ತದೆ. ಮುಂದೆ ಅವರು ತಮ್ಮ ಕರನಿರ್ಮಿತ ಬಾದರಾಯಣ ಪ್ರತಿಮೆಗೆ ೧೦೮ ಸಲ ಸುಧಾಪಾರಾಯಣದಿಂದ ಅಭಿಷೇಕವನ್ನು ಮಾಡಿದರು. ಪ್ರತಿದಿನ ದೇವಾರ್ಚನೆಯು ಮುಗಿಯಲು ಯಾದವಾರ್ಯರು ತಾವೇ ರಚಿಸಿದ **ಕರಾವಲಂಬನ**ವೆಂಬ ಸ್ತೋತ್ರವನ್ನು ಪಠಿಸಲು ಆ ಮೂರ್ತಿಯು ಅವರಿಗೆ ಕೈ ಎತ್ತಿಕೊಡುತ್ತಿತ್ತಂತೆ. ಭಕ್ತಾಭಿಮಾನಿಯಾದ ಭಗವಂತನ ಭಜಕರಿಗೆ ಏನು ತಾನೇ ಅಸಾಧ್ಯವು! ಅರ್ಜುನನ ಭಕ್ತಿಗೆ ಮೆಚ್ಚಿ ಅವನ ಸಾರಥ್ಯವನ್ನೇ ಸ್ವೀಕರಿಸಿದ ಪರಮಾತ್ಮನು ಇವರಿಗೆ ಕೈಕೊಟ್ಟಿದ್ದೇನಾಶ್ಚರ್ಯ! ಹೀಗೆ ಯಾದಪ್ಪನವರು ಭಗವತ್ಪ್ರೇಮಕ್ಕೆ ಪಾತ್ರರಾದದ್ದಲ್ಲದೆ, ಸಜ್ಜನರಿಗೆ ಸಹಾಯವಾಗಲು ಅನೇಕ ಗ್ರಂಥಗಳನ್ನೂ ರಚಿಸಿದ್ದಾರೆ.

೧) ತತ್ವಸಂಖ್ಯಾನ ಟಿಪ್ಪಣಿ

೨) ಸುಧಾ ಟಿಪ್ಪಣಿ (ಈ ಸುಧಾಗ್ರಂಥವು ಸಕಲ ಮತಖಂಡನಪೂರ್ವಕ ಸ್ವಮತ ಸ್ಥಾಪನೆಯನ್ನು ಮಾಡುತ್ತದೆ. ಈ ಪ್ರೌಢ ಗ್ರಂಥಕ್ಕೆ ಬರೆದ ಅನೇಕ ಟಿಪ್ಪಣಿಗಳಲ್ಲಿ ಯಾದ ವಾರ್ಯರದೇ ಶ್ರೇಷ್ಠವೆಂದು ಪಂಡಿತರ ಮತವಿದೆ.)

೩) ಯಮಕಭಾರತ ಟಿಪ್ಪಣಿ (ಇದು ಆಚಾರ್ಯರಮೂಲ ಗ್ರಂಥವು.)

೪) ಕರಾವಲಂಬನ ಸ್ತೋತ್ರ

೫) ಭಾಗವತ ತಾತ್ಪರ್ಯದ ಪ್ರಥಮ ಸ್ಕಂದಕ್ಕೆ ಟಿಪ್ಪಣಿ

೬) ಭಾಗವತ ೧-೫-೭ ಸ್ಕಂದಗಳಿಗೆ ,,

ಇವೆಲ್ಲ ಗ್ರಂಥಗಳು ಆರ್ಯರ ಕೀರ್ತಿಯನ್ನು ಅಜರಾಮರ ವಾಗಿ ಮಾಡಿವೆ.

ಇವರ ಶಿಷ್ಯರಾದರೂ ಮಹಾ ಪಂಡಿತರೂ ಭಗವದ್ಭಕ್ತರೂ ಆಗಿದ್ದರು. ಅವರಲ್ಲಿ, **ಬಿದರಹಳ್ಳಿಯ ಶ್ರೀನಿವಾಸತೀರ್ಥ**ರೆಂಬ ವರು ಯಾದಪ್ಪನವರ ತಮ್ಮಂದಿರಾದ ಕೃಷ್ಣಪ್ಪಯ್ಯನವರ ಮಕ್ಕಳು. ಇವರನ್ನು ಯಾದವಾರ್ಯರೇ ಅವರ ಮಾವನ ಮನೆಯಿಂದ ಹೊರ ಡಿಸಿ, ಮುಂದೆ ಕೇವಲ ಪಂಡಿತರ ಮಾನಖಂಡನದಲ್ಲಿಯೇ ಕಾಲ ಕಳೆಯುತ್ತಿದ್ದ ಅವರನ್ನು ಅನೇಕ ಸದ್ಗ್ರಂಥಗಳನ್ನು ಬರೆಯಲು ಹಚ್ಚಿ ದರು. ಈ ಶ್ರೀನಿವಾಸತೀರ್ಥರು ಬರೆದ ಗ್ರಂಥಗಳನ್ನು ಅವಲೋ ಕಿಸಬೇಕಾದರೆ ಯಾದವಾರ್ಯರಿಗೆ ತಮ್ಮ ಕಣ್ಣುಗಳ ಮೇಲೆ ಬಿದ್ದ ಹುಬ್ಬುಗಳನ್ನು ಎತ್ತಿಹಿಡಿಯಬೇಕಾಗುತ್ತಿತ್ತಂತೆ. ಇದು ಅವರ ವೃದ್ಧಾ ಪ್ಯವನ್ನು ಸೂಚಿಸುತ್ತದೆ. ಈ ಪ್ರಕಾರ ಶಿಷ್ಯನನ್ನು ಅನುಗ್ರಹಿಸಿ, ಗುರುದಕ್ಷಿಣೆಯ ದ್ವಾರದಿಂದ, ದೇಸಾಯರಿಂದ ದೊರೆತ ಭೂಮಿ ಯನ್ನೂ ಮತ್ತು ತಮ್ಮ ಕರನಿರ್ಮಿತ ಬಾದರಾಯಣ ಪ್ರತಿಮೆ

ಯನ್ನೂ ತಮ್ಮ ಇದ್ದೊಬ್ಬ ಮಗಳ ವಶಕ್ಕೆ ಒಪ್ಪಿಸಬೇಕಾಗಿದ್ದ ತಮ್ಮ ಇಚ್ಛೆಗೆ, ಶಿಷ್ಯನಿಂದ ಅಂದರೆ ತಮ್ಮ ತಮ್ಮನ ಮಗನಿಂದ, ಅನುಮತಿಯನ್ನು ಪಡೆದರು. ಆ ಉತ್ಸನ್ನವು ಇನ್ನೂ ಮಗಳ ವಂಶಜರಿಗೇನೇ ನಡೆಯುತ್ತಿದೆ. ಶ್ರೀಬಾದರಾಯಣ ಪ್ರತಿಮೆಯಾದರೂ ಇನ್ನೂ ಯಕ್ಕುಂಡಿಯಲ್ಲಿದ್ದ ಅವರ ವಂಶಜರಲ್ಲಿದೆ. ಅದನ್ನು ನೋಡಿ ಭಯಭಕ್ತಿಗಳಿಂದ ಚಕಿತರಾಗದವರು ಅಪರೂಪವಾಗಿ ಸಿಗಬಹುದು. ಈ ಶ್ರೀನಿವಾಸತೀರ್ಥರು ಒಮ್ಮೆ ರಾಘವೇಂದ್ರಸ್ವಾಮಿಗಳಲ್ಲಿದ್ದು ಸೇವಾ ತತ್ಪರರಾಗಿ ಕಡೆಗೆ ಬರುವಾಗ್ಗೆ ಒಮ್ಮೆ ಚಾತುರ್ಮಾಸದಲ್ಲಿ ಸಾಸಿವೆಯನ್ನು ಹಾಕಿ ಮಾಡಿದ ಅಡಿಗೆಯನ್ನು, ಅವರು ಹೇಳಿದರೂ ಭೋಜನಮಾಡದೆ, ಹಾಗೆ ಅವರಿಂದ ಫಲಮಂತ್ರಾಕ್ಷತೆಗಳನ್ನು ಪಡೆದುಕೊಂಡು ಯಾದವಾರ್ಯರೆಡೆಗೆ ಬಂದು ತೋರಿಸಿದರಂತೆ. ಆಗ್ಗೆ ಆರ್ಯರು ಆ ಮಂತ್ರಾಕ್ಷತೆಗಳು ಗುರುದ್ರೋಹದಿಂದ ದೂಷಿತವಾದವುಗಳೆಂದು ಸ್ಪಷ್ಟವಾಗಿ ಹೇಳಿ, ಶಿಷ್ಯನನ್ನು ಮಂತ್ರಾಲಯದ ರಾಯರ ಅನುಗ್ರಹಾರ್ಥವಾಗಿ ಮತ್ತೆ ಕಳಿಸಿಕೊಟ್ಟರಂತೆ. ಜ್ಞಾನಿಗಳ ಜ್ಞಾನಕ್ಕೆ ಯಾವದು ತಾನೇ ದೂರವಾದದ್ದು!

ಯಾದವಾರ್ಯರ ಇನ್ನೊಬ್ಬ ಶಿಷ್ಯರ ವಂಶದವರಾದ ಸುಬ್ರಹ್ಮಣ್ಯಾಚಾರ್ಯ ಗುರ್ಜಾರಿಯೆಂಬವರು ಪೇಶ್ವೆಯರ ಕಾಲಕ್ಕೆ **ಸುರಪುರದ ಕಿರೀಟ ವೆಂಕಟರಮಣಾಚಾರ್ಯ**ರೆಂಬ ರಾಮಾನುಜೀಯ ಪಂಥದ ದೊಡ್ಡ ಪಂಡಿತರನ್ನು ವಾದದಲ್ಲಿ ಸೋಲಿಸಿ **ಮಾಧ್ವಾನಾಂ ಜಯ** ಎಂದು ಪುಣೆಯ ಪಟ್ಟಣದಲ್ಲಿ ಪೇಶ್ವೆಯರ ಕೈಯಿಂದ ಡಂಗುರ ಹೊಯಿಸಿದಂತೆ ಆಖ್ಯಾಯಿಕೆಯಿದೆ.

ಈ ತೆರನಾಗಿ ಯಾದವಾರ್ಯರು ತಮ್ಮ ಕೀರ್ತಿಯನ್ನೂ ತಮ್ಮ ಶಿಷ್ಯರ ಕೀರ್ತಿಯನ್ನೂ ದಿಗಂತಗಳಲ್ಲಿ ಹಬ್ಬಿಸುತ್ತ ಅತಿ ವೃದ್ಧರಾಗಿ ಯಕ್ಕುಂಡಿಯೆಂಬ ಗ್ರಾಮದಲ್ಲಿಯೇ ಹರಿಪಾದವನ್ನು ಸೇರಿದರು. ಅವರ ವಯಸ್ಸು ಚನ್ನಾಗಿ ತಿಳಿದಿಲ್ಲ. ಅವರು ಶಾಲಿವಾಹನ ಶಕದ ೧೫೦೦ ರಲ್ಲಿದ್ದಂತೆ ಮಾತ್ರ ಗೊತ್ತಾಗುತ್ತದೆ. ಇವರ ನಿಧನವಾದ ನಂತರ ಅವರ ಅಸ್ಥಿಗಳನ್ನು ಕೃಷ್ಣೆಯಲ್ಲಿ ಹಾಕಲು ಶಿಷ್ಯರು ಸಾಗಿ

ರಲು, ಪಾಂಡುರಂಗಿ ಆಚಾರ್ಯರಾದ **ಗುರುರಾಜರು** ಶಿಷ್ಯರಿಂದ ಅವನ್ನಿಸಿದುಕೊಂಡು ಯಾದವಾರ್ಯರು ನಮ್ಮ ಗುರುಗಳಿಂದು ಅತಿ ಭಕ್ತಿಯಿಂದ ಹಾಲಿನಿಂದ ಅಭಿಷೇಕಮಾಡಿ ನದಿಯಲ್ಲಿ ಹಾಕಲು ಅವು ಚಕ್ರಾಂಕಿತಗಳಾದವೆಂದು ಐತಿಹ್ಯವುಂಟು.

ಈಗ ಉತ್ತರಾದಿಮಠದ ಸ್ವಾಮಿಗಳು ಯಕ್ಕುಂಡಿಗೆ ದಯಮಾಡಿಸಿದರೆ, ಯಾದವಾರ್ಯರ ಕರನಿರ್ಮಿತ ಕರಾರ್ಚಿತ ಪ್ರತಿಮೆಯನ್ನು ಪೂಜೆಮಾಡತಕ್ಕ ಸಂಪ್ರದಾಯವಿದೆ. ಇದು ಆ ಭಗವದ್ಭಕ್ತರ ಮರ್ಯಾದೆಗೋಸ್ಕರವಾಗಿದೆ. ಧನ್ಯರು, ಇಂಥ ಭಗವದ್ಭಕ್ತರೇ ಧನ್ಯರು!

## ೭ ಬಿದರಹಳ್ಳಿ ಶ್ರೀನಿವಾಸತೀರ್ಥರು

ಇವರು ಯಾದವಾರ್ಯರ ತಮ್ಮಂದಿರಾದ **ಕೃಷ್ಣಪ್ಪಯ್ಯ**ನವರ ಮಕ್ಕಳು. ಇವರು ಯಾದವಾರ್ಯರ ಬಳಿಯಲ್ಲಿಯೇ ಓದಿದರು. ಕೆಲ ಕಾಲ ತೀರ್ಥರು ತಮ್ಮ ಮಾವನ ಮನೆಯಲ್ಲಿಯೇ ಇರುತ್ತಿದ್ದರು. ಸಂಚಾರಕ್ರಮದಿಂದ ಆ ಮಾವನೂರಿಗೆ ಬಂದ ಆರ್ಯರಿಗೆ ಈ ಸಂಗತಿಯು ಸೇರದೆ "ಸಂಸಾರದಲ್ಲಿಯೇ ಆಸಕ್ತನಾಗಿ ನಿಮ್ಮ ಅಳಿಯನು ಕೆಟ್ಟಾನು'' ಎಂತೆಂದು ಮಾವನಿಗೆ ಉಪದೇಶಿಸಿ ತೀರ್ಥರನ್ನು ಅವರ ಹೆಂಡತಿಯೊಡನೆ ಹೊರಹೊರಡಿಸಿದರು. ಈ ಮುಂದೆ ತೀರ್ಥರ ಒಲವು ವಾದಿಗಳನ್ನು ಗೆಲ್ಲುವುದರ ಕಡೆಗೆ ತಿರುಗಿತು. ಆದ್ದರಿಂದ ಒಂದೇ ಸಮನೆ ಅವರ ಸಂಚಾರವು ಪ್ರಾರಂಭವಾಯಿತು. ವಾದಿಗಳನ್ನು ಗೆಲ್ಲುತ್ತ ವೈಭವದಿಂದ ಮೆರೆಯುತ್ತ ಇವರು ಒಮ್ಮೆ ಯಾದವಾರ್ಯರ ಊರಿಗೆ ಬಂದರು. ಆಗ ಯಾದವಾರ್ಯರು ಇವರಿಗೆ ಭೆಟ್ಟಿಯನ್ನು ಕೊಡದೆ "ನಿನ್ನ ವೈಭವವನ್ನುಳಿದು ಒಬ್ಬನೇ ನನಗೆ ಭೆಟ್ಟಿಯನ್ನು ಕೊಡು'' ಎಂದು ಹೇಳಿದರು. ಗುರುಗಳ ಅಪ್ಪಣೆಯನ್ನು ತೀರ್ಥರು ಶಿರಸಾವಹಿಸಿದರು. ಅವರ ಹೇಳಿಕೆಯಂತೆ ಏಕಾಕಿಯಾಗಿ ಅವರೆದುರಿನಲ್ಲಿ ನಿಲ್ಲಲು ಯಾದವಾರ್ಯರು:– "ಪಾಂಡಿತ್ಯ ಪ್ರಕಟನೆಗಾಗಿ ನಿನಗೆ ನಾನು ಉಪದೇಶಿಸಲಿಲ್ಲ. ಸುಖೋಪಭೋಗವು ನಿನಗೆ ಸಲ್ಲದು. ಆ ವಾದಿಯನ್ನು ಬಿಟ್ಟು ಗ್ರಂಥಗಳಿಗೆ ಟಿಪ್ಪಣೆಗಳನ್ನು ರಚಿಸು'' ಎಂದು ಅವರಿಗೆ ಉಪದೇಶವನ್ನು ಮಾಡಿದರು.

ತಕ್ಷಣದಲ್ಲಿಯೇ ತೀರ್ಥರ ಒಲವಿನ ದಿಕ್ಕು ತಿರುಗಿತು. ತುಂಗಭದ್ರಾ ನದಿಯ ತೀರದ **ಬಿದರಹಳ್ಳಿ**ಯಲ್ಲಿ ವಾಸವಾಗಿ ಅವರು ಗ್ರಂಥಗಳಿಗೆ ಟಿಪ್ಪಣಿಗಳನ್ನು ರಚಿಸತೊಡಗಿದರು. ಆ ಊರಲ್ಲಿಯೇ ಬಹುಕಾಲ ಇದ್ದುದರಿಂದ ತೀರ್ಥರಿಗೆ ಬಿದರಹಳ್ಳಿಯವರೆಂದು ಉಪನಾಮವು ಬಂದಿತು. ಗ್ರಂಥರಚನೆಯ ಸಂಗಡ ಶಿಷ್ಯರ ಪಾಠಕ್ರಮವೂ ತೀರ್ಥರಿಂದ ಸಾಗಿಸಲ್ಪಟ್ಟಿತು. ಆ ಊರಿಗೆ ಒಮ್ಮೆ **ಶ್ರೀ ಮಂತ್ರಾಲಯ ಸ್ವಾಮಿಗಳು** ದಯಮಾಡಿಸಿದರು. ಆಗ ಅವರಿಗೆ ಮಶಿಯು ಬೇಕಾಗಲು ತೀರ್ಥರ ಮನೆಗೆ ಶಿಷ್ಯರನ್ನಟ್ಟಿದರು. ತೀರ್ಥರು ಮಶಿಯ ಕುಪ್ಪಿಯನ್ನು ಆ ಶಿಷ್ಯರ ಕೈಯಲ್ಲಿ ಕೊಡದೆ ತಾವೇ ಮಡಿಯ ವಸ್ತ್ರವನ್ನುಟ್ಟುಕೊಂಡು ಸ್ವಾಮಿಗಳೆಡೆಗೆ ಅದನ್ನು ತೆಗೆದುಕೊಂಡು ಹೋದರು. ಈ ಸೋಜಿಗದ ವಿಷಯವನ್ನು ಸ್ವಾಮಿಗಳು ವಿಚಾರಿಸಲು ಪ್ರತಿವರ್ಷ ಕರ್ಕಾಟಕದಲ್ಲಿ ತುಂಗಭದ್ರೆಗೆ ಭಾಗೀರಥಿಯು ಬಂದಾಗ ಆ ನದಿಯ ನೀರಿನಿಂದ ಮಶಿಯನ್ನು ಮಾಡಿ ಅದರಿಂದಲೇ ತಮ್ಮ ಗ್ರಂಥಗಳನ್ನು ಬರೆಯುತ್ತೇವೆಂದು ತೀರ್ಥರು ವಿನಯದಿಂದ ಉತ್ತರಕೊಟ್ಟರು. ಮಶಿಯಲ್ಲಿಯೇ ಇಷ್ಟು ಪಾವಿತ್ರ್ಯವನ್ನು ತರಲು ಯತ್ನಿಸಿದ ನಿಮ್ಮ ಗ್ರಂಥಗಳಲ್ಲಿ ಎಷ್ಟು ಪಾವಿತ್ರ್ಯವು ಬಂದಿರಬಹುದೆಂದು ಶ್ರೀಗಳು ತೀರ್ಥರನ್ನು ಬಹು ಹೊಗಳಿದರು. ಸ್ವಾಮಿಗಳು ಗ್ರಂಥಗಳನ್ನು ತೋರಿಸಲಿಕ್ಕೆ ಕೇಳಲು ತಮ್ಮ ಕಣ್ಣಿಗೆ ಬೀಳುವಂತಹ ಶಕ್ತಿಯು ಆ ಗ್ರಂಥಗಳಲ್ಲಿ ಇಲ್ಲೆಂದು ತೀರ್ಥರು ಸೌಮ್ಯವಾಗಿ ನುಡಿದರು. ಕಡೆಗೆ ಸ್ವಾಮಿಗಳ ಬಲುಮೆಯಿಂದ ಗ್ರಂಥಗಳು ಹೊರಬಿದ್ದುವು. ಅವನ್ನು ವಿಮರ್ಶೆಮಾಡಿ ನೋಡಲಾಗಿ ಮಂತ್ರಾಲಯ ಮುನಿಗಳಿಗೆ ಪರಮ ಸಂತೋಷವಾಯಿತು. "ನಿಮ್ಮ ಗುರುಗಳಾದ ಯಾದವಾರ್ಯರ ಪೂರ್ಣ ಅನುಗ್ರಹವು ನಿಮ್ಮ ಮೇಲೆ ಆಗಿದೆಯೆಂತಲೂ ಪಂಡಿತರಿಗೂ ಪಾಮರರಿಗೂ ಉಪಯೋಗ ಬೀಳುವಂತಾಗಿದ್ದ ನಿಮ್ಮ ಗ್ರಂಥಗಳ ಖ್ಯಾತಿಯು ಎಲ್ಲ ಕಡೆಗೂ ಪಸರಿಸಲಿ" ಎಂಬ ಉದ್ಗಾರಗಳು ಅವರ ಬಾಯಿಯಿಂದ ಹೊರಟವು. **"ತೀರ್ಥ"**ರೆಂಬ ಉಪನಾಮವು ಈ ಕಾಲಕ್ಕೇ ಅವರಿಗೆ ದೊರೆಯಿತು. ಶ್ರೀರಾಘವೇಂದ್ರರು ಶ್ರೀನಿವಾಸತೀರ್ಥರೆಂದು ತಾವೇ ಅವರ ಪುಸ್ತಕದ

ಮೇಲೆ ಬರೆದುಬಿಟ್ಟರು. ಶ್ರೀರಾಯರ ಪೂರ್ಣ ಅನುಗ್ರಹದಿಂದ ಶ್ರೀನಿವಾಸತೀರ್ಥರ ಗ್ರಂಥಗಳ ಪ್ರಾಬಲ್ಯವು ಬಹಳವಾಗಿರುತ್ತದೆ.

ಹೋಗುವಾಗ ಶ್ರೀರಾಘವೇಂದ್ರರು ತೀರ್ಥರಿಗೆ ಮಂತ್ರಾಕ್ಷತೆ ಗಳನ್ನಿತ್ತು "ನಿಮ್ಮ ಗುರುಗಳಾದ ಯಾದವಾರ್ಯರು ಬಲು ಮುದುಕರಾಗಿದ್ದಾರೆ. ಅವರನ್ನು ಕಂಡು ಬೇಗನೇ ನಿಮ್ಮ ಗ್ರಂಥಗಳನ್ನು ಅವರಿಗೆ ತೋರಿಸಿರಿ.'' ಎಂದು ಹೇಳಿಹೋದರು.

ಅವರಾಜ್ಞೆಯಂತೆ ತೀರ್ಥರು ಬೇಗನೇ **ಯಕ್ಕುಂಡಿ**ಯಲ್ಲಿದ್ದ ಗುರುಗಳೆಡೆಗೆ ಬಂದರು. ಬಹುದಿವಸದ ಭೆಟ್ಟಿಯಾದುದರಿಂದ ಆನಂದಬಾಷ್ಪಗಳನ್ನುದುರಿಸುತ್ತ ತಮ್ಮ ಗ್ರಂಥಗಳನ್ನು ಗುರುಗಳಿಗೆ ಸಮರ್ಪಿಸಿದರು. ಕಣ್ಣುಗಳ ಮೇಲೆ ಬಿದ್ದ ಹುಬ್ಬುಗಳನ್ನು ಕೈಯಿಂದ ಎತ್ತಿಹಿಡಿದು ಯಾದವಾರ್ಯರು ಶಿಷ್ಯನ ಗ್ರಂಥಗಳನ್ನು ಅವಲೋಕಿಸಿ ಬಲು ಆನಂದಬಟ್ಟರು. ತಾವು ಗಳಿಸಿದ ಹೊಲಗಳು ತಮ್ಮ ಮಗಳ ವಂಶದವರಿಗೆ ನಡೆಯಲೆಂಬದಕ್ಕೆ ಒಪ್ಪಿಗೆಯನ್ನಿತ್ತು ಗುರುದಕ್ಷಿಣೆಯನ್ನಿಷ್ಟು ಮುಟ್ಟಿಸಬೇಕೆಂದು ತೀರ್ಥರಿಗೆ ಯಾದವಾರ್ಯರು ನುಡಿದರು. ಸರ್ವಸ್ವವನ್ನು ಗುರುಗಳ ಚರಣಕ್ಕೆ ಅರ್ಪಿಸಲು ಸಿದ್ಧರಿದ್ದ ತೀರ್ಥರಿಗೆ ಇದಾವ ದೊಡ್ಡ ಮಾತು. ಒಪ್ಪಿಸಿಬಿಟ್ಟರು. ಈಗಲೂ ಭೂಮಿಗಳು ಯಾದವಾರ್ಯರ ಮಗಳ ವಂಶದವರಿಗೇ ನಡೆಯುತ್ತವೆ.

ಬಹು ಗ್ರಂಥಗಳಿಗೆ ಟಿಪ್ಪಣಿಯನ್ನು ಬರೆದಿದ್ದರೂ ಸುಧಾಕ್ಕೆ ಟಿಪ್ಪಣಿಯನ್ನು ಬರೆಯುವುದು ತೀರ್ಥರಿಂದಾಗಿದ್ದಿಲ್ಲ. ಯಾಕಂದರೆ ಸ್ವತಃ ಗುರುಗಳೇ ಆ ಕಾರ್ಯಕ್ಕೆ ಪ್ರವರ್ತರಾಗಿದ್ದರು. ಆದರೆ ಸುಧೆಯು ಕ್ಷುಧೆಯು ಬಲವಾಗಿ ಅಮೃತಪಾನಮಾಡಿಸಿರೆಂದು ಗುರುಗಳನ್ನು ತೀರ್ಥರು ಬೇಡಿಕೊಂಡರು. ಯಾದವಾರ್ಯರು ಅಪ್ಪಣೆಯನ್ನಿತ್ತರು. ಆಗ "**ತ್ಯಕ್ತಶ್ರೀನಿವಾಸತೀರ್ಥ**''ವೆಂಬ ಹೆಸರಿನಿಂದ ಸುಧೆಗೆ ಟಿಪ್ಪಣಿಯು ತೀರ್ಥರಿಂದ ಬರೆದಾಯಿತು. ಇದರಲ್ಲಿ ಅವರು ಗುರುಗಳು ಬಿಟ್ಟ ಪದಗಳಿಗೆ ಅರ್ಥಗಳನ್ನು ಬರೆದಿದ್ದಾರೆ.

ಒಮ್ಮೆ ತೀರ್ಥರು ಗುರುಗಳ ಅಪ್ಪಣೆಯಂತೆ ಮಂತ್ರಾಲಯ ಸ್ವಾಮಿಗಳ ಸನ್ನಿಧಾನದಲ್ಲಿ ಕೆಲವು ದಿನ ವಾಸವಾಗಿದ್ದರು. ಆಗ ವ್ರತದ ದಿನಗಳು ಬರಲು, ಉತ್ತರಾದಿ ಮಠದವರ ಪದ್ಧತಿಯಂತೆ ತೆಗೆದುಕೊಳ್ಳಬಾರದಂತಹ ಕೆಲವು ಪದಾರ್ಥಗಳನ್ನು ಶ್ರೀರಾಯರ ಪಂಕ್ತಿಯಲ್ಲಿ ತೀರ್ಥರು ತೆಗೆದುಕೊಳ್ಳಲು ಅನುಮಾನಪಟ್ಟರು. ರಾಯರು ಆಗ್ರಹಮಾಡದೆ ತೀರ್ಥರ ಮನೀಷೆಯಂತೆಯೇ ಪದಾರ್ಥಗಳನ್ನು ಒದಗಿಸಿಕೊಟ್ಟರು. ಮುಂದೆ ಫಲಮಂತ್ರಾಕ್ಷತೆಗಳನ್ನು ತೆಗೆದುಕೊಂಡು ಗುರುಗಳೆಡೆಗೆ ತೀರ್ಥರು ಬರಲು ಅಕ್ಷತೆಗಳನ್ನು ನೋಡಿದವರೇ ಯಾದವಾರ್ಯರು ಶಿಷ್ಯನಿಗೆ ಸ್ವಾಮಿದ್ರೋಹಿಯೆಂದು ಸಿಟ್ಟುಮಾಡಿ ಮತ್ತೆ ಮುಂದಿನ ವ್ರತದ ವರೆಗೆ ಮಂತ್ರಾಲಯ ಸ್ವಾಮಿಗಳಲ್ಲಿಯೇ ಇದ್ದು ಹಿಂದಿನ ಸಲ ಬಿಟ್ಟ ಪದಾರ್ಥಗಳನ್ನು ಅವರ ಪಂಕ್ತಿಯಲ್ಲಿ ಕುಳಿತು ಉಂಡುಬರಲೆಂದು ತೀರ್ಥರನ್ನು ತಿರುಗಿ ಕಳುಹಿಸಿದರು. ಅದರಂತೆ ನಡೆದು ಶ್ರೀನಿವಾಸತೀರ್ಥರು ಗುರುಗಳ ಅನುಗ್ರಹವನ್ನೂ ಸ್ವಾಮಿಗಳ ಅನುಗ್ರಹವನ್ನೂ ಸಂಪಾದಿಸಿದರು.

ಇವರು ಬರೆದ ಗ್ರಂಥಗಳು.

೧) ಮಾಯಾವಾದಖಂಡನ ಟಿಪ್ಪಣಿ
೨) ಉಪಾಧಿಖಂಡನ ,
೩) ಪ್ರಪಂಚಮಿಥ್ಯಾತ್ವಾನುಮಾನಖಂಡನ
೪) ಪ್ರಮಾಣಲಕ್ಷಣ
೫) ತತ್ವವಿವೇಕ ,
೬) ತತ್ವಸಂಖ್ಯಾನ ,.
೭) ತತ್ವನಿರ್ಣಯ ,,
೮) ತತ್ವೋದ್ಯೋತ ,,
೯) ಕರ್ಮನಿರ್ಣಯ ,,
೧೦) ಗೀತಾಭಾಷ್ಯಟೀಕಾ ಪ್ರಮೇಯ ದೀಪಿಕಾ ,,
೧೧) ಗೀತಾತಾತ್ಪರ್ಯಟೀಕಾ ನ್ಯಾಯ ದೀಪಿಕಾ ,,

೧೨) ನ್ಯಾಯಾಮೃತ ಟಿಪ್ಪಣಿ
೧೩) ಸುಧಾ ಟಿಪ್ಪಣಿ ತ್ಯಕ್ತಶ್ರೀನಿವಾಸತೀರ್ಥೀಯ
೧೪) ಅಣುಭಾಷ್ಯ ಟಿಪ್ಪಣಿ
೧೫) ತತ್ವಪ್ರಕಾಶ ,,
೧೬) ವಾದಾವಲಿ ,,
೧೭) ಭೇದೋಜ್ಜೀವನ ,,
೧೮) ಸದಾಚಾರ ಸ್ಮೃತಿಯಲ್ಲಿ ಆಹ್ನಿಕಕೌಸ್ತುಭ
೧೯) ಪುರುಷಸೂಕ್ತಾರ್ಥ
೨೦) ವಾಯುಸ್ತುತಿ ವ್ಯಾಖ್ಯಾನ
೨೧) ಮಂತ್ರೋದ್ಧಾರ ತಂತ್ರಸಾರಕ್ಕೆ ಟಿಪ್ಪಣಿ
೨೨) ಭಾಗವತ ಏಕಾದಶ ಸ್ಕಂದಕ್ಕೆ ವ್ಯಾಖ್ಯಾನ
೨೩) ಅಧಿಕರಣಾರ್ಥಸಂಗ್ರಹ
೨೪) ವಿಕ್ಷಿಪ್ತಖಂಡಾರ್ಥಸಂಗ್ರಹ
೨೫) ಮಾಂಡೂಕ್ಯೋಪನಿಷದ್ ಭಾಷ್ಯ ಟಿಪ್ಪಣಿ
೨೬) ಈಶಾವಾಸ್ಯ ,, ,,
೨೭) ಅಥರ್ವಣ ,, ,,
೨೮) ಷಟ್ ಪ್ರಶ್ನೆ ,, ,,
೨೯) ಋಗ್ ಭಾಷ್ಯ ,, ,,

ಈ ಗ್ರಂಥಗಳು ದ್ವೈತಶಾಸ್ತ್ರಗಳನ್ನು ಸುಲಿದ ಬಾಳೆಯ ಹಣ್ಣಿನಂತೆ ಮಾಡಿಬಿಟ್ಟವೆ. ಈ ರೀತಿ ಕೀರ್ತಿಯನ್ನು ಪಡೆದು ತೀರ್ಥರು ಹೊನ್ನಾಳಿಯಲ್ಲಿ ( ಮೈಸೂರ ಸೀಮೆಯಲ್ಲಿ ) ವೈಕುಂಠವಾಸಿಗಳಾದರು. ಇವರ ವಂಶಜರು ಈಗ ಆ ಊರಲ್ಲಿಯೇ ಇರುತ್ತಾರೆ. ತೀರ್ಥರು ಶ್ರೀಮಂತ್ರಾಲಯ ಸ್ವಾಮಿಗಳು, ಉತ್ತರಾದಿ ಮಠದ ಶ್ರೀವೇದವ್ಯಾಸ ತೀರ್ಥರ ಸಮಕಾಲದವರು. ಶ್ರೀವಿದ್ಯಾಧೀಶತೀರ್ಥರ ಪೂರ್ವಾಶ್ರಮದ ಒಡಹುಟ್ಟಿದವರಾಗಿ **ಗುರುರಾಜ**ರೆಂದು ಖ್ಯಾತಿಯನ್ನು ಹೊಂದಿದ ಪಾಂಡುರಂಗೀ ಕೇಶವಾಚಾರ್ಯರೂ ಇವರ ಕಾಲದಲ್ಲಿಯೇ ಇದ್ದರು. (೧೫೦೦ನೇ ಶಕೆ)

## ೮ ಪ್ರಲ್ಹಾದ ಕೃಷ್ಣಾಚಾರ್ಯ ಉಮರ್ಜಿ

ಇವರು ಯಾದವಾರ್ಯರ ಶಿಷ್ಯರ ಮನೆತನದವರು. ಮೂಲ ಶಿಷ್ಯರು **ತಿರುಮಲಾಚಾರ್ಯ**ರು. ಪಂಢರಪುರದ ಹತ್ತಿರ **ಭೀಮಾ** ತೀರದಲ್ಲಿ ಉಮರ್ಜಿಯೆಂಬುದೇ ಇವರ ಮೂಲ ಸ್ಥಳ. ಇವರು **ಚತುಃ** ಶಾಸ್ತ್ರದಲ್ಲಿಯೂ ನಿಪುಣರಿದ್ದರಂತೆ.

ಇವರು ಉತ್ತರಾದಿ ಮಠದ ಸ್ವಾಮಿಗಳಾದ **ಶ್ರೀಸತ್ಯಾಭಿನವ ತೀರ್ಥ**ರೊಡನೆಯೇ ಯಾವಾಗಲೂ ಇರುತ್ತಿದ್ದರು. ಒಮ್ಮೆ ಇವರು ಕಾಶೀಕ್ಷೇತ್ರಕ್ಕೆ ಹೋದರು. ಅಲ್ಲಿಯ ಪಂಡಿತರೊಡನೆ ನ್ಯಾಯ, ವೇದಾಂತ, ವ್ಯಾಕರಣಗಳಲ್ಲಿ ಆಚಾರ್ಯರ ವಾದವಿವಾದವಾಗಿ ಎಲ್ಲೆ ಡೆಗಳಲ್ಲಿಯೂ ಜಯಶಾಲಿಗಳಾದರು. ಇಲ್ಲಿಯೇ **ತರ್ಕದೀಪಾವಲಿ** ಯೆಂಬ ಗ್ರಂಥವನ್ನು ರಚಿಸಿದ್ದಾರೆ.

ಒಮ್ಮೆ ಇವರು ನಿತ್ಯಾಹ್ನಿಕಕ್ಕೆಂದು ಗಂಗೆಯ ದಂಡೆಯ ಒಂದು ಪೊದರಿನಲ್ಲಿ ಏಕಾಂತವಾಗಿ ಕುಳಿತಿರಲು ಹಠೀಚ್ಛೆಯಿಂದ ಆ ದಂಡೆಯೇ ಅವರ ಮೇಲೆ ಕಡಿದುಕೊಂಡು ಬಿದ್ದಿತು. ಈ ಸುದ್ದಿಯು ಶ್ರೀಗಳಿಗೆ ತಿಳಿದು ಆಚಾರ್ಯರನ್ನು ಸಂಗಡ ಕರೆತಂದು ತಾವೇ ಅವರ ನಿಧ ನಕ್ಕೆ ಕಾರಣರಾದಂತಾಯಿತೆಂದು ಬಲು ಖೇದಗೊಂಡರು. ಬಿದ್ದ ದಂಡೆಯ ಮಣ್ಣನ್ನು ತೆಗೆಯಿಸುವ ವ್ಯವಸ್ಥೆಯನ್ನು ತೀವ್ರ ಮಾಡಿ ಸಿದರು. ಮಣ್ಣೆಲ್ಲ ಹೋದಾಗ ಆಚಾರ್ಯರಿಗೆ ಯಾವ ಅಪಾಯ ವಾಗದಲೇ ಅವರು ಸುರಕ್ಷಿತವಾಗಿ ಧ್ಯಾನಸ್ಥರಾದ ದೃಶ್ಯವು ಶ್ರೀಗ ಳಿಗೆ ಕಂಡು ಅವರು ಬಲು ಹರುಷಗೊಂಡರು. 'ಪ್ರಲ್ಹಾದನನ್ನು ಕಾಯ್ದಂತೆ ಶ್ರೀಹರಿಯು ತಮ್ಮನ್ನೀದಿನ ಕಾಯ್ದಿರುವನಲ್ಲದೆ ಬೇರಿಲ್ಲ. ಆದ್ದರಿಂದ ಇಂದಿನಾರಭ್ಯ ತಮ್ಮ ಹೆಸರು **ಪ್ರಲ್ಹಾದ ಕೃಷ್ಣಾ ಚಾರ್ಯ**ರೆಂಬದಾಗಲಿ' ಎಂದು ಶ್ರೀಗಳು ಸದ್ಗದರಾಗಿ ಉದ್ಗಾರ ವನ್ನು ತೆಗೆದರು.

ಇವರ ಶಿಷ್ಯರಲ್ಲಿ ಮುಖ್ಯರಾದವರು- ಮುಕ್ಕುಂದಿ, ಭೋಸರಿ, ಪಡಸಲಗಿ, ಕಾಖಂಡಿಕಿ, ಸಗರ, ಮತ್ತು ಫಲಾಹಾರದವರು.

ಇವರು ವಿಜಯನಗರದಲ್ಲಿ ಪರಲೋಕವಾಸಿಗಳಾದರು. ಆಗ ಅವರ ವಯಸ್ಸು ೭೬ ಇದ್ದಿತು. ಇವರು ೧೭೦೦ನೇ ಶತಕದಲ್ಲಿದ್ದರು.

ಇವರು ರಚಿಸಿದ ಗ್ರಂಥಗಳು.

೧) ಗೀತಾಭಾಷ್ಯದ ಟಿಪ್ಪಣಿ *
೨) ವಾದಾವಲಿ ,,
೩) ಬೃಹದಾರಣ್ಯ ಭಾಷ್ಯ ,, (ಕಠಿಣವಿದ್ದಲ್ಲಿ)
೪) ತಾರತಮ್ಯ ಪಂಚಶ್ಲೋಕೀ ,, ೬೦೦೦ ಗ್ರಂಥ
೫) ಅಥರ್ವಣೋಪನಿಷದ್ ಭಾಷ್ಯ ,, ೪೦೦೦ ಗ್ರಂಥ
೬) ೨ ಅಧ್ಯಾಯ ಸುಧಾಕ್ಕೆ ,,
೭) ವಿಷ್ಣುತತ್ವನಿರ್ಣಯಕ್ಕೆ (ಕಠಿಣವಿದ್ದಲ್ಲಿ)
೮) ತೈತ್ತರೀಯೋಪನಿಷತ್ ಭಾಷ್ಯಕ್ಕೆ ,, (ಕೆಲವು)
೯) ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯದ ತೃತಿಯೋಧ್ಯಾಯದ 'ಯೂಥಶ್ಚತುರ್ಧಾ' ಎಂದು ಮುಂತಾದ ೪ ಶ್ಲೋಕಗಳಿಗೆ ಟಿಪ್ಪಣಿ
೧೦) ತರ್ಕದೀಪಾವಲಿ ಮುಕ್ತಾವಲಿಗೆ ಟೀಕಾ
೧೧) ಕೃಷ್ಣಜಯಂತಿ 'ಉತ್ಸವಾಂತೇ ಪಾರಣಂ' 'ತಿಥ್ಯಂತೇ ಪಾರಣಂ, ಎಂಬುದಕ್ಕೆ ಪ್ರಮಾಣಗಳು.
೧೨) ಶ್ರವಣೋಪೋಷಣಕ್ಕೆ ಪ್ರಮಾಣಸಂಗ್ರಹ.

## ೯ ಲಿಂಗೇರಿಯವರ ಮನೆತನ

(ಮೂಲ ಪುರುಷರು:- ಶ್ರೀನಿವಾಸಾಚಾರ್ಯ.)

ಇವರು ರುಕ್ಮಿಣೀಶಾಚಾರ್ಯರ ಮಕ್ಕಳು. ಇವರೇ ಲಿಂಗೇರಿ ಮನೆತನದ ಪ್ರಸಿದ್ಧ ಮೂಲ ಪುರುಷರು. ಇವರ ಮೂಲ ಸ್ಥಳವು ಹೈದರಾಬಾದ ಇಲಾಖೆಯಲ್ಲಿಯ ಲಿಂಗೇರಿಯೆಂಬ ಹಳ್ಳಿಯು. ಇವರ ಶಾಸ್ತ್ರಾಧ್ಯಯನವು ಕಾಶಿಯಲ್ಲಾಯಿತು. ವೇದಾಂತವು ಮಾತ್ರ

* ಬೆಳಗಾವಿಯ ಮುದ್ರಾಲಯದಲ್ಲಿ ಅಚ್ಚಾಗಿದೆ. ಭಾಷ್ಯ, ಟೀಕಾ, ಟಿಪ್ಪಣಿಗಳಿಂದ ಸಹಿತವಾದ ಗೀತೆಯ ಪುಸ್ತಕದಲ್ಲಿ ಈ ಟಿಪ್ಪಣಿಯಿದೆ.

ಯಾದವಾರ್ಯರ ಹತ್ತಿರ ಆಯಿತು. ಅವರೇ ಇವರ ಮುಖ್ಯ ಗುರುಗಳು. ಇವರು ಕನ್ನೋಲಿ ವ್ಯಾಸಾಚಾರ್ಯರ ಬಳಿಯಲ್ಲಿಯೂ ಸ್ವಲ್ಪ ಅಧ್ಯಯನವನ್ನು ಮಾಡಿದಂತೆ ತಿಳಿಯುತ್ತದೆ.

ಶ್ರೀ ರಾಘವೇಂದ್ರಸ್ವಾಮಿಗಳವರ ಮಠದವರಿವರಾದುದರಿಂದ ಆ ಮಠದಲ್ಲಿ ಇವರ ಪ್ರಾಬಲ್ಯವು ಬಹಳವಾಗಿದ್ದಿತು. ಇವರು ಸುಮಾರು ೨೦೦ ವರ್ಷಗಳ ಹಿಂದೆ ಇದ್ದಂತೆ ಕಾಣುತ್ತದೆ. ಇವರ ಕಾಲಕ್ಕೆ ಉತ್ತರಾದಿ ಮಠದಲ್ಲಿ ಶ್ರೀಸತ್ಯನಾಥರು, ಶ್ರೀ ಸತ್ಯಾಭಿನವ ತೀರ್ಥರು ಪಟ್ಟವಾಳಿದಂತೆಯೂ ಮಂತ್ರಾಲಯ ಮಠದಲ್ಲಿ ಶ್ರೀರಾಘವೇಂದ್ರರ ಶಿಷ್ಯರಾದ ಶ್ರೀಯೋಗೀಂದ್ರರು ಸಂಸ್ಥಾನವನ್ನಾಳಿದಂತೆಯೂ ಶ್ರೀರಾಯರ ಮಠದಲ್ಲಿ ಉಲ್ಲೇಖವಿದೆ. ಮಂತ್ರಾಲಯ ಸ್ವಾಮಿಗಳ ಕಡೆಕಡೆಯ ಭಾಗದಲ್ಲಿ ಅವರಲ್ಲಿಯೂ ಈ ಆಚಾರ್ಯರ ಸ್ವಲ್ಪ ಪಾಠವಾಗಿದೆಯೆಂದೂ ಮಠದಲ್ಲಿ ಬರೆಹಗಳಿವೆ. ಇವರಿಗೆ ವರ್ಷಾಶನ–ಭೂಮಿ–ಕಾಣಿಕೆಗಳು ಇದೇ ಕಾಲಕ್ಕೆ ಸಿಕ್ಕಂತೆ ರಾಯಸಗಳಿಂದ ಕಂಡುಬರುತ್ತದೆ.

ಇವರು ರಚಿಸಿದ ಗ್ರಂಥಗಳು.

| | |
|---|---|
| ೧) ಶ್ರೀಮದ್ಭಾಗವತ ವ್ಯಾಖ್ಯಾನ | |
| ೨) ಶ್ರೀಮದ್ಭಾರತದ ೧೦ ಪರ್ವಕ್ಕೆ | ಟಿಪ್ಪಣಿ |
| ೩) ತತ್ವಸಂಖ್ಯಾನ | ,, |
| ೪) ತತ್ವವಿವೇಕ | ,, |
| ೫) ತತ್ವನಿರ್ಣಯ | ,, |
| ೬) ತತ್ವೋದ್ಯೋತ | ,, |
| ೭) ಕಥಾಲಕ್ಷಣ | ,, |
| ೮) ಮಾಯಾವಾದಖಂಡನ | ,, |
| ೯) ಪ್ರಪಂಚಮಿಥ್ಯಾತ್ವಾನುಮಾನಖಂಡನ | ,, |
| ೧೦) ಉಪಾಧಿಖಂಡನ | ,, |
| ೧೧) ಕರ್ಮನಿರ್ಣಯ | ,, |

| | |
|---|---|
| ೧೨) ಪ್ರಮಾಣಲಕ್ಷಣ | ಟಿಪ್ಪಣಿ |
| ೧೩) ಸಿದ್ಧಾಂತಪ್ರಭಾ ಶ್ರೀಮನ್ಯಾಯಸುಧಾ | ,, |
| ೧೪) ಪಂಡಿತಾಚಾರ್ಯರ ರಾಮಾಯಣ | ,, |
| ೧೫) ಅಣುವೇದಾಂತ ವ್ಯಾಖ್ಯಾನ | ,, |
| ೧೬) ಮಣಿಮಂಜರಿ | ,, |

ಹೊಸ ಗ್ರಂಥಗಳು

೧) ತತ್ವವಾದ ಕಂಠಾಭರಣ, ಬೌದ್ಧಧಿಕ್ಕಾರ
೨) ಸ್ಮೃತಿಮುಕ್ತಾವಲಿ, ಧರ್ಮಶಾಸ್ತ್ರ
೩) ಚಕ್ರಮೀಮಾಂಸಾ
೪) ರುಕ್ಮಿಣೀಹರಣ
೫) ಅಶೌಚನಿರ್ಣಯ
೬) ಪದಾರ್ಥಸಂಗ್ರಹ

ಇವರ ಮಕ್ಕಳಾದ ವ್ಯಾಸಾಚಾರ್ಯರು **ವೃಂದಾವನವ್ಯಾಖ್ಯಾನ** ವೆಂಬ ಗ್ರಂಥವನ್ನು ರಚಿಸಿದ್ದಾರೆ. ಶ್ರೀನಿವಾಸಾಚಾರ್ಯರ ೪ನೆಯ ತಲೆಯವರಾದ ರಾಮಾಚಾರ್ಯರೆಂಬವರಿಗೆ ಸ್ವಪ್ನದಲ್ಲಿ ಶ್ರೀರಾಯರ ದರ್ಶನವಾಗಿ ಧರ್ಮಾನದಿಯ ತೀರದಲ್ಲಿ ಒಂದು ವೃಂದಾವನವು ಸಿಕ್ಕುವದೆಂದು ಅವರೇ ಹೇಳಿವಂತೆಯೂ ಅದೇ ವೃಂದಾವನವೇ ಅವರ ಮನೆತನದಲ್ಲಿದ್ದಂತೆಯೂ ಐತಿಹ್ಯವಿದೆ. ಇವರು ರಚಿಸಿದ **'ಗುರುಗುಣಸ್ತವನ'** ವೆಂಬ ಗ್ರಂಥದ ಮೇಲಿಂದಲೂ ಈ ಸಂಗತಿಯು ತಿಳಿಯುವಂತಿವೆ. ಈ ರಾಮಚಂದ್ರಾಚಾರ್ಯರ ಮಕ್ಕಳಾದ ಸ್ವಾಮಿ ರಾಯಾಚಾರ್ಯರು ೧) ಅನುವ್ಯಾಖ್ಯಾನದೀಪಿಕಾ ೨) ದ್ವಿತ್ವವಾದಾರ್ಥ ೩) ತರ್ಕದೀಪಿಕಾ ಎಂಬ ಗ್ರಂಥಗಳನ್ನು ರಚಿಸಿದ್ದಾರೆ. ಇವರು ಗತಿಸಿಹೋಗಿ ೭೯ ವರ್ಷಗಳಾಗಿವೆ. ಈ ಮನೆತನದವರು ಈಗ ಹಾನಗಲ್ಲಲ್ಲಿದ್ದಾರೆ. ಯಾದವಾರ್ಯರಿಂದ ಅನುಗ್ರಹಿಸಲ್ಪಟ್ಟ ಶ್ರೀ ಬಾದರಾಯಣ ಪ್ರತಿಮೆಯು ಈಗಲೂ ಅವರಲ್ಲಿ ಪೂಜೆಗೊಳ್ಳುತ್ತಲಿದೆ.

## ೧೦ ಗುರ್ಜರಿ ಸುಬ್ರಹ್ಮಣ್ಯಾಚಾರ್ಯರು

ಇವರು ಯಾದವಾರ್ಯರ ಶಿಷ್ಯರ ವಂಶದವರೆಂದಿಷ್ಟೇ ಗೊತ್ತಾಗುತ್ತದೆಯೇ ಹೊರತು ಇವರ ಮೂಲ ಸ್ಥಾನ ಮತ್ತು ಹಿರಿಯರ

ಹೆಸರು ಮುಂತಾದುದೇನೂ ಗೊತ್ತಾಗುವುದಿಲ್ಲ. ಶ್ರೀ ಟೀಕಾಕೃತ್ಪಾದರ ಅನುಗ್ರಹಕ್ಕೆ ಇವರು ಪೂರ್ಣವಾಗಿ ಪಾತ್ರರಾಗಿದ್ದರೆಂದು ಇವರ ಪ್ರಸಿದ್ಧಿಯಿದೆ. ಈ ಬಗ್ಗೆ ಒಂದು ಐತಿಹ್ಯವುಂಟು:-

ಪುಣೆಯ ಪೇಶ್ವೆಯವರು ಮೇಲೆ ಮೇಲೆ ತಮ್ಮ ಓಲಗದಲ್ಲಿ ಸಭೆಗೂಡಿಸಿ ಬೇರೆ ಬೇರೆ ಶಾಸ್ತ್ರಗಳ ಘನವಿದ್ವಾಂಸರಿಗೆ ಶಾಸ್ತ್ರಾರ್ಥವಾದವನ್ನು ಮಾಡಲಿಕ್ಕೆ ಅವಸರವನ್ನೊದಗಿಸಿಕೊಡುತ್ತಿದ್ದರು. ಆ ವಾದದಲ್ಲಿ ಪ್ರತಿವಾದಿಗಳಿದ್ದರಂತೂ ಅಂದಿನ ಸಭೆಗೆ ಬಲು ಕಳೆಯೇರುತ್ತಿದ್ದಿತು. ಈ ಸಭೆಯಲ್ಲಿ **ಕಿರೀಟ ವೆಂಕಟರಮಣಾಚಾರ್ಯ**ರೆಂಬ ರಾಮಾನುಜೀಯ ಪಂಥದ ಪಂಡಿತರು ಷಟ್‌ಶಾಸ್ತ್ರದಲ್ಲಿ ಮಹಾ ಪಂಡಿತರೂ ಪ್ರತಿವಾದಿ ಭಯಂಕರರೂ ಎಂತೆಂಬ ಪ್ರಸಿದ್ಧಿಯನ್ನು ಪಡೆದಿದ್ದರು. ಈ ಸುದ್ದಿಯು ಕರ್ಣೋಪಕರ್ಣವಾಗಿ ಗುರ್ಜರಿ ಆಚಾರ್ಯರಿಗೆ ತಿಳಿದುಬಂದಿತು. ಆಗ ಆ ಪಂಡಿತರನ್ನು ಎದುರಿಸುವುದೆಂಬ ಕುತೂಹಲವು ಆಚಾರ್ಯರಿಗೆ ಬಲವಾಯಿತು. ಇದಕ್ಕಾಗಿ ಅವರು ಮಳಖೇಡದ ಶ್ರೀ ಟೀಕಾಚಾರ್ಯರ ಮರೆಹೊಕ್ಕರು. ಸುಧಾಪಾರಾಯಣದಿಂದ ಆಚಾರ್ಯರ ಸೇವೆಯು ಸಾಗಿತು. ಎರಡು ವರ್ಷಗಳಾಗಿ ಹೋದುವು. ಕಡೆಗೆ ಕನಸಿನಲ್ಲಿ ಆಚಾರ್ಯರಿಗೆ ಶ್ರೀ ರಾಯರ ದರ್ಶನವಾಗಿ ಪೂರ್ಣ ಅನುಗ್ರಹವಿದೆಯೆಂಬ ಅಭಿವಚನವು ಅವರಿಂದ ದೊರೆಯಿತು. ಆಗವರಿಗಾದ ಆನಂದವನ್ನು ಹೇಳಲಸಾಧ್ಯ !

ಪುಣೆಯು ದೊಡ್ಡ ಪಟ್ಟಣ! ಅಪರಿಚಿತ ಸ್ಥಳ! ಅಲ್ಲಿ ತಮ್ಮನ್ನು ಕೇಳುವವರಾರು? ಈ ಮುಂತಾಗಿ ತೋರಿಬರುತ್ತಿರುವ ಯಾವ ವಿಚಾರಗಳಿಗೂ ಸೊಪ್ಪು ಹಾಕದೆ ಆಚಾರ್ಯರು ನೇರವಾಗಿ ಹೇಗೋ ಪುಣೆಪಟ್ಟಣಕ್ಕೆ ಬಂದು ಮುಟ್ಟಿದರು. ಶ್ರೀರಾಯರ ಅನುಗ್ರಹವೇನು ಸಾಮಾನ್ಯವೇ? ಸಭೆಯ ಪ್ರವೇಶಕ್ಕೆ ಅನುವು ಸಿಕ್ಕುವ ಸಮಯವು ದೊರೆಯುವಂತಾಯ್ತು. ಪೇಶ್ವೆಯರ ಕುಶಲ ಮಂತ್ರಿಗಳಾದ ನಾನಾಫಡನವೀಸರ ದರ್ಶನವು ಆಚಾರ್ಯರಿಗೆ ದೇವಾಲಯದಲ್ಲಾಯಿತು. ಆಚಾರ್ಯರು ತಮ್ಮ ಮನೀಷೆಯನ್ನು ಫಡನವೀಸರಿಗೆ

ಅರಿಕೆಮಾಡಿಕೊಂಡರು. ಅವರು ಅದನ್ನು ಪೂರಿಸಿಕೊಡುತ್ತೇವೆಂದು ಆಚಾರ್ಯರಿಗೆ ಅಭಿವಚನವನ್ನಿತ್ತರು. ಆಚಾರ್ಯರ ಬಾಹ್ಯ ಲಕ್ಷಣಗಳೇನು ಅಷ್ಟು ಆಕರ್ಷಕವಾಗಿರದಿದ್ದರೂ ಒಳಗಿನದನ್ನು ಕಂಡವರಾರೆಂಬ ವಿಚಾರದಿಂದ ಪ್ರೇರಿತರಾಗಿ ಫಡನವೀಸರು ಸಭೆಯ ಏರ್ಪಾಡನ್ನು ಮರುದಿನವೇ ಮಾಡಿಸಿದರು. ಸಭೆಗೆ ಬಂಗಾಲದ **ಭವದೀಯಃಮಿಶ್ರ**ರೆಂಬವರು ಅಧ್ಯಕ್ಷರಾದರು. ಆಚಾರ್ಯರ ವಾದವು ವೇದಾಂತದಲ್ಲಾಗುವದೆಂದೂ ಮತ್ತು ಕಿರೀಟಿ ವೆಂಕಟರಮಣಾಚಾರ್ಯರೊಡನೆ ಆಗುವುದೆಂದೂ ಆಚಾರ್ಯರ ಅಭಿಪ್ರಾಯವು ಮುಂದಾಯಿತು. 'ಷಟ್‌ಶಾಸ್ತ್ರಗಳು ಕರತಲಾಮಲಕವಾಗಿರುವಾಗ ಈ ವೇದಾಂತಿಯದೇನು ಪಾಸಟಿ ನನಗೆ' ಎಂತೆಂದು ಕಿರೀಟಿಗಳು ಆಚಾರ್ಯರೊಡನೆ ವಿವಾದಕ್ಕೆ ಮೊದಲು ಸಮ್ಮತಿಸಲಿಲ್ಲ. ಕೊನೆಗೆ ಅಧ್ಯಕ್ಷರ ಅಪ್ಪಣೆಯಂತೆ ವಿವಾದವು ಪ್ರಾರಂಭವಾಯಿತು. ಮೊದಮೊದಲು ಸಿಂಗವು ಜಂಬೂಕನ ಮೇಲೇ ಏರಿಹೋಗುತ್ತಿದೆಯೆಂಬ ದೃಶ್ಯವು ಸಭಿಕರಿಗೆ ತೋರಿದಂತಾಯಿತು. ಆಚಾರ್ಯರು ಶ್ರೀಟೀಕಾಕೃತ್ಪಾದರನ್ನು ಮನದಲ್ಲಿ ಅನನ್ಯಭಾವದಿಂದ ಧ್ಯಾನಿಸುತ್ತ ಸ್ವಲ್ಪಸ್ವಲ್ಪವಾಗಿ ವಾದದಲ್ಲಿ ಮುಂದೆಮುಂದೆ ಸರಿಯತೊಡಗಿದರು. ಆಚಾರ್ಯರ ಕಂಠವು ಉಬ್ಬಿಬಂದು ಅವರ ಬಾಯಿಯಿಂದ ಮಾತುಗಳು ಗುಂಡುಗಳು ಸಿಡಿದುಬಂದಂತೆ ಬರಲಾರಂಭಿಸಿದುವು. ಆಗತಾನೆ ಕಿರೀಟಿಗಳ ಸದ್ದಡಗಿತು. ಸಭೆಯಲ್ಲೆಲ್ಲ ಮೂಕಭಾವವು ಪಸರಿಸಿಬಿಟ್ಟಿತು. ಆಚಾರ್ಯರ ವಾಕ್‌ಪಾಂಡಿತ್ಯಕ್ಕೆ ಪ್ರತಿಯೊಬ್ಬರೂ ತಲೆದೂಗಿದರು. ಇದನ್ನು ತಿಳಿದು ಫಡನವೀಸರು ಆಚಾರ್ಯರನ್ನು ಬಹಳವಾಗಿ ಮನ್ನಿಸಿದರು. ಬೇಕಾದುದನ್ನು ಕೇಳಿಕೊಳ್ಳಿರೆಂದು ಆಚಾರ್ಯರಿಗೆ ಆನಂದದಿಂದ ನುಡಿದರು. ಶ್ರೀ ಟೀಕಾರಾಯರ ಸೇವೆಯ ಸಾರ್ಥಕತೆಯು ಮಾತ್ರ ಬೇಕಿದ್ದ ಆಚಾರ್ಯರು ಉಳಿದ ಗ್ರಾಮ ಭೂಮಿಗಳ ಉಂಬಳಿಯನ್ನಾವುದನ್ನು ಕೇಳಿಕೊಳ್ಳದೆ "ಸುಧಾಗ್ರಂಥವನ್ನು ಕರಿಯ ಮೇಲಂಬಾರಿಯಲ್ಲಿಟ್ಟು ಮೆರೆಯಿಸುತ್ತ **'ಮಾಧ್ವಾನಾಂ ಜಯಃ'** ಎಂದು ಡಂಗುರಹೊಯ್ಸುವು"ದೆಂದು ಕೇಳಿಕೊಂಡರು. ಅವರ ಆ ಬಯಕೆಯು ಈಡೇರಿದುದನ್ನು ಕಣ್ಣಲಿ ಕಾಣುತ್ತಿರುವಾಗ ಆಚಾ

ರ್ಯರು ಸಗದ್ಗದರಾಗಿ ಕಣ್ಣೀರುದಿರಿಸುತ್ತ ಬೀದಿಯಲ್ಲಿ ನಿಂತು ಬಿಟ್ಟಿದ್ದರು. ಟೀಕಾರಾಯರ ಸೇವೆಯು ನನ್ನಿಂದ ಇಷ್ಟಾದರೂ ಆಯಿತೆಂದು ಅವರು ಮನದಲ್ಲಿಯೇ ಸಂತಸಬಟ್ಟರು.

ಅಂದಿನಿಂದ ಆಚಾರ್ಯರ ಕೀರ್ತಿಯು ದಿಗಂತವಾಯಿತು. ಪುಣೆಯಿಂದ ಅವರು ಶ್ರೀಮದುತ್ತರಾದಿ ಮಠದ ಶ್ರೀಸತ್ಯಧರ್ಮರ ದರ್ಶನಕ್ಕೆಂದು ಸಾಗಿಬಂದರು. ಶ್ರೀಗಳು ಆಚಾರ್ಯರನ್ನು ಬಹುವಾಗಿ ಮನ್ನಿಸಿದರು. ಮುಂದೆಮುಂದೆ ಶ್ರೀಗಳೊಡನೆ ಆಚಾರ್ಯರ ಬೀಗತನವೂ ಆಯಿತು.

ಇವರ ಶಿಷ್ಯರು ಬಹಳ. ಮಹಿಸೂರ ಮಂತ್ರಿಗಳಾದ ಪೂರ್ಣಯ್ಯನವರೂ ಹೈದರಾಬಾದದ ರಾಜಾರಘೂತ್ತಮರಾಯರೂ ಇವರ ಶಿಷ್ಯಕೋಟಿಗೇ ಸೇರಿದವರು. ಆದ್ದರಿಂದಲೇ ಆಚಾರ್ಯರ ವೈಭವಾದಿಗಳಿಗೆ ಸ್ವಲ್ಪಾದರೂ ಕಡೆತನಕ ಕುಂದುಂಟಾಗಲಿಲ್ಲ. ಇವರು ಪಲ್ಲಕ್ಕಿಯಲ್ಲಲ್ಲದೆ ಪಾದಚಾರಿಗಳಾಗಿ ತಿರುಗುತ್ತಿರಲಿಲ್ಲ. ಶ್ರೀಟೀಕಾರಾಯರಿಗೆ ದಿನಾಲು ಮಂಡಿಗೆಯನ್ನು ಮಾಡಿಸಿ ಇವರು ಹಸ್ತೋದಕವನ್ನು ಮಾಡಿಸುತ್ತಿದ್ದರು.

ಈ ಆಚಾರ್ಯರು ಕಾಶಿಯಲ್ಲಿಯ ಒಂದು ಮಹಾಸಭೆಯಲ್ಲಿ ಪಿಷ್ಟಪಶುವಿನ ವಿಷಯಕ್ಕೆ ವಿವಾದಮಾಡಿ ಎಲ್ಲರನ್ನು ಪ್ರಮಾಣಗಳಿಂದ ಒಡಂಬಡಿಸಿದಂತೆ ಐತಿಹ್ಯವಿದೆ. ಶ್ರೀಮದಾಚಾರ್ಯರ ಪುರಾಣ ಪ್ರಮಾಣವಾಕ್ಯಗಳು ಕಲ್ಪಿತವಾಗಿವೆಯೆಂಬುದರ ನಿರಾಸಾರ್ಥವಾಗಿ ಎಲ್ಲ ಗ್ರಂಥಗಳನ್ನು ತಂದು ಸರ್ವರಿಗೂ ಆಚಾರ್ಯರು ತೋರಿಸಿ ಬಿಟ್ಟರಂತೆ.

ಇವರು **ಚಂದ್ರಿಕಾ**ಕ್ಕೆ ವ್ಯಾಖ್ಯಾನ ಮಾಡಿದ್ದಾರೆ. ಇವರು ಶ್ರೀಸತ್ಯಧರ್ಮರ ಕಾಲಕ್ಕೆ ೧೭೫೭ನೇ ಸಂವತ್ಸರದ ಸುಮಾರದಲ್ಲಿದ್ದರು.

## ೧೧ ಆಯಿಯವರ ಮನೆತನದ ಚರಿತ್ರೆ

ಇವರೂ ಯಾದವಾರ್ಯರ ಶಿಷ್ಯರ ಮನೆತನದವರು. ಮೂಲ ಪುರುಷರು **ಹಿರಣ್ಯಾಚಾರ್ಯ**ರು. ನರಹರಿಯಾಚಾರ್ಯ, ಸತ್ಯನಾಥಾ

ಚಾರ್ಯ, ನರಸಿಂಹಾಚಾರ್ಯ ಈ ಮೂವರು ಈ ಮನೆತನಪಲ್ಲಿ ಗ್ರಂಥಕಾರರು.

೧) ನರಹರಿಯಾಚಾರ್ಯರು:- ೧) ಗೀತೆಗೆ ವಿವೃತಿ
೨) ಮಧ್ವಸಿದ್ಧಾಂತಸಾರ
೩) ಅಣುಭಾಷ್ಯವ್ಯಾಖ್ಯಾನ

೨) ಸತ್ಯನಾಥಾಚಾರ್ಯರು:- ೧) ವಿಷ್ಣುತತ್ವನಿರ್ಣಯಟೀಕಾ
೨) ಸುಧಾಕ್ಕೆ ವಿಷಯವಾಕ್ಯಾರ್ಥ
೩) ಭಾಗವತದಲ್ಲಿಯ ಪ್ರತಿಗೀತಾ ವ್ಯಾಖ್ಯಾನ

೩) ನರಸಿಂಹಾಚಾರ್ಯರು:- ೧) ಸೂತ್ರಾರ್ಥ

ನರಹರಿಯಾಚಾರ್ಯರು ಶ್ರೀಮಂತ್ರಾಲಯದ ರಾಯರ ಕಾಲಕ್ಕಿದ್ದಂತೆ ತಿಳಿಯುತ್ತದೆ. ಉಳಿದವರ ವಿಷಯ ತಿಳಿದಿಲ್ಲ.

## ೧೨ ವೆಂಕಟಾಚಾರ್ಯ ರಾಮಾಚಾರ್ಯ ಐಜಿ.

ಮಂತ್ರಾಲಯದ ಸಮೀಪದಲ್ಲಿ ಮೊಗಲಾಯಿಯ ಹದ್ದಿನಲ್ಲಿ **ವೇಣೀಸೋಮಾಪುರ**ವೆಂಬ ಗ್ರಾಮವಿದೆ. ಅಲ್ಲಿಯ ಜಹಾಗೀರದಾರರಿವರು. ಜಹಾಗೀರಿಯನ್ನು ಇವರೇ ಸಂಪಾದಿಸಿದ್ದಾರೆ. ಇವರು ಮಹಾ ವಿದ್ವಾಂಸರಿದ್ದು ಬಹು ಜನ ಶಿಷ್ಯರಿಗೆ ಪಾಠಪ್ರವಚನಾದಿಗಳನ್ನು ಹೇಳಿದ್ದಾರೆ. ೧೩ ಸಾರೆ ಸುಧಾಪ್ರವಚನವು ಇವರಿಂದಾಗಿದೆಯಂತೆ. ಇವರು ಸೋಮಯಾಗ ಮಾಡಿದಂತೆ ಪ್ರಸಿದ್ಧಿಯಿದೆ. ಇವರು ಕೆಲ ಕಾಲದ ಮೇಲೆ ಶ್ರೀಭುವನೇಂದ್ರತೀರ್ಥರಿಂದ ಯತ್ಯಾಶ್ರಮವನ್ನು ಸ್ವೀಕಾರಮಾಡಿದರು. ಇವರ ಚತುರ್ಥಾಶ್ರಮದ ಹೆಸರು **ವ್ಯಾಸತತ್ವಜ್ಞ**ರು. ಇವರ ವೃಂದಾವನವು ವೇಣೀಸೋಮಾಪುರದಲ್ಲಿಯೇ ಅದೆ. ಇವರು ಯಾವ ಸಂಸ್ಥಾನಕ್ಕೂ ಹೊಂದಿರದಿದ್ದರೂ ಪ್ರತಿವರ್ಷ ಇವರ ಆರಾಧನೆಯು ತಪ್ಪದೆ ನಡೆಯುತ್ತದೆ. ಇವರ ವಂಶದವರು ವೇಣೀಸೋಮಾಪುರದಲ್ಲಿಯೇ ಇನ್ನೂ ಇದ್ದಾರೆ.

ಇವರ ಮುಖ್ಯ ಶಿಷ್ಯರು.

೧) ಅಡವಿಯವರು  ೩) ರಾಯಚೂರವರು
೨) ಪಾನುನಸ್ಯಾಟಿಯವರು  ೪) ಕಣೇಕಲ್ಲೂರವರು

ಇವರು ಬರೆದ ಗ್ರಂಥಗಳು.

೧) ಸುಧಾಟಿಪ್ಪಣಿ ರಸರಂಜಿನಿ, ಲಘು ಮತ್ತು ಗುರು
೨) ವಿಷ್ಣುತತ್ವವಿನಿರ್ಣಯ ಟಿಪ್ಪಣಿ, ಲಘು ಮತ್ತು ಗುರು
೩) ನ್ಯಾಯಾಮೃತಟಿಪ್ಪಣಿ, ವ್ಯಜನ
೪) ಭಾಗವತ ಸಪ್ತಮ ಸ್ಕಂದ ಟಿಪ್ಪಣಿ, ಮಂದನಂದಿನೀ
೫) ಚಂದ್ರಿಕಾ ಟಿಪ್ಪಣಿ, ಶರದಾಗಮ ಪ್ರಮಾಣಾಧಿಕರಣ

## ೧೩ ಗಲಗಲಿ ಆಚಾರ್ಯರ ಮನೆತನ

ಗಾಲವ ಋಷಿಗಳ ತಪದಿಂದ ಪುನೀತವಾದ ಕ್ಷೇತ್ರವೆಂದು ಹೆಸರುಗೊಂಡಿರುವ ವಿಜಾಪುರ ಜಿಲ್ಹೆಯಲ್ಲಿಯ ಕೃಷ್ಣಾತೀರದ **ಗಲಗಲಿ**ಯೆಂಬ ಗ್ರಾಮವೇ ಇವರ ಮನೆತನದವರ ವಾಸಸ್ಥಳವು. ಇವರ ಪೂರ್ವಜರು ಮೊದಲು ಮಹಾರಾಷ್ಟ್ರದತ್ತಣಿಂದ ಬಂದವರೆಂದೂ ಅವರ ಕುಲನಾಮವು **ಹಿಮವರಕರ**ರೆಂದಿತ್ತೆಂದೂ ತಿಳಿದು ಬರುತ್ತದೆ.

ಅಲ್ಲೀ ಅದಿಲ್‌ಶಹನು ವಿಜಾಪುರದಲ್ಲಿ ಆಳುತ್ತಿರುವಾಗ **ದೇಶಪಾಂಡೆ ಶ್ರೀಪತಿರಾಯ**ರು **ನರಸಿಂಗರಾಯ**ರೆಂಬಿಬ್ಬರು ಅಣ್ಣತಮ್ಮಂದಿರಾದ ಸ್ಮಾರ್ತ ಬ್ರಾಹ್ಮಣರು ಅವನಲ್ಲಿ ಸರದಾರರಾಗಿದ್ದರು. ಅವನ ಅಪ್ಪಣೆಯಂತೆ ಒಮ್ಮೆ ಅವರು ಬೆಳಗಾವ ಜಿಲ್ಹೆಯ ಕಡೆಗೆ ದಂಡೆತ್ತಿ ಸಾಗಿರಲು ನಡುವೆ ಯಜ್ಞಕುಂಡ ಅಥವಾ ಯಕ್ಕುಂಡಿಯೆಂಬ ಹಳ್ಳಿಯು ಅವರಿಗೆ ದಾರಿಯಲ್ಲಿ ಕಂಡಿತು. ಆಗ ಅಲ್ಲಿ ಮಲಾಪಹಾರಿಯ ತೀರದ ಮೇಲೆ ಅಶ್ವತ್ಥಮರದಡಿಯಲ್ಲಿ ಶಿಷ್ಯರಿಂದೊಡಗೂಡಿ ತೇಜಃಪುಂಜರಾಗಿ ಪಾಠವನ್ನು ಹೇಳುತ್ತ ಕುಳಿತಿರುವ **ಶ್ರೀಯಾದವಾರ್ಯ**ರ ಮೇಲೆ ಅವರ ದೃಷ್ಟಿಯು ಸಹಜವಾಗಿ ದೂರದಿಂದ ಬಿದ್ದಿತು. ಆರೋ ಮಹಾನುಭಾವರೆಂದು ಬಗೆದು ಅಣ್ಣತಂ

ಮ್ಮಂದಿರು ತಮ್ಮ ಸೇನಾಪತಿಯ ವೇಷದಿಂದಲೇ ಅವರೆಡೆಗೆ ಹೋಗಿ ಸಾಷ್ಟಾಂಗವೆರಗಿದರು. ಪರಿಚಯಕುಶಲಪ್ರಶ್ನೆಗಳಾದನಂತರ, ಆ ಅಣ್ಣತಮ್ಮಂದಿರ ಏಳ್ಗೆಯು ಒದಗಿ ಬಂದಿತೇನೋ, ಶ್ರೀಯಾದವಾರ್ಯರು ಅವರ ಮೈಮೇಲಿನ ಉಕ್ಕಿನಂಗಿಯನ್ನು ನೋಡಿ "ವೈರಿಗಳ ಶಸ್ತ್ರಗಳ ಕಡಿತವನ್ನು ತಪ್ಪಿಸಿಕೊಳ್ಳಲು ಈ ಅಂಗಿಯನ್ನು ತೊಟ್ಟ ನೀವು ಯಮನಾಳ್ಗಳ ನೇಣದಿಂದ ನುಸುಳಿಕೊಂಡು ಹೋಗಲಿಕ್ಕೆ ಏನಾದರೂ ಹಂಚಿಕೆಯನ್ನು ಹಾಕಿರುವಿರೋ?'' ಎಂದು ಮಾತಾಡಲು ಮೊದಲುಮಾಡಿ "ಬ್ರಾಹ್ಮಣರಾದ ನೀವು ಇಂತಿಂತು ಕಾಲಕಳೆಯುತ್ತ ದೇಹವನ್ನು ಸಾರ್ಥಕಮಾಡಿಕೊಳ್ಳುವುದೊಳಿತೆಂ''ದು ಅವರ ಮನದಲ್ಲಿ ಮೂಡುವಂತೆ ಬೋಧಿಸಿದರು. ಯಾದವಾರ್ಯರಂತಹ ತಪೋಮಹಿಮರ ಉಪದೇಶವು ವ್ಯರ್ಥವಾದೀತೇ? ಆ ಸೇನಾಪತಿಗಳಿಗೆ ಕೂಡಲೇ ವಿರಾಗವೇ ಉಂಟಾಯಿತು; ಸೇನಾಪತಿಯ ಉಡುಪುಗಳನ್ನು ತೆಗೆದು ಸೈನ್ಯದವರೆಡೆಗೆ ಕೊಟ್ಟು ಇನ್ನುಮೇಲೆ ತಮಗೆ ಆ ಕೆಲಸವೇ ಬೇಡವೆಂದು ಅವರಿಂದ ಬಾದಶಹರಿಗೆ ಅವರು ಹೇಳಿಕಳುಹಿದರು; ಯಾದವಾರ್ಯರನ್ನು ಉದ್ಧರಿಸಬೇಕೆಂದು ಕೇಳಿಕೊಳ್ಳತೊಡಗಿದರು. ಆಗ ಆ ಮಹಿಮರು ಅವರನ್ನು ಸಮಾಧಾನಗೊಳಿಸಿ ಪದ್ಧತಿಯಂತೆ ವಿಷ್ಣುದೀಕ್ಷೆಮುದ್ರಾಧಾರಣಾದಿಗಳ ನಿಮಿತ್ತವಾಗಿ ಅವರನ್ನು ಶೂರ್ಪಾಲಿಯಲ್ಲಿರುವ **ಶ್ರೀವಿದ್ಯಾಧೀಶ** ಸ್ವಾಮಿಗಳ ಕಡೆಗೆ ಕಳುಹಿಕೊಟ್ಟರು. ಆ ಬಳಿಕ ಶ್ರೀವಿದ್ಯಾಧೀಶ ಸ್ವಾಮಿಗಳಿಂದ ಆ ಅಣ್ಣತಮ್ಮಂದಿರರಿಗೆ ಮುದ್ರಾಧಾರಣ ಮಂತ್ರೋಪದೇಶಾದಿಗಳು ದೊರೆತುವು. ಶ್ರೀಗಳು ಅವರನ್ನು ಕಂಡು ಬಹು ಆನಂದಬಟ್ಟರು. ಶ್ರೀಗಳಿಂದಲೇ ತಾವು ಮುಂದೆ ಎಲ್ಲಿರುವುದೆಂಬವನ್ನು ಗೊತ್ತುಪಡಿಸಿಕೊಂಡು ಅವರ ಹೇಳಿಕೆಯಂತೆ ಅವರು ಗಲಗಲಿಗೆ ಬಂದು ಇದ್ದರು.

ಅವರೊಳಗಿನ ಶ್ರೀಪತಿರಾಯರಿಗೆ ೫ ಮಕ್ಕಳು. ಹಿರಿಯ ಮಗ **ಗೋವಿಂದಾಚಾರ್ಯ**ರೆಂಬವರು. ಇವರನ್ನು ಅವರು ಅಧ್ಯಯನಕ್ಕಾಗಿ ಶ್ರೀಗಳ ಹತ್ತಿರಕ್ಕೆ ಕಳುಹಿಬಿಟ್ಟರು. ಇವರ ಬುದ್ಧಿಯು ಬಹಳ ತೀಕ್ಷ್ಣವಾಗಿದ್ದುದರಿಂದ ೧೨ ವರ್ಷಗಳಲ್ಲಿ ನ್ಯಾಯವೇದಾಂತ

ಗಳು ಇವರ ಕರತಲಾಮಲಕವಾಗಿಬಿಟ್ಟುವು. ಇವರ ತಮ್ಮಂದಿರೇ **ಮುದ್ಗಲಾರ್ಯ**ರು. ಆ ಆರ್ಯರ ಎಲ್ಲ ಅಧ್ಯಯನವು ಅಣ್ಣಂದಿರ ಲ್ಲಿಯೇ ಆಯಿತು. ಇವರೂ ನ್ಯಾಯವೇದಾಂತಗಳಲ್ಲಿ ನಿಷ್ಣಾತರಾ ದರು. ಹಿಂದೆ ಎಂದೂ ಬೀಜವನ್ನು ಬಿತ್ತಿರದೆ ಈಗಲೇ ಚೆನ್ನಾಗಿ ಹದಗೊಳಿಸಿ ಬಹು ಜೋಕೆಯಿಂದ ಬಿತ್ತಿದ ಭೂಮಿಯಂತಿದ್ದ ಶ್ರೀಪತಿ ರಾಯರ ಕುಲವು ಇಂತು ಫಲಿಸುತ್ತಿದ್ದುದರಲ್ಲಿ ಆಶ್ಚರ್ಯವೇನು ?

ಗೋವಿಂದಾಚಾರ್ಯರು ತಮ್ಮ ಅಧ್ಯಯನವನ್ನು ಮುಗಿಸಿ ಕೊಂಡು ಸುಧಾಟಿಪ್ಪಣಿಯ ರೂಪದಿಂದ ಗುರುದಕ್ಷಿಣೆಯನ್ನು ಮುಟ್ಟಿ ಸಬೇಕೆಂದು ಹವಣಿಸುತ್ತಿದ್ದರು. ಆದರೆ ತಮ್ಮ ವಾಕ್ಯಾರ್ಥಚಂದ್ರಿ ಕೆಯೆಂಬ ಸುಧಾದ ಟಿಪ್ಪಣಿಯಲ್ಲಿ ನಿಂತುಹೋದ ಒಂದು ವಾಕ್ಯ ವನ್ನು ಯಾರೋ ಅನುವದಿಸಿರುವರೆಂಬುದನ್ನು ತಿಳಿದು ಕೋಪದಿಂದ ಸಹಜವಾಗಿ 'ಆರಿವರು ಹೀಗೆ ಮಾಡಿದವರು, ನಿರಾಯುಷಿಗಳು;' ಎಂದು ಶ್ರೀವಿದ್ಯಾಧೀಶರು ಅಂದದ್ದೂ ಮಹಾವಾಕ್ಯವಾದುದರಿಂದ ಅನುವದಿಸಿದ ಅವರ ಮಕ್ಕಳು ಗತಿಸಿಹೋಗಿದ್ದುದೂ ಆಚಾರ್ಯರಿಗೆ ಗೊತ್ತಿತ್ತು. ಆದುದರಿಂದಲೇ ಅನುಕೂಲ ಕಾಲವನ್ನು ನಿರೀಕ್ಷಿಸು ತ್ತಿದ್ದು ಶ್ರೀಗಳಿಂದ ಟಿಪ್ಪಣಿಗೆಂದು ಅಪ್ಪಣೆಯನ್ನು ಹೊಂದಿ **ಪಂಚ ರತ್ನಸ್ತಬಕ**ವೆಂಬ ಗ್ರಂಥವನ್ನು ಅವರು ಗುರುಗಳಿಗೆ ಒಪ್ಪಿಸಿದರೆಂದು ಐತಿಹ್ಯವುಂಟು. ಶ್ರೀಗಳು ಬರೆದ **ವಾಕ್ಯಾರ್ಥಚಂದ್ರಿಕೆ**ಯು ಪೂರ್ಣ ವಾಗದ್ದರಿಂದ ಅದನ್ನು ಮುಗಿಸಲಿಕ್ಕೆ ಅವರ ತಮ್ಮಂದಿರಾದ ಕೇಶ ವಾಚಾರ್ಯರೂ ಅದೇ ಕಾಲಕ್ಕೆ ಅವರಿಂದ ಅಪ್ಪಣೆ ಪಡೆದು **ಶೇಷ ವಾಕ್ಯಾರ್ಥಚಂದ್ರಿ**ಕೆಯನ್ನು ಮಾಡಿದರೆಂದೂ ತಿಳಿಯುತ್ತವೆ. ಈ ಎಲ್ಲ ಸಂಗತಿಗಳಿಗೆ ಶ್ರೀಸತ್ಯನಾಥಸ್ವಾಮಿಗಳು, ರಾಜಗೋಪಾಲದಾ ಸರು, ಐಜಿ ಆಚಾರ್ಯರ ಗ್ರಂಥಗಳಲ್ಲಿ ಆಧಾರವು ಈಗಲೂ ಸಿಗುತ್ತದೆ.

ಗೋವಿಂದಾಚಾರ್ಯರು ಶ್ರೀಗಳಿಂದ ಫಲಮಂತ್ರಾಕ್ಷತೆಗಳನ್ನು ತೆಗೆದುಕೊಂಡು ಗಲಗಲಿಗೆ ಬರಬೇಕೆಂದು ಶ್ರೀನೃಸಿಂಹದೇವರ ವೃಕ್ಷಕ್ಕೆ ಪ್ರದಕ್ಷಿಣೆಯನ್ನು ಹಾಕುತ್ತಿರುವಾಗ ಅದರದೊಂದು ರೆಂಬೆಯು ಮುರಿದು ಎದುರು ಬಿದ್ದಿದುದನ್ನು ಕಂಡು ಅಪಶಕುನವೆಂದು ಅಸ

ಮಾಧಾನದಿಂದ ಶ್ರೀಗಳೆಡೆಗೆ ಹೋದಾಗ ಅವರು "ಆದದ್ದೆಲ್ಲ ಒಳಿತೇ ಆಗಿದೆ; ಆ ರೆಂಬೆಯನ್ನೇ ಗಲಗಲಿಯಲ್ಲಿ ಹೂಳಿ ಪ್ರೋಷಿಸಿರಿ; ಅದು ಮತ್ತೆ ಚಿಗುರುವುದೆಂ''ದು ಹೇಳಿ ಕಳುಹಿದರಂತೆ. ಅವರಂತೆ ಆಚಾರ್ಯರು ಮಾಡಲು ಆ ವೃಕ್ಷವು ಪಲ್ಲವಿಸಿ ಮೊನ್ನೆಮೊನ್ನೆಯವರಿಗೂ ಶ್ರೀನೃಸಿಂಹದೇವರೆಂದು ಗಲಗಲಿಯಲ್ಲಿ ಪೂಜೆಗೊಂಡಿತು.

ಮುಂದೆ ಗಲಗಲಿಯಲ್ಲಿಯ ಈ ಇಬ್ಬರು ಪಂಡಿತ ಬಂಧುಗಳ ಕೀರ್ತಿಯು ಎಲ್ಲೆಡೆಗೆ ಪಸರಿಸಿ ಅನೇಕ ಕಡೆಯಿಂದ ವಾದಿಗಳು ಬಂದು ಸಂತೋಷದಿಂದ ಜಯಪತ್ರವನ್ನು ಕೊಟ್ಟುಹೋಗುತ್ತಿದ್ದರೆಂದು ಪರಂಪರೆಯ ಸುದ್ದಿಯಿದೆ. **ಶ್ರೀಸತ್ಯಪೂರ್ಣ**ಸಾಮಿಗಳ ಕಾಲಕ್ಕೆ ಪ್ರಸಿದ್ಧ ಪರವಾದಿಯಾದ **ಆರಣಿ ಸುಬ್ಬರಾಯ**ರೆಂಬವರನ್ನು ೧೮ ದಿವಸ ವಾದಮಾಡಿ ಮುದ್ಗಲಾರ್ಯರು ಗೆದ್ದು ಮಠದ ಮನ್ನಣೆಗೆ ಪಾತ್ರರಾದರೆಂದು ಮಠದ ಪರಂಪರೆಯಲ್ಲಿ ಐತಿಹ್ಯವಿದೆ. ಆರ್ಯರು ಕೆಳಗೆ ಬರೆದಂತೆ ಗ್ರಂಥಗಳನ್ನು ರಚಿಸಿದ್ದಾರೆ.

| | |
|---|---|
| ೧) ಅದ್ವೈತಕುಠಾರ | ಚಂದ್ರಿಕಾಚಾರ್ಯರ ನ್ಯಾಯಾಮೃತಕ್ಕೆ ಮಧುಸೂದನ ಸರಸ್ವತಿಯೆಂಬ ಪರವಾದಿಯಿಂದ ಬರೆದ ಅದ್ವೈತಸಿದ್ಧಿಯೆಂಬ ಖಂಡನಗ್ರಂಥಕ್ಕೆ ಪ್ರತಿಖಂಡನ ಗ್ರಂಥ. |
| ೨) ನ್ಯಾಯವಿಲಾಸ | ನ್ಯಾಯಮಂಜರಿಯ ಟಿಪ್ಪಣಿ |
| ೩) ತಾರತಮ್ಯಸ್ತೋತ್ರ | |
| ೪) ೧೬ ಅಷ್ಟಕಗಳು | |

ಇದೇ ವಂಶದಲ್ಲಿಯ ಬಾಬಾಚಾರ್ಯ, ನೃಸಿಂಹಾಚಾರ್ಯರೆಂಬ ಇಬ್ಬರು ದೇಶದಲ್ಲೆಲ್ಲ ಪ್ರಸಿದ್ಧಿಯನ್ನು ಹೊಂದಿದ್ದುದು ಅನೇಕರಿಗೆ ಗೊತ್ತಿದ್ದ ಮಾತಾಗಿದೆ. ಈಗಲೂ ಈ ಮನೆತನದಲ್ಲಿ ಪಾಠಪ್ರವಚನಗಳು ಸಾಗುತ್ತಿವೆ.

## ೧೪ ಅಡವಿಯವರು

(ಶ್ರೀವಿಷ್ಣುತೀರ್ಥರು)

ಇವರು ಐಜಿ ಆಚಾರ್ಯರ ಶಿಷ್ಯರು. ಮೂಲಸ್ಥಳ ಸವಣೂರ ಪ್ರಾಂತದ **ಸಿದ್ಧಾಪುರ**ವೆಂಬೂರು. ಇಲ್ಲಿಯೇ ಇವರ ಜನ

ನವು ಶಾಲಿವಾಹನ ಶಕೆಯ ೧೬೭೪ ನೇ ಈಶ್ವರ ಸಂವತ್ಸರದಲ್ಲಿ ಆಯಿತು. ಇವರ ಹೆಸರು ಜಯತೀರ್ಥಾಚಾರ್ಯರು. ಇವರ ತಂದೆ ಗಳು **ಬಾಳಾಚಾರ್ಯ**ರು. ತಾಯಿಯು **ಭಾಗೀರಥಿಬಾಯಿ**ಯು.

ಅದೇನೋ ಕಾರಣದಿಂದ ಇವರಿಗೆ ಚಿಕ್ಕಂದಿನಲ್ಲಿಯೇ ವಿರಕ್ತಿ ಯುಂಟಾಯಿತು. ಆಗಲೇ ಇವರು ದೇಶಾಂತರಕ್ಕೆ ಹೊರಡುವು ದೆಂದು ಹೊರಟರು. ಆದರೆ ಅವರಿಗೆ ದಾರಿಯಲ್ಲಿ ಒಂದು ಸರ್ಪವು ಅಡ್ಡಬಂದಿತು. ಇದು ಅಪಶಕುನವೆಂದರಿದು ಜಯತೀರ್ಥಾಚಾ ರ್ಯರು ದೇಶಾಂತರಕ್ಕೆ ಹೊರಡುವುದನ್ನು ನಿಲ್ಲಿಸಿ ಪಾಠಪ್ರವಚನಾ ದಿಗಳಿಂದ ಸಂಚಾರದಲ್ಲಿರಬೇಕೆಂದು ಮನಸುಮಾಡಿ ಹೊರಟರು. **ವೊರಬ** ಮನೆತನದ ಮೂಲಪುರುಷರಾದ **ರಾಮಾಚಾರ್ಯ**ರೆಂಬ ವರು ಧಾರವಾಡದಲ್ಲಿದ್ದರು. ಇವರು ಜಯತೀರ್ಥಾಚಾರ್ಯರ ಶಿಷ್ಯ ತ್ವವನ್ನು ವಹಿಸಿ ಅವರನ್ನು ತಮ್ಮೂರಲ್ಲಿ ಕೆಲದಿನ ಇಟ್ಟುಕೊಂಡು ಅವರಿಂದ ಪಾಠಪ್ರವಚನಾದಿಗಳನ್ನು ಮಾಡಿಸಿದರು.

ಕೆಲ ಕಾಲದ ತರುವಾಯ ಇವರು ಮಲಾಪಹಾರೀ ತೀರದ ಮುನವಳ್ಳಿಯೆಂಬಲ್ಲಿಗೆ ಬಂದು ನಿಂತರು. ಇಲ್ಲಿ ಇವರ ಸುಧಾಪಾ ಠಕ್ಕೆ ಆರಂಭವಾಯಿತು. ಸುಧಾಪ್ರವಚನವನ್ನು ೧೨ ಸಾರೆ ಮಾಡಿ ಮುಗಿಸಿದ್ದಾಯಿತು.

ಇಲ್ಲಿಯ ಅವರ ದಿನಕ್ರಮವು ಕೆಳಗಿನಂತಿತ್ತು. ೫ ಗಳಿಗೆ ರಾತ್ರಿಯಿರುವಾಗ ನದಿಯಲ್ಲಿ ಸ್ನಾನ, ನಿತ್ಯಾಹ್ನಿಕ, ೧೬ ಸರ್ಗ ಮಧ್ವ ವಿಜಯ ಪಾರಾಯಣ, ಬಳಿಕ ಪಾಠಪ್ರವಚನ, ಆ ಮೇಲೆ ಮಧುಕರ ವೃತ್ತಿಯಿಂದ ಅನ್ನಯಾಚನೆ, ಶಿಷ್ಯರಿಂದೊಡಗೂಡಿ ಭೋಜನ, ಮತ್ತೆ ಪಾಠಪ್ರವಚನ. ಇವರಂತೆ ನಾಲ್ಕೂ ಆಶ್ರಮಗಳನ್ನು ಸರಿ ಯಾಗಿ ಉಪಭೋಗಿಸಿದವರು ಸಿಗುವುದು ಅಪರೂಪ. ಇವರು ತಮ್ಮ ವಯಸ್ಸಿನ ೪೫ ನೇ ವರುಷದ ಸುಮಾರಿಗೆ ಯತ್ಯಾಶ್ರಮವನ್ನು ಹೊಂದಿದರು. ಯತ್ಯಾಶ್ರಮದ ಹೆಸರೇ **ವಿಷ್ಣುತೀರ್ಥ**ರು. ಯತ್ಯಾ ಶ್ರಮವು ಶ್ರೀಮದುತ್ತರಾದಿ ಮಠದ ಶ್ರೀಸತ್ಯವರತೀರ್ಥರಿಂದಾಯಿತು.

ಯತಿಗಳಾದ ಮೇಲೆ ತೀರ್ಥರು ಕೆಲ ದಿನ ಹಾನಗಲ್ಲ ತಾಲೂಕ ಕೂಸನೂರಲ್ಲಿ ಹೋಗಿ ಇದ್ದರು. ಅಲ್ಲಿಂದ ಮುಂದೆ ಮೊಗಲಾಯಿ ಇಲಾಖಾ ಕಿನ್ಹಾಳ ದೇಸಗತಿಯ ಗ್ರಾಮವಾದ **ಮೋದನೂರ** (ಮಾದನೂರ) ಎಂಬಲ್ಲಿ ಬಂದುನಿಂತರು. ಇಲ್ಲಿಯೇ ಇವರ ವೃಂದಾವನವಾಗಿದೆ. ಪ್ರತಿವರ್ಷ ಆರಾಧನೆಯು ವಿಜೃಂಭಣೆಯಿಂದ ನಡೆಯುತ್ತಿದೆ. ಇವರು ವಾನಪ್ರಸ್ಥವನ್ನು ಸ್ವೀಕರಿಸಿದಾಗ ೧೨ ವರ್ಷ ಅಡವಿಯಲ್ಲಿಯೇ ವಾಸವಾಗಿದ್ದುದರಿಂದ ಇವರಿಗೆ **"ಅಡವಿ"** ಎಂಬ ಉಪನಾಮವು ಬಂದಿದೆ. ಇವರ ವಂಶಸ್ಥರು ಇನ್ನೂ ಮಾದನೂರಲ್ಲಿಯೂ ಕೂಸನೂರಲ್ಲಿಯೂ ಧಾರವಾಡದಲ್ಲಿಯೂ ಇದ್ದಾರೆ.

ಇವರ ಮುಖ್ಯ ಶಿಷ್ಯರು

೧) ರಾಮಾಚಾರ್ಯ ಮೊರಬ
೨) ಬಾಳಾಚಾರ್ಯ ಟೊಣಪಿ
೩) ವೆಂಕಟಾಚಾರ್ಯ ಕೌಲಗಿ
೪) ಅಣ್ಣಯ್ಯಾಚಾರ್ಯ ಅಣ್ಣೀಗೇರಿ

ಇವರು ಬರೆದ ಗ್ರಂಥಗಳು

೧) ಸಾರೋದ್ಧಾರ (ಭಾಗವತ) — ಶ್ರೀಮದ್ಭಾಗವತದಲ್ಲಿಯ ಎಲ್ಲ ವಿಷಯುಗಳನ್ನು ಸಾರಾಂಶರೂಪದಲ್ಲಿ ತಂದು ಟಿಪ್ಪಣೆಯನ್ನು ಬರೆದಿದ್ದಾರೆ.

೨) ಸುಧಾಟಿಪ್ಪಣಿ

೩) ಅಧ್ಯಾತ್ಮರಸರಂಜನೀ

## ೧೫ ಶ್ರೀಮುಷ್ಣದ ಆಚಾರ್ಯರ ಮನೆತನದ ಚರಿತ್ರೆ

ಈ ಮನೆತನದವರು ಹೈದರಾಬಾದ ಇಲಾಖೆಯ ಜೇಟಿಯೆಂಬ ಹಳ್ಳಿಯ ೮-೧೦ ಸಾವಿರ ರೂಪಾಯಿಗಳ ಜಹಾಗೀರದಾರರು. ಇವರೊಳಗಿನ ಪ್ರಸಿದ್ಧ ಪುರುಷರು **ನರಸಿಂಹಾಚಾರ್ಯ**ರು. ಇವರ ಕಾಲಕ್ಕೆ ಅಣ್ಣತಮ್ಮಂದಿರಲ್ಲಿ ಒಡಕುಹುಟ್ಟಿ ಇವರು ವಿಭಾಗವಾದರು. ಕೆಲವು ದಿನ ಮಾತ್ರ ಇಲ್ಲಿಯೇ ನಿಂತು ಆ ಮೇಲೆ ಆಚಾರ್ಯರು

ಶ್ರೀಮುಷ್ಣಕ್ಕೆ ಹೋದಂತೆ ತಿಳಿಯುತ್ತದೆ. ಶ್ರೀಮುಷ್ಣವು ದೊಡ್ಡ ಕ್ಷೇತ್ರವದೆ. ಕುಂಭಘೋಣೆಗೆ ಸಮೀಪದಲ್ಲಿದೆ. ಮಂಜೇಕೊಪ್ಪ ಜಿಲ್ಲಾ ಚಿದಂಬರಮ್ ತಾಲೂಕಿಗೆ ಸೇರಿದೆ. ಅಲ್ಲಿದ್ದ **ದಂಡತೀರ್ಥ**ವೆಂಬಲ್ಲಿ ಆಚಾರ್ಯರಿಗೆ ಸರ್ವಜ್ಞರಾಯರು ಪ್ರತ್ಯಕ್ಷರಾದರೆಂದು ಐತಿಹ್ಯವುಂಟು. ಅಲ್ಲಿಂದ ಮುಂದೆ ಕೆಲ ಕಾಲದ ತರುವಾಯ ಆಚಾರ್ಯರು ಶ್ರೀರಂಗಕ್ಕೆ ಹೋದರು. ಆ ಕಾವೇರಿ ತೀರದಲ್ಲಿಯೇ ಇವರ ಪಾಠಪ್ರವಚನಕ್ಕೆ ಭರಭರಾಟಿಯು ಬಂದಿತು. ಇವರಿಗೆ ಅಲ್ಲಿ ಬಹು ಜನ ಶಿಷ್ಯರಾದರು. ದಕ್ಷಿಣದೇಶದಲ್ಲಿ **ಆಚಾರಪ್ರವರ್ತಕ**ರೆಂಬ ಹೆಸರನ್ನೇ ಇವರು ಪಡೆದರು. ಅಲ್ಲಿರುವಾಗಲೇ ಆಚಾರ್ಯರಿಗೆ **ಗಂಗಮ್ಮ**ನೆಂಬ ಜಹಾಗೀರದಾರಳಿಂದ ಒಂದು ದೊಡ್ಡ ಭೂದಾನವು ದೊರೆತಂತೆ ತಿಳಿದುಬರುತ್ತದೆ.

ಇವರಿಗೆ ಪೂರ್ಣಬೋಧಾಚಾರ್ಯರು, ಗುಹವಾಸೀ ಕೃಷ್ಣಾಚಾರ್ಯರು, ಗೋಪಾಲಾಚಾರ್ಯರು, ಅನಂತಾಚಾರ್ಯರು ಈ ಪ್ರಕಾರ ನಾಲ್ಕು ಮಂದಿ ಮಕ್ಕಳಿದ್ದರು. ಇವರೆಲ್ಲರೂ ವಿದ್ವಾಂಸರಾಗಿಯೂ ವ್ಯಾಖ್ಯಾತೃಗಳಾಗಿಯೂ ಇದ್ದರು. ಆದರೆ ಚಿಕ್ಕ ಮಕ್ಕಳಾದ **ಅನಂತಾಚಾರ್ಯ**ರಿಗೇನೇ ಹಿರಿಯರಿಂದ ಗ್ರಂಥರಚನೆಗೆ ಅಪ್ಪಣೆ ದೊರೆಯಿತು.

## ಅನಂತಾಚಾರ್ಯರ ಗ್ರಂಥಗಳು

| | |
|---|---|
| ೧) ಸುಧಾಟಿಪ್ಪಣಿ ಅನಂತ ಭಟ್ಟೀಯ | ೭) ಮಾಯಾವಾದ ಖಂಡನ ಅನಂತ ಭಟ್ಟೀಯ |
| ೨) ತತ್ವಪ್ರಕಾಶಿಕಾ ,, | ೮) ಪ್ರಪಂಚಮಿಥ್ಯಾತ್ವಾನುಮಾನಖಂಡನ ,, |
| ೩) ತತ್ವಸಂಖ್ಯಾನ ,, | ೯) ವಿಷ್ಣುತತ್ವನಿರ್ಣಯ ,, |
| ೪) ತತ್ವವಿವೇಕ ,, | ೧೦) ಪ್ರಮಾಣಲಕ್ಷಣ ,, |
| ೫) ತತ್ವೋದ್ಯೋತ ,, | ೧೧) ಕಥಾಲಕ್ಷಣ ,, |
| ೬) ಉಪಾಧಿಖಂಡನ ,, | ೧೨) ಕರ್ಮನಿರ್ಣಯ ,, |

ಅನಂತ ಭಟ್ಟೀಯ ಅನಂತ ಭಟ್ಟೀಯ
೧೩) ಐತರೇಯೋಪನಿಷತ್ ,, ೧೪) ಛಾಂದೋಗ್ಯ ,,
೧೫) ಬೃಹದಾರಣ್ಯ ,,

ಇದಲ್ಲದೆ ಇವರು ಇನ್ನೂ ಕೆಲವು ಗ್ರಂಥಗಳನ್ನು ಮಾಡಿದಂತೆ ಉಲ್ಲೇಖವದೆ. ಆದರೆ ಅವುಗಳ ಹೆಸರು ಇನ್ನೂ ಗೊತ್ತಾಗುವದಿಲ್ಲ.

ವಾಸುದೇವಾಚಾರ್ಯರು:– ಇವರು ಪೂರ್ಣಬೋಧಾಚಾರ್ಯರ ಮಕ್ಕಳು. ಇವರೂ ದೊಡ್ಡ ವ್ಯಾಖ್ಯಾತೃಗಳು. ಆರಣಿಯ ಜಹಾಗಿರದಾರರಾದ **ಸ್ವಭಾನುರಾಯ**ರ ಕೂಡ ಪ್ರಸಂಗಮಾಡಿ ಅವರನ್ನು ಇವರು ಸಮಾಧಾನಪಡಿಸಿದಂತೆ ಇತಿಹಾಸವಿದೆ.

ನರಸಿಂಹಾಚಾರ್ಯರ ಬಗ್ಗೆ ಒಂದು ಚಮತ್ಕಾರವಾದ ಕತೆಯು ಕೇಳಿಬರುತ್ತದೆ. ಇವರ ಮನೆಗೆ ಕಳ್ಳರು ಬಂದಾಗ “ಗ್ರಂಥಗಳನ್ನೂ ದೇವರಪೆಟ್ಟಿಗೆಯನ್ನೂ ದ್ವಾದಶಿಯ ಪಾರಣೆಯ ನಿಮಿತ್ತ ಅಡಿಗೆಮಾಡಲು ಬೇಕಾಗುವ ಕೆಲ ಪಾತ್ರೆಗಳನ್ನು ಬಿಟ್ಟು ಎಲ್ಲವನ್ನೂ ತೆಗೆದುಕೊಂಡು ಹೋಗಿರಿ. ಪಾತ್ರೆಗಳನ್ನು ಊಟವಾದನಂತರ ನಿಮ್ಮ ಸ್ಥಳಕ್ಕೆ ಮುಟ್ಟಿಸುತ್ತೇವೆ” ಎಂದು ಆಚಾರ್ಯರು ಹೇಳಿ ಊಟವಾದ ಮೇಲೆ ಅದೇ ಪ್ರಕಾರಕ್ಕೆ ಪಾತ್ರೆಗಳನ್ನು ಕಳ್ಳರ ಕಡೆಗೆ ಕಳುಹಿಬಿಟ್ಟರಂತೆ. ಆಗ ಕಳ್ಳರಿಗೆ ಪಶ್ಚಾತ್ತಾಪವಾಗಿ ಕದ್ದ ಎಲ್ಲ ಪದಾರ್ಥಗಳನ್ನು ತಿರುಗಿ ತಂದುಕೊಟ್ಟರಂತೆ.

## ೧೬ ಕುಂಡಲ ಗಿರಿಯಾಚಾರ್ಯರು

**ಪುಟ್ಟಭರ್ತಿ**ಯೆಂಬ ಪಟ್ಟಣದ ಸಮೀಪದಲ್ಲಿ **ಬೇಲೂರ** ಎಂಬ ಹಳ್ಳಿಯಿದೆ. ಅಲ್ಲಿ **ಕಂಡಿಭಟ್ಟ**ರೆಂಬ ಸದ್ವೈಷ್ಣವ ವಿದ್ವಾಂಸರಿರುತ್ತಿದ್ದರು. ಇವರಿಗೆ ಜಯವೆಂಕಟಾಚಾರ್ಯ, ಕುಂಡಲ ಗಿರಿಯಾಚಾರ್ಯ ಎಂಬಿಬ್ಬರು ಮಕ್ಕಳಿದ್ದರು. ಇವರಲ್ಲಿ ಎರಡನೆಯವರು ಅಷ್ಟೊಂದು ಅಕ್ಷರಸ್ಥರಿರಲಿಲ್ಲ. ಅವರು ಕೇವಲ ತಂದೆಯ ಸೇವೆಯಲ್ಲಿಯೇ ಕಾಲ ಕಳೆಯುತ್ತಿದ್ದರು. ಒಮ್ಮೆ ಇವರು ತಮ್ಮ ಅತ್ತಿಗೆಯ ಕಟುವಚನಗಳಿಂದ ನೊಂದುಕೊಂಡು ಕಾಶಿಗೆ ಹೊರಟುಹೋದರು.

ತಮ್ಮ ವಯಸ್ಸಿನ ೩೦ನೆಯ ವರುಷದಲ್ಲಿಯೂ ಅವರು ಅಲ್ಲಿ ವೇದಾಂತವನ್ನುಳಿದು ಎಲ್ಲ ಶಾಸ್ತ್ರಗಳ ಅಭ್ಯಾಸವನ್ನು ಮಾಡಿ ಮುಗಿಸಿದರು. ಹರಿಗುರುಗಳ ಅನುಗ್ರಹವಾದರೆ ಯಾವುದು ತಾನೆ ಅಸಾಧ್ಯ! **ಭಟ್ಟೋಜಿ ದೀಕ್ಷಿತ**ರೆಂಬ ಘನಪಂಡಿತರು ಇದೇ ಕಾಲಕ್ಕೆ ಕಾಶಿಯಲ್ಲಿದ್ದರು. ಇವರು **ಮನೋರಮಾ** ಎಂಬ ಗ್ರಂಥವನ್ನೂ ಶ್ರೀಮದಾಚಾರ್ಯರು ಮಾಡಿದ ಪ್ರಯೋಗವು ಸರಿಯಾದುದಲ್ಲವೆಂದು ಪ್ರತಿಪಾದಿಸುವ **"ದ್ವೈತಕೌಸ್ತುಭಖಂಡನ"** ವೆಂಬ ಗ್ರಂಥವನ್ನೂ ರಚಿಸಿದ್ದರು. ಇದಕ್ಕೆ ಅವರು ಖಂಡನಾತ್ಮಕವಾಗಿ **"ಭಟ್ಟೋಜೀಕುಟ್ಟನ"** ವೆಂಬಗ್ರಂಥವನ್ನು ಮಾಡಿದರೆಂಬುದಾಗಿ ಆ ಗ್ರಂಥದ ೧ನೆಯ ಶ್ಲೋಕದಿಂದ ತಿಳಿದುಬರುತ್ತದೆ.

ಕೆಲವು ದಿನಗಳ ಮೇಲೆ ಶ್ರೀವ್ಯಾಸರಾಯಸ್ವಾಮಿಗಳ ಮಠದ ಶ್ರೀಲಕ್ಷ್ಮೀನಾರಾಯಣತೀರ್ಥಸ್ವಾಮಿಗಳು ಕಾಶಿಗೆ ದಯಮಾಡಿಸಿದರು. ಅನೇಕ ಸಭೆಗಳಲ್ಲಿ ಆಚಾರ್ಯರ ವಾಕ್‌ಲಹರಿಯನ್ನು ಕಂಡು ಬೆರಗಾಗಿ ಶ್ರೀಗಳು ಇವರಿಗೆ ವೇದಾಂತೋಪದೇಶವನ್ನು ಮಾಡಿದಂತೆ ಆಚಾರ್ಯರ ಒಂದು ಪುಸ್ತಕದ ಮೇಲಿಂದಲೇ ತಿಳಿಯುತ್ತದೆ. ಈ ವರೆಗೂ ಇವರ ವಂಶಜರು ಶ್ರೀವ್ಯಾಸರಾಯ ಮಠದ ಶಿಷ್ಯರಾಗಿಯೇ ಉಳಿದಿದ್ದಾರೆ. ಅಂಣಂದಿರಾದ ಜಯವೆಂಕಟಾಚಾರ್ಯರು ಮಾತ್ರ ಉತ್ತರಾದಿ ಮಠದ ಶಿಷ್ಯರಾಗಿದ್ದಾರೆ.

ಕಾಶಿಯಿಂದ ಗುರುಗಳೊಡನೆಯೇ ಆಚಾರ್ಯರು ಸಂಚರಿಸುತ್ತಿದ್ದು ಅನೇಕ ವಾದಿಗಳನ್ನು ವಾದದಲ್ಲಿ ಗೆಲ್ಲುತ್ತ ನಡೆದರು. ತಾವು ತಿರುಗಿದ ತೀರ್ಥಗಳ ವರ್ಣನೆಯನ್ನು "ತೀರ್ಥಪ್ರಬಂಧ'' ವೆಂಬ ಗ್ರಂಥದಲ್ಲಿ ಇವರು ಮಾಡಿದ್ದಾರೆ.

ಕಡೆಗೆ ಇವರು ಕಾವೇರಿ ತೀರದ ಶ್ರೀರಂಗದಲ್ಲಿದ್ದುಕೊಂಡು ಪಾಠಪ್ರವಚನಾದಿಗಳಿಂದ ಕಾಲಕಳೆಯುತ್ತಿದ್ದರೆಂದು ತಿಳಿಯುತ್ತದೆ. ಇವರಿಗೆ ಆಗ ನೂರಾರು ಜನ ಶಿಷ್ಯರಾದರು. ಇವರ ಉಪಾಸ್ಯಪ್ರತಿಮೆಯು **ಶ್ರೀಹಯವದನಮೂರ್ತಿ**ಯು. ಇವರು **ಕ್ರಮುಕೂಟ**ವೆಂಬ ತೀರ್ಥದಲ್ಲಿ ಒಂದು ಪ್ರಾಣದೇವರ ಪ್ರತಿಷ್ಠೆಯನ್ನು ಮಾಡಿ

ಪೂಜಾದಿಗಳಿಗೋಸುಗ ಆ ತೀರ್ಥವನ್ನೇ ಅಲ್ಲಿಯ ವಾಸಿಗಳಿಗೆ ದಾನ ಕೊಟ್ಟಂತೆ ಸನದಿನ ಮೇಲಿಂದ ತಿಳಿಯುತ್ತದೆ. ಈ ತೀರ್ಥಸ್ಥರೇ **ಶ್ರೀಮುಷ್ಣಸಂಪ್ರದಾಯ**ದ ಕರ್ತರಾದರು.

ಇವರ ಗ್ರಂಥಗಳು

೧ ಕಂಟಕೋದ್ಧಾರ [ಮಹಾಭಾರತ ೪ ತೀರ್ಥಪ್ರಬಂಧ
ತಾತ್ಪರ್ಯ ನಿರ್ಣಯದ ಟೀಕಾ.
ಕೃಷ್ಣಾಪುರ ಮಠದಲ್ಲಿದೆ.]
೨ ನ್ಯಾಯಾಮೃತಟಿಪ್ಪಣಿ ೫ ಪ್ರಭಾತಪಂಚಕಸ್ತೋತ್ರ
೩ ಭಟ್ಟೋಜೀಕುಟ್ಟನ ೬ ಸುಧಾಟಿಪ್ಪಣಿ ೫ ಅಧಿಕರಣಕ್ಕೆ

ಅನ್ಯ ಮಠಗಳಲ್ಲಿದ್ದ ಗ್ರಂಥಗಳು

೭ ಅದ್ವೈತಾಮೃತಭಂಗ ೮ ತತ್ವಪ್ರಕಾಶಿಕಾ ಟಿಪ್ಪಣಿ

ಇವರ ಮಕ್ಕಳಾದ **ಬ್ರಹ್ಮಾಚಾರ್ಯ**ರು **ಆಹ್ನಿಕಪದ್ಧ**ತಿಯೆಂಬ ಗ್ರಂಥವನ್ನು ಬರೆದಿದ್ದಾರೆ.

## ೧೭ ಚಿಕ್ಕೋಡಿ ಭಗವಂತರಾಯರು

ಇವರು ಬಳ್ಳಾರಿ ಜಿಲ್ಲೆಯವರು. ಇವರು ೧೭೧೫-೧೬ನೇ ಶಕೆಯಲ್ಲಿ ಹುಟ್ಟಿದರು. ಇವರ ತಂದೆಯ ಹೆಸರು **ನಾಗೇಶರಾಯ**ರು. ಇವರು ದಾಸಕೂಟವನ್ನು ವಹಿಸಿದ್ದರು. ಮತ್ತು ವೈಷ್ಣವ ಸಿದ್ಧಾಂತದಲ್ಲಿ ಬಹಳ ನಿಷ್ಠೆಯುಳ್ಳವರಾಗಿದ್ದರು. ಇಂಗ್ಲೀಷ ಸರಕಾರದ ಆಳಿಕೆಯ ಆರಂಭಕ್ಕೆ ಇವರು ರಾಯದುರ್ಗ, ಆದವಾನಿ, ಗುತ್ತಿಗಳ ಮಾಮಲತಿಯನ್ನು ಮಾಡುತ್ತಿದ್ದರು.

ಒಮ್ಮೆ ಇವರಲ್ಲಿಗೆ ದಾಸವರ್ಯ **ಶ್ರೀಜಗನ್ನಾಥರಾಯ**ರು ದಯಮಾಡಿಸಿದರು. ಅವರು ಭಗವಂತರಾಯರ ಮೇಲೆ ಪರಮಾನುಗ್ರಹ ಮಾಡಿದರು. "ಪ್ರಾಣೇಶ ವಿಠ್ಠಲ'' ಎಂಬ ಮುದ್ರಿಕೆಯನ್ನು ಕೊಟ್ಟು ಪದಗಳನ್ನು ರಚಿಸಲು ಅವರಿಗೆ ಹೇಳಿದರು. ಅಲ್ಲದೆ ಇವರ ಫಾರ್ಸೀ ಭಾಷೆಯ ಅಭ್ಯಾಸವನ್ನು ನಿಲ್ಲಿಸಿ ವೈದಿಕಾಭ್ಯಾಸದ ಕಡೆಗೆ ಇವರನ್ನು ಹೊರಳಿಸಿದರು. **ರೊಟ್ಟಿ ವರದಾಚಾರ್ಯ**ರೆಂಬ ಹರಪನಹಳ್ಳಿಯ ವಿದ್ವಾಂಸರು ಬಂದು ಅವರಲ್ಲಿಯೇ ಇರುತ್ತ ಶ್ರೀಮದಾಚಾರ್ಯರ ಗ್ರಂಥಗಳ ಪ್ರವಚನವನ್ನು ರಾಯರಿಗೆ ಮಾಡಿಸಿದರು.

ಬಳಿಕ ನಿಸಬಟ್ಟ ಎಂಬ ಇಂಗ್ಲಿಷ ಅಧಿಕಾರಿಯ ಸಹಾಯದಿಂದ ಸೊಲ್ಲಾಪುರದ ಕಡೆಗೆ ರಾಯರು ಮುನಷಿಯಾದರು. ಆ ಮೇಲೆ ಆ ಸಾಹೇಬರು ಧಾರವಾಡ ಜಿಲ್ಹೆಗೆ ಕಲೆಕ್ಟರನಾಗಿ ಬಂದಾಗ ಇವರು ಚಿಕ್ಕೋಡಿಯ ಮಾಮಲೇದಾರರಾದರು. ಮುಂದೆ ಚಿಕ್ಕೋಡಿ ತಾಲೂಕ ಮದಿಹಳ್ಳಿಯ ಇನಾಮಗ್ರಾಮದ **ಬಾಬಾ** ಎಂಬವರ ತಾಯಿಯು ಗಂಡನೊಡನೆ ಸಹಗಮನ ಹೋದ ಪ್ರಕರ್ಣದಲ್ಲಿ ಇವರು ಕೆಲಸದಿಂದ ಕಡೆಗಾದರು. ಆದರೆ ಮತ್ತೆ ಬೆಳಗಾವಿಯ ಮಾಮಲತಿಯು ಇವರಿಗೆ ಸಿಕ್ಕಿತು. ಈ ಕಾಲಕ್ಕೂ ಇವರಿಗೆ ಚಕ್ರವು ಬಂದಿತು. ಕಡೆಗೆ ಇವರು ಬಳ್ಳಾರಿಯ ಜಿಲ್ಹಾ ಹೂವಿನಹಡಗಲಿಯ ಕಡೆಗೆ ಸರಕಾರೀ ಕೆಲಸದ ಮೇಲೆ ಹೋದರು.

ಈ ಎಲ್ಲ ಐಹಿಕ ಗಲಾಟೆಯು ನಡೆದಿರುವಾಗಲೂ ರಾಯರ ದೇವತಾರ್ಚನ ಪಾಠಪ್ರವಚನಾದಿಗಳು ತಪ್ಪಿದ್ದಿಲ್ಲ. ಮನ್ನಣೆಯು ಸಿಕ್ಕದೆ ಒಬ್ಬ ವಿದ್ವಾಂಸರೂ ಇವರಲ್ಲಿಂದ ತಿರುಗಿಬರುತ್ತಿದ್ದಿಲ್ಲ. ಸರ್ವಜ್ಞ ಶಾಸ್ತ್ರಕ್ಕೆ ಉತ್ತೇಜನವನ್ನೀಯುವುದೇ ಇವರ ಧ್ಯೇಯವಾಗಿಬಿಟ್ಟಿದ್ದಿತೆಂದಮೇಲೆ ಕೇಳುವುದೇನು ?

ಅನೇಕ ಜನ ಶಿಷ್ಯರಿಗೆ ರಾಯರು ಪಾಠವನ್ನು ಹೇಳಿದ್ದಾರೆ. ಇವರ ಮುಖ್ಯ ಶಿಷ್ಯರು:–

೧) ವೆಂಕಟರಾವ ಗೋವೇಕರ
೨) ದ್ಯಾವಪ್ಪ ಬೆಟದೂರ
೩) ಸೀನಪ್ಪ ಮಾನವೀ ಕೌತಾಳ
೪) ಶ್ರೀನಿವಾಸರಾವ
೫) ಕಂದಿ ಸುಬ್ಬರಾಯರು [ವೆಂಕೋಬಾಚಾರ್ಯರ ತಂದೆ]
೬) ರೊಟ್ಟಿ ವೆಂಕಟಾಚಾರ್ಯರು

## ಇವರು ರಚಿಸಿದ ಗ್ರಂಥಗಳು

೧) ತತ್ವಸಂಖ್ಯಾನ ಟಿಪ್ಪಣಿ
೨) ಭಾವಪ್ರದೀಪ ತತ್ವಪ್ರಕಾಶದ ಟಿಪ್ಪಣಿ [ಬೆಳಗಾವಮುದ್ರಣ]
೩) ಬ್ರಹ್ಮಸೂತ್ರಕ್ಕೆ ಪೂರ್ವಪಕ್ಷ, ಸಿದ್ಧಾಂತ, ಯುಕ್ತಿ. ಈ ಗ್ರಂಥವು ಸಂಕ್ಷೇಪವಾಗಿಯೂ ಪ್ರೌಢವಾಗಿಯೂ ಅದೆ.
೪) ಬ್ರಹತಿಸಹಸ್ರ ವೇದದಲ್ಲಿಯ ೧ ಸಾವಿರ ಋಕ್ಕುಗಳಿಗೆ ಅರ್ಥ.

೫) ಭಾಗವತ ೬-೧೨ ಸ್ಕಂದ ವ್ಯಾಖ್ಯಾನ

ಇವರಿಗೆ ಭಾಗವತ ವ್ಯಾಖ್ಯಾನವನ್ನು ಮಾಡಬಾರದೆಂದು ಸೂಚನೆಯಾದಾಗ್ಯೂ ಬಲುಮೆಯಿಂದ ಮಾಡಿದುದಕ್ಕೆ ಇವರ ಕಣ್ಣುಗಳು ಹೋದವೆಂದು ಆಖ್ಯಾಯಿಕೆಯಿದೆ.

ಇವರಿಗೆ ಒಬ್ಬ ಗಂಡುಮಗಳ ಹೆಣ್ಣುಮಕ್ಕಳು ಇದ್ದರು. ಗಂಡು ಮಗನು ಇವರಿರುವಾಗಲೇ ಗತಿಸಿಹೋಗಿದ್ದನು.

ಇವರು ತಮ್ಮ ವಯಸ್ಸಿನ ೬೨-೬೩ನೇ ವರ್ಷ ಶಕೆ ೧೭೭೭-೭೮ ರಲ್ಲಿ ಪರಲೋಕವಾಸಿಗಳಾದರೆಂದು ತಿಳಿಯುತ್ತದೆ.

## ೧೮ ತಿಮ್ಮಣಾಚಾರ್ಯ ಕಾಶೀ

ಇವರು ಅನಂತಪುರ ಜಿಲ್ಹಾ ಪೆನಗುಂಡಿ ಕ್ಷೇತ್ರದವರು. ಇವರ ಅಭ್ಯಾಸವೆಲ್ಲ ಕಾಶಿಯಲ್ಲಿಯೇ ಆಯಿತು. ನ್ಯಾಯಶಾಸ್ತ್ರದ ಅಧ್ಯಯನವನ್ನು ಮಾಡಿ ಮುಗಿಸಿಕೊಂಡು ಮುಂದೆ ವಿಠ್ಠಲೋಪಾಧ್ಯಾಯರೆಂಬ ಘನವಿದ್ವಾಂಸರಲ್ಲಿ ಅಧ್ಯಯನ ಮಾಡಿದರು. ಇವರಿಂದ ಇವರ ಪಾಂಡಿತ್ಯದ ಕೀರ್ತಿಯು ಸರ್ವಶ್ರುತವಾಯಿತು.

ಮೈಸೂರ ಅರಸರಾದ ಶ್ರೀಕೃಷ್ಣರಾಜ ಒಡೆಯರವರು ಇವರ ಪಾಂಡಿತ್ಯಕ್ಕೆ ಬೆರಗಾಗಿ ಇವರಿಗೆ ತಮ್ಮ ಆಸ್ಥಾನದಲ್ಲಿ ಆಶ್ರಯವನ್ನಿತ್ತರು. ಆಗ ಇವರು ಮತತ್ರಯ ಸಭೆಗಳಲ್ಲಿಯೂ ನ್ಯಾಯವೇದಾಂತಗಳಲ್ಲಿ ಜನರನ್ನು ತಲೆದೂಗಿಸಿಬಿಟ್ಟರು. **ಶತಕೋಟಿ ರಾಮಾ ಶಾಸ್ತ್ರಿ**ಗಳೆಂಬ ವಿದ್ವಾಂಸರು ಇವರಿಗೆ ಆಗ ಶರಣುಹೊಡೆದುಬಿಟ್ಟರು. ಇವರ ೨೪೦೦ ಸುಧಾಗ್ರಂಥದ ಮುಖಪಾಠದ ಪರೀಕ್ಷೆಯು ಆಗ ಆಗಿಹೋಯಿತು.

ಶ್ರೀಮದುತ್ತರಾದಿ ಮಠದ ಶ್ರೀಸತ್ಯಧರ್ಮರಲ್ಲಿ ಇವರು ೧೨ ವರ್ಷ ಪರ್ಯಂತ ಸುಧಾವನ್ನು ಅಧ್ಯಯನ ಮಾಡಿ ಮಂಗಳ ಮಾಡಿದಂತೆ ಮಠದ ಬರಿಹಗಳಿಂದ ತಿಳಿಯುತ್ತದೆ.

ಇವರಿಗೆ ಅನೇಕ ಜನ ಶಿಷ್ಯರಿದ್ದರು. ಅವರಲ್ಲಿ ೧ ಕಾವೇರೀ ಪಟ್ಟಣದ ಪದ್ಮನಾಭೀ ಸೀನಪ್ಪಾಚಾರ್ಯರು ೨ ಸೌಧೆ ಶ್ರೀನಿವಾಸಾಚಾರ್ಯರು ಮುಂತಾದವರು ಮುಖ್ಯರು.

ಇವರು ರಚಿಸಿದ ಗ್ರಂಥಗಳು

೧) ತತ್ವಸಂಖ್ಯಾನ    ೩) ಭೇದೋಜ್ಜೀವಿನಿ
೨) ಪ್ರಮಾಣಪದ್ಧತಿ    ೪) ಸುಧಾಟಿಪ್ಪಣಿ

ಚಾಂದ್ರಾಯಣ ವ್ರತಬದ್ಧರಾಗಿ ಯಾಗದೇವತಾರ್ಚನೆಯನ್ನು ಮಾಡುತ್ತಿದ್ದು ೧೨ ವರ್ಷ ದೀಕ್ಷೆಯಿಂದಿದ್ದು ಕಾಶೀಕ್ಷೇತ್ರಕ್ಕೆ ಪಾದಚಾರಿಗಳಾಗಿ ಹೋಗಿ ೩ ವರ್ಷ ತೀರ್ಥಗಳನ್ನು ಸಂಚರಿಸಿ ೮೨ ಮಹಾಮಂತ್ರಗಳನ್ನು ಮಾಡುತ್ತ ಅಗ್ನಿಹೋತ್ರಿಗಳಾಗಿದ್ದರೆಂದು ಇವರ ಖ್ಯಾತಿಯಿದೆ.

ಇವರ ಮೊಮ್ಮಕ್ಕಳಾದ ಪ್ರಾಣೇಶಾಚಾರ್ಯರೆಂಬವರೂ ಮೈಸೂರ ಸಂಸ್ಥಾನದಲ್ಲಿಯೇ ವಿದ್ವಾಂಸರಾಗಿದ್ದಾರೆ. ತಿಮ್ಮಣ್ಣಾಚಾರ್ಯರ ಪರಲೋಕಯಾತ್ರೆಯು ಮೈಸೂರಲ್ಲಿಯೇ ಆಯಿತು.

---

## ಚರಿತ್ರೆಯು ತಿಳಿಯದೆ ರಚಿಸಿದ ಗ್ರಂಥಗಳು ಮಾತ್ರ ತಿಳಿದುದರ ವಿವರ

| | | | |
|---|---|---|---|
| ೧) | ಅಣುಭಾಷ್ಯ ಟಿಪ್ಪಣಿ | | ಶೇಷಾಚಾರ್ಯ ಛಲಾರಿ |
| ೨) | ತಂತ್ರಸಾರ ವ್ಯಾಖ್ಯಾನ | ,, | ,, |
| ೩) | ಷಟ್‌ಪ್ರಶ್ನ | ,, | ,, |
| ೪) | ವಾಯುಸ್ತುತಿ | ,, | ,, |
| ೫) | ಪ್ರಮಾಣಚಂದ್ರಿಕಾ | ,, | ,, |
| ೬) | ತತ್ವಸಂಖ್ಯಾನ | ,, | ,, |
| ೭) | ಮಧ್ವವಿಜಯ | ,, | ,, |
| ೮) | ಷಟ್‌ಪ್ರಶ್ನ | ,, | ನರಸಿಂಹಾಚಾರ್ಯ ಛಲಾರಿ |
| ೯) | ಈಶಾವಾಸ್ಯ | ,, | ,, |
| ೧೦) | ಆಹ್ನಿಕತರಂಗಿಣಿ | | |
| ೧೧) | ತತ್ವಸಂಗ್ರಹ ವ್ಯಾಖ್ಯಾನ | | ಶ್ರೀನಿವಾಸಾಚಾರ್ಯ ಛಲಾರಿ |

| | | |
|---|---|---|
| ೧೨) ಮಹಾಭಾರತ ತಾತ್ಪರ್ಯ ನಿರ್ಣಯ | ನಾರಾಯಣಾಚಾರ್ಯ ಛಲಾರಿ | |
| ೧೩) ಅಧಿಕರಣಾರ್ಥಸಂಗ್ರಹ ಜಾತಿ ನಿಬಂಘ | ,, | |
| ೧೪) ನ್ಯಾಯದೀಪಿಕಾ ಟಿಪ್ಪಣಿ | ಶ್ರೀಸತ್ಯಪ್ರಜ್ಞತೀರ್ಥರು | |
| ೧೫) ಗುರುಗುಣಸ್ತವನ<br>ನಾರಾಯಣೋಪನಿಷತ್ | ಶ್ರೀಧೀರೇಂದ್ರಸ್ವಾಮಿಗಳು | |
| ೧೬) ಗೀತಾವಿವೃತ್ತಿ | ಶ್ರೀವಿದ್ಯಾಧಿರಾಜರು | |
| ೧೭) ಶರ್ಕರಾತತ್ವಪ್ರಕಾಶಿಕಾ | ಶ್ರೀನಿವಾಸಾಚಾರ್ಯ | |
| ೧೮) ಐತರೇಯಭಾಷ್ಯವ್ಯಾಖ್ಯಾನ | ಉಡಪಿ ಶ್ರೀವಿಶ್ವೇಸಿತೀರ್ಥರು | |
| ೧೯) ಸತ್ತತ್ವಮಾಲಾ | ಶ್ರೀಮುಷ್ಣದ ಆಚಾರ್ಯರು | |
| ೨೦) ಪ್ರಮಾಣಪದ್ಧತಿ ಟಿಪ್ಪಣಿ | ವೇದವ್ಯಾಸೀಯ | |
| ೨೧) ತತ್ವಸಂಗ್ರಹ | ಶ್ರೀನಿವಾಸಾಚಾರ್ಯ | |
| ೨೨) ಮಾಂಡೂಕ್ಯೋಪನಿಷತ್ | ಖಂಡಾರ್ಥ | ಶ್ರೀವಿದ್ಯಾಧೀಶ ಶಿಷ್ಯ ನೃಸಿಂಹಕೃತ |
| ೨೩) ಷಟ್ ಪ್ರಶ್ನ | ,, | ,, |
| ೨೪) ಕಾರಕ | ,, | ,, |
| ೨೫) ತತ್ವಸಂಖ್ಯಾನ ಭಾವಚಂದ್ರಿಕಾ | | ,, |

